# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...

ಒಳಗೇನಿದೆ ?




ಚಿತ್ರಗಳು : ಕಮಲಂ ಅರಸು, ಶ್ರೀಹರಿ, ಆಚಾರ್ಯ, ಜಿ. ಎಂ. ಬೊಮ್ನಳ್ಳಿ ರಾಂಚಂದ್ರಕೊಪ್ಪಲು

ಮುಖಪುಟ : ಚಿತ್ರಸಂತೆ ೨೦೧೦ರ ನೋಟಗಳು

ಚಿತ್ರ : ಬಿ. ಮೈತ್ರಿ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ಭಗವದ್ಗೀತೆಯಲ್ಲಿ ಹೆಚ್ಚು ಕಡಿಮೆ ಮೂರನೆಯ ಶತಮಾನದ ಅದರ ಕರ್ತೃವು ಏನೆಲ್ಲಾ ಉಪದೇಶಗೈದಿದ್ದಾನೆ, ಅಲ್ಲವೆ ? ಅದರ ಭಾಗಗಳನ್ನು ಉದ್ಧರಿಸಿ ಉಪನ್ಯಾಸ ಮಾಡಿ ಪರಮಪದದ ಪ್ರಾಪ್ತಿ ಆಗಿಯೇ ಹೋಯಿತೆಂದು ಭ್ರಮಿಸುವ ಚೈತನ್ಯಗಳು ನಮ್ಮಲ್ಲಿ ಹತ್ತಾರು; ಅಭಯ, ಬ್ರಹ್ಮ, ದಿವ್ಯ, ಉಭಯ, ಮುಂತಾದ ಪದಗಳಿಗೆ 'ಚೈತನ್ಯ' ಕೂಡಿಸಿ ಅದ್ಭುತವಾದ ಹೆಸರುಗಳನ್ನು ನಮ್ಮದಾಗಿಸಿಕೊಳ್ಳ ಬಹುದು. ಕೃಷ್ಣನ ಹೆಸರಿನಲ್ಲಿ ಲೇಖಕನ ಉಪದೇಶ ಒಂದು ಹೀಗಿದೆ : ''ಸುಖ-ದುಃಖ, ಲಾಭ-ನಷ್ಟ, ವಿಜಯ-ಸೋಲು ಮುಂತಾದುವನ್ನು ಸಮವೆಂದು ಭಾವಿಸಿ ಯುದ್ಧದಲ್ಲಿ ತೊಡಗು, ನಿನಗೆ ಯಾವ ಪಾಪವೂ ಸುತ್ತಿಕೊಳ್ಳುವುದಿಲ್ಲ'' ಅಭಿವೃದ್ಧಿ ಮತ್ತು ಭಾರತೀಯ ಸಂಸ್ಕೃತಿ ಎಂಬುವನ್ನು ತಮಗೆ ತೋರಿದಂತೆ ವ್ಯಾಖ್ಯಾನಿಸಿಕೊಂಡು ಮಾನ್ಯ ಶ್ರೀ. ಯಡಿಯೂರಪ್ಪನವರು ಸರ್ಕಾರ ನಡೆಸುವುದು ಇದೇ ಉಪದೇಶದ ಪ್ರಭಾವದಿಂದ ಇರಬೇಕು ! ಅವರಿಗಂತೂ ಪಾಪ ಸುತ್ತಿಕೊಳ್ಳುವುದಿಲ್ಲ, ಏಕೆಂದರೆ ಘನವಾಗಿ ಮೆತ್ತಿಕೊಂಡಿರುವ ಪಾಪಗಳು ಇನ್ನೊಂದು ಪಾಪಕ್ಕೆ ಜಾಗ ಕೊಡಲಾರವು. ನೀವೇ ನೋಡಿ, ಮೊನ್ನೆ ಏನಾಯಿತು ಮತ್ತು ಅದಕ್ಕೆ ನಾಲ್ಕು ದಿನಗಳ ಮುಂಚೆ ಏನಾಗಿತ್ತು, ಎಂದು. ಮೊನ್ನೆ ಹಂಪಿ ಉತ್ಸವ, ಅದಕ್ಕೆ ಮುನ್ನ ಪ್ರವಾಹದಿಂದ ತತ್ತರಿಸಿಹೋದ ಊರುಗಳು ಮತ್ತು ಜನ. ಈ ಜನಕ್ಕೆ ಪರಿಹಾರ ನೀಡಲು ಹಣವಿಲ್ಲ, ಇರುವ ಸ್ವಲ್ಪವನ್ನು ಗಟ್ಟಕುಳಗಳು ಲಪಟಾಯಿಸಿಬಿಟ್ಟಿದ್ದಾರೆ. ಆದರೆ ಎಂದೋ ರಾಜ್ಯಭಾರ ನಡೆಸಿ, ಕಡೆಗೆ ಸೋಲನ್ನುಂಡ, ತೆಲುಗು ಮೂಲದ ಕೃಷ್ಣದೇವರಾಯನು ಪಟ್ಟಕ್ಕೆ ಬಂದು ಒಂದಷ್ಟು ನೂರು ವರ್ಷಗಳು ಕಳೆದುವೆಂದು ಪ್ರವಾಹಪೀಡಿತ ಪ್ರದೇಶದ ಪಕ್ಕದ ಹಂಪಿಯಲ್ಲಿ ನೂರಾರು ಕೋಟಿ ರೂಪಾಯಿಗಳನ್ನು ತುಂಗಭದ್ರೆಯಲ್ಲಿ ಚೆಲ್ಲಿ ಕೃತಾರ್ಥವಾಯಿತು ಕರ್ನಾಟಕದ ಘನ ಸರ್ಕಾರ. ಇದು ಅಭಿವೃದ್ಧಿಯೂ ಅಲ್ಲ, ಸಂಸ್ಕೃತಿಯಂತೂ ಅಲ್ಲವೇ ಅಲ್ಲವೆಂದು ಜನರಿಗೆ ತಿಳಿದಿದೆ; ಆದರೆ ಸರ್ಕಾರ ಅದನ್ನು ತಿಳಿಯಲು ಸಿದ್ಧವಿಲ್ಲ. ಇಂದಿನ ಕಳ್ಳಗಣಿಗಾರಿಕೆಯ 'ಪವಿತ್ರ' ಸ್ಥಳದಲ್ಲಿ ಕೃಷ್ಣದೇವರಾಯನ ಕಾಲದಲ್ಲಿ ಚಿನ್ನ-ಬೆಳ್ಳಿಯಂತೆ ಕಾಣುತ್ತಿದ್ದ ಕಲ್ಲುಗಳನ್ನು ಮಾರುಕಟ್ಟೆಯಲ್ಲಿ ಬಳ್ಳ, ಕೊಳಗಗಳಲ್ಲಿ ಅಳೆಯುತ್ತಿದ್ದರಂತೆ. ಮುಖ್ಯಮಂತ್ರಿಗಳು ಅದನ್ನು ಹೇಳಿ ಉತ್ಸವವೆಂಬ ಮುಖವಿಲ್ಲದ ಪಾತಕಕ್ಕೆ ಸಮರ್ಥನೆ ನೀಡಿದ್ದಾರೆ. ರಾಯನು ಕನ್ನಡ ವಿರೋಧಿ ಅಥವಾ ದ್ರೋಹಿಯಾಗಿರಲಿಲ್ಲವೆಂದು ಹಿರಿಯರಾದ ಆತ್ಮೀಯ ಡಾ|| ಚಿದಾನಂದ ಮೂರ್ತಿಯವರು ಸಂಶೋಧಿಸಿ ತಿಳಿಸಿದ್ದಾರೆ. ೧೪-೧೫ನೆಯ ಶತಮಾನಗಳಲ್ಲಿ ರಾಯನಂತಹ ಪ್ರಭುಗಳು ಜನಪರವಾಗಿದ್ದರೇ ಇಲ್ಲವೇ ಎಂಬುದನ್ನು ಶೋಧಿಸುವ ಬದಲು ಅವರು ಭಾಷಾ-ಸ್ನೇಹಿಗಳಾಗಿದ್ದರೆಂದು ಪ್ರತಿಪಾದಿಸುವುದು ಮೋಜಿನ ಪ್ರಸಂಗ. ಆ ಕಾಲದಲ್ಲಿ ಇಂದಿನಂತೆ ಭಾಷಾ ವ್ಯಾಮೋಹ, ಸಾಮರಸ್ಯ, ಯಾಜಮಾನ್ಯ ಇತ್ಯಾದಿಗಳು ಪ್ರಸ್ತುತವಾಗಿರಲಿಲ್ಲ. ತೆಲುಗು ಕಾವ್ಯವೊಂದನ್ನು ರಾಯನು ರಚಿಸಿದ್ದು ಅವನ ಕನ್ನಡ-ಪ್ರೀತಿಗೆ ಚಿರಂತನ ದಾಖಲೆ ಇರಬೇಕು ! ಅದಿರಲಿ, ಯಡಿಯೂರಪ್ಪನವರು ಕರ್ನಾಟಕ ಸಾಮ್ರಾಜ್ಯದ ಶ್ರೇಯಸ್ಸನ್ನು ವಿಶ್ವಕ್ಕೆ ಪರಿಚಯಿಸಲು ಹಂಪಿಗೆ ಭಾರತೀಯ ಜನತಾ ಪಕ್ಷದ ಶ್ರೇಷ್ಠ ಕಲಾವಿದೆ ಹೇಮಮಾಲಿನಿಯನ್ನು ಕರೆಸಿದ್ದು ಕೂಡ ಆಕೆಯ ಅಗಾಧ ಕನ್ನಡ ವ್ಯಾಮೋಹದ ಕಾರಣಕ್ಕೇ ಇರಬೇಕು. ಅಂಥದೇ 'ವ್ಯಾಮೋಹ'ವಿದ್ದ ಪರರಾಜ್ಯಗಳ ಬೇರೆ ಕಲಾವಿದರನ್ನೂ ಕರೆಸಲಾಗಿದ್ದಿತಂತೆ. ಕನ್ನಡದ ಡಿಂಡಿಮ ಬಾರಿಸಲು ಈ 'ಪರಮ ಶಿವ'ರೇ ಬೇಕಾಗಿತ್ತು. ಊಳಿಗಮಾನ್ಯ ಸಂಸ್ಕೃತಿಯನ್ನು ವೈಭವೀಕರಿಸುವ ಪದ್ಧತಿಯು ಸಮಕಾಲೀನ ಸಂದರ್ಭದಲ್ಲಿ ಕೀವು ತುಂಬಿದ ಗಾಯವಿದ್ದಂತೆ. ಅದು ಉಲ್ಬಣಗೊಂಡರೆ ನಮ್ಮ ಕಾಲೋ ಕೈಯೋ ಕತ್ತರಿಸಿಕೊಳ್ಳಬೇಕಾದೀತು. ಇದೆಲ್ಲದರ ಹಿನ್ನೆಲೆಯಲ್ಲಿ ಪ್ರವಾಹಪೀಡಿತ ಪ್ರದೇಶದಿಂದ ಬಂದಿರುವ ಸುದ್ದಿ ಇದು : ಸಂತ್ರಸ್ತರಿಗೆ ಪಕ್ಕಾ ಮನೆಗಳನ್ನು ಕಟ್ಟಿಕೊಳ್ಳಲು ಸಹಾಯ ಮಾಡಲು ಸರ್ಕಾರದ ಬೊಕ್ಕಸದಲ್ಲಿ ಸಾಕಷ್ಟು ಹಣವಿಲ್ಲ, ಆದ್ದರಿಂದ ಸದ್ಯಕ್ಕೆ ಕಚ್ಚಾ ಮನೆಗಳನ್ನು ಕಟ್ಟಿಕೊಡಲಾಗುತ್ತದೆ.

– ಇದು ವಿಜಯನಗರ ಸಾಮ್ರಾಜ್ಯವನ್ನು ಕೊಂಡಾಡುವವರ ದೊಡ್ಡ ಸಂಸ್ಕೃತಿ !

* * *

ಜನವರಿಯ ಗಣರಾಜ್ಯ ದಿನದ ಸಂಭ್ರಮದಲ್ಲಿ ನೂರಾರು ''ಪದ್ಮ''ಗಳು ಅರಳಿದುವು. ಯಾವ ಸೂರ್ಯನ ಪ್ರಭಾವವೋ ಏನೋ ಎನ್ನುವ ಉದ್ಗಾರ ಬರಲು ಸಾಕಷ್ಟು ಕಾರಣಗಳಿವೆ. ಸೂರ್ಯ ಮುಳುಗಿದ ನಂತರ ಪದ್ಮವು ಮುಚ್ಚಿಕೊಳ್ಳುತ್ತದೆ, ಆದರೆ ಈ ಪದ್ಮಗಳು ರಾರಾಜಿಸುತ್ತಿರುತ್ತವೆ. ಯಥಾಪ್ರಕಾರ ಕ್ರಿಕೆಟಿಗರು, ಸಿನಿಮಾ ತಾರೆಯರು, ಪದ್ಮಾಲಂಕೃತರಾಗಿದ್ದಾರೆ. ತೊಂಭತ್ತು ವರ್ಷದ ಯುವಕ ಚೇತನದ ವಿದ್ವಾಂಸರಾದ ಶ್ರೀ. ಆರ್. ಕೆ. ಶ್ರೀಕಂಠನ್ ಅಂಥವರ ಹೆಸರನ್ನು ಸೂಚಿಸಲು ನಮ್ಮ ರಾಜ್ಯದ ಹಿಂದಿನ ಮತ್ತು ಇಂದಿನ ಸರ್ಕಾರಗಳಿಗೆ ಹೊಳೆಯಲಿಲ್ಲ, ಯಾವನೋ ಅಬ್ಬೇಪಾರಿಗೆ ಪದ್ಮಶ್ರೀ ಪ್ರಶಸ್ತಿ ನೀಡುವ ರಾಷ್ಟ್ರಾಧ್ಯಕ್ಷರ ಕಣ್ಣಿಗೆ ಸಂಗೀತ ಸಾಮ್ರಾಜ್ಯದ ಅನಭಿಷಿಕ್ತ ಪದ್ಮಪುರುಷ ಗೋಚರವಾಗಲು

(ಬನೇ ಪುಟಕ್ಕೆ)




ಸಂಪುಟ-೧೧ ಸಂಚಿಕೆ - ೮ ಮಾರ್ಚ್ ೨೦೧೦

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೯೭ ಮತ್ತು ೧೯೮, ೧೧ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೮೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
e-mail : navakarnataka@gmail.com
hosathu@gmail.com
URL : www.navakarnataka.com
http://navakarnataka.blogspot.com
http://hosathu.blogspot.com


**ಸಂಪಾದಕೀಯ**

# ನ್ಯಾಯಾಂಗದಲ್ಲಿ ಸ್ವಾಗತಾರ್ಹ ಹೊಸ ಹಾದಿ

ಇತ್ತೀಚೆಗೆ ಪ್ರಕಟವಾದ ಒಂದು ಸುದ್ದಿಯ ಪ್ರಕಾರ ಚೀನಾದ ಸರ್ವೋಚ್ಚ ನ್ಯಾಯಾಲಯದ ಉಪಾಧ್ಯಕ್ಷನಾಗಿದ್ದ ಹುವಾಂಗ್ ಸೊಂಗ್ಬು ಎಂಬ ನ್ಯಾಯಮೂರ್ತಿಯನ್ನು ಆ ದೇಶದ ಸರ್ಕಾರ ಆಜೀವ ಕಾರಾಗೃಹ ಶಿಕ್ಷೆಗೆ ಗುರಿಪಡಿಸಿದೆ. ಅಧಿಕಾರದ ದುರುಪಯೋಗ, ಅಪಾರ ಆಸ್ತಿ ಗಳಿಕೆ, ಅಪ್ರಾಪ್ತ ಹೆಣ್ಣುಮಕ್ಕಳ ಮೇಲೆ ಲೈಂಗಿಕ ಕಿರುಕುಳ, ಲಂಚಕೋರತನ ಇತ್ಯಾದಿಗಳು ಈತನ ಮೇಲಿದ್ದ ಆರೋಪಗಳು. ಚೀನಾ ಕಮ್ಯುನಿಸ್ಟ್ ಪಕ್ಷದ ಸಂಪೂರ್ಣ ಹಿಡಿತದಲ್ಲಿದ್ದ ಅಲ್ಲಿನ ನ್ಯಾಯಾಂಗ ವ್ಯವಸ್ಥೆ ಮಾರುಕಟ್ಟೆ ಆರ್ಥಿಕ ವ್ಯವಸ್ಥೆ, ಜಾಗತೀಕರಣ, ಉದಾರೀಕರಣದ ನೀತಿಗಳಿಗೆ ಪೂರಕವಾಗಿ ಅಲ್ಲಿಯ ಸರ್ಕಾರ ಜಾರಿಗೆ ತಂದ ಸುಧಾರಣೆಗಳಿಂದಾಗಿ ನ್ಯಾಯಾಂಗ ಸ್ವಲ್ಪಮಟ್ಟಿನ ಸ್ವತಂತ್ರತೆ ಪಡೆದಿದ್ದು, ಅದರ ದುರುಪಯೋಗದಿಂದಾಗಿ ಈಗ ಹಳಿ ತಪ್ಪಿದೆಯೆಂದು ಅಲ್ಲಿಯ ಅನೇಕ ಪಂಡಿತರ ಅಭಿಪ್ರಾಯವೆಂದು ವರದಿಯಾಗಿದೆ. ಈ ವಿಚಾರದಲ್ಲಿ ಪೈಪೋಟಿಯೇನಾದರೂ ಇದ್ದರೆ ಭಾರತದ ನ್ಯಾಯಾಂಗದ್ದೇ ಮೇಲುಗೈ ಎನ್ನುವವರ ಸಂಖ್ಯೆ ಬಹಳಷ್ಟಿದೆ. ತೊಂಬತ್ತರ ದಶಕದ ಆದಿಯಲ್ಲೆ ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಗಳು ನ್ಯಾಯಾಂಗದಲ್ಲಿ ಬೃಹದಾಕಾರವಾಗಿ ಬೆಳೆದು ನಿಂತಿದ್ದ ಭ್ರಷ್ಟಾಚಾರದ ಬಗ್ಗೆ ವ್ಯಾಖ್ಯಾನಿಸಿದ್ದನ್ನು ಸ್ಮರಿಸಬಹುದು. ನಂತರ ಜಾರಿಗೆ ಬಂದ ಜಾಗತೀಕರಣ ಮತ್ತು ಉದಾರೀಕರಣದ ಆರ್ಥಿಕ ನೀತಿಗಳು ಶಾಸಕಾಂಗ ಮತ್ತು ಕಾರ್ಯಾಂಗವನ್ನು ಮಾತ್ರವಲ್ಲ ನ್ಯಾಯಾಂಗ ವ್ಯವಸ್ಥೆಯನ್ನೂ ಕಲುಷಿತಗೊಳಿಸಿವೆ ಎಂಬ ಅಭಿಪ್ರಾಯ ಸಾರ್ವತ್ರಿಕವಾಗಿದೆ. ನೊಬೆಲ್ ಪ್ರಶಸ್ತಿ ವಿಜೇತ ಆರ್ಥಿಕ ತಜ್ಞ ಜೋಸೆಫ್ ಸ್ಟಿಗ್ಲಿಟ್ಜ್ ಹೇಳುವಂತೆ ಬಂಡವಾಳಶಾಹಿ ಜಾಗತೀಕರಣವೆಂದರೆ ಸಮಾಜದ ಲಂಚ-ರುಷುವತ್ತೀಕರಣ.

ಉಚ್ಚ ನ್ಯಾಯಾಲಯಗಳ ಮತ್ತು ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳು ಅಧಿಕಾರಗ್ರಹಣ ಮಾಡುವ ಸಂದರ್ಭಗಳಲ್ಲಿ ಭಾರತದ ಸಂವಿಧಾನದ ಹೆಸರಿನಲ್ಲಿ ಶಪಥ ತೆಗೆದುಕೊಳ್ಳುತ್ತಾರೆ, ಸಂವಿಧಾನಬದ್ಧವಾಗಿ ನಡೆದುಕೊಳ್ಳುವುದಾಗಿ ಪ್ರಮಾಣ ಮಾಡುತ್ತಾರೆ. ಅಂದರೆ ಜನರಿಂದ, ಜನತೆಗಾಗಿ ಮತ್ತು ಜನತೆಗೋಸ್ಕರ ಇರುವ ಸಂವಿಧಾನದ ರಕ್ಷಕರೆಂಬ ಭರವಸೆ ಮೂಡಿಸುತ್ತಾರೆ. ಶಾಸಕಾಂಗ ಮತ್ತು ಕಾರ್ಯಾಂಗದ ನಡವಳಿಕೆಗಳು ಸಂವಿಧಾನಾತ್ಮಕವಾಗಿಲ್ಲದಿದ್ದಲ್ಲಿ ಅವುಗಳನ್ನು ಸರಿಪಡಿಸುವ ವಿಶೇಷ ಅಧಿಕಾರ ಉನ್ನತ ನ್ಯಾಯಾಲಯಗಳಿಗಿದೆ. ಜನತೆಯಿಂದ ನೇರವಾಗಿ ಆರಿಸಲ್ಪಡದಿದ್ದರೂ, ಉಚ್ಚ ನ್ಯಾಯಾಲಯಗಳ ಮತ್ತು ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳು ಜನರ ವಿಶೇಷ ಗೌರವಕ್ಕೆ ಪಾತ್ರರು. ಈ ಕಾರಣಗಳಿಂದಾಗಿಯೆ ಇವರಿಗೆ ವಿಶಿಷ್ಟ ಅಧಿಕಾರ ಕೊಡಲಾಗಿದೆ. ಮತ್ತು ಕೆಲವು ಅಧಿಕಾರಗಳನ್ನು ತಮ್ಮ ತೀರ್ಪುಗಳ ಮೂಲಕ ತಾವೇ ದಕ್ಕಿಸಿಕೊಂಡಿದ್ದಾರೆ. ಈ ಅಧಿಕಾರವನ್ನು ಚಲಾಯಿಸಿ ಜನತೆಯ ಹಕ್ಕುಗಳನ್ನು ಎತ್ತಿಹಿಡಿದ ಮತ್ತು ಮೂಲಭೂತ ಹಕ್ಕುಗಳ ವ್ಯಾಪ್ತಿಯನ್ನು ವಿಸ್ತರಿಸಿದ ಅಪೂರ್ವ ತೀರ್ಪುಗಳ ಚರಿತ್ರೆಯಿದೆ.

ಆದರೆ ನ್ಯಾಯಾಂಗದ ಕಳೆದ ಎರಡು ದಶಕಗಳ ಚರಿತ್ರೆಯನ್ನು ಅವಲೋಕಿಸಿದಾಗ ಉನ್ನತ ನ್ಯಾಯಾಲಯಗಳು ಹಾದಿ ತಪ್ಪಿವೆಯೆ ಎಂಬ ಅನುಮಾನ ಹುಟ್ಟುತ್ತದೆ. ಜೊತೆಗೆ ಆತಂಕ, ಅಸಮಾಧಾನ ಮತ್ತು ಆಕ್ರೋಶ ಹುಟ್ಟುತ್ತದೆ. ಜಾಗತೀಕರಣ ಮತ್ತು ಉದಾರೀಕರಣದ ಆರ್ಥಿಕ ನೀತಿಗಳ ಕರಾಳ ಛಾಯೆ ನ್ಯಾಯಾಂಗವನ್ನು ಆವರಿಸಿರುವುದು ಸ್ಪಷ್ಟವಾಗಿ ವೇದ್ಯವಾಗುತ್ತದೆ. ಸಂವಿಧಾನದ ಆಶಯಗಳಿಂದ ದೂರ ಸರಿದಿರುವುದು ಕಾಣುತ್ತದೆ. ದೇಶದಲ್ಲಿ ಬದಲಾಗುತ್ತಿರುವ ಆರ್ಥಿಕ ನೀತಿ, ಜಾಗತೀಕರಣ, ಉದಾರೀಕರಣದ ಪ್ರಕ್ರಿಯೆಗಳನ್ನು ಗಮನದಲ್ಲಿಟ್ಟು ತೀರ್ಪುಗಳನ್ನು ಕೊಡಬೇಕೆಂದು ಸರ್ವೋಚ್ಚ ನ್ಯಾಯಾಲಯವೇ ಅನೇಕ ತೀರ್ಪುಗಳಲ್ಲಿ ಹೇಳಿದೆ. ಅಂದರೆ ಸರ್ಕಾರದ ರೀತಿ-ನೀತಿಗಳು ಸಂವಿಧಾನದ ಆಶಯಗಳಿಗೆ-ಗುರಿಗಳಿಗೆ ವಿರುದ್ಧವಾಗಿದ್ದರೂ ಆ ನೀತಿಗಳೇ ತೀರ್ಪುಗಳಿಗೆ ಆಧಾರವಾಗಬೇಕೆಂದು ನ್ಯಾಯಾಲಯಗಳ ನಿಲುವೆಂದು ಅರ್ಥೈಸಬಹುದು. ಇದೊಂದು ವಿನಾಶಕಾರಿ ಬೆಳವಣಿಗೆಯೆ ಸರಿ. ಈ ಕಾರಣದಿಂದಾಗಿಯೆ ನ್ಯಾಯಾಂಗ ದಿನೇ ದಿನೇ ತನ್ನ ವರ್ಚಸ್ಸನ್ನು ಕಳೆದುಕೊಳ್ಳುತ್ತಿದೆ. ಇತ್ತೀಚೆಗೆ ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳಾದ ಜಿ. ಎಸ್. ಸಿಂಘ್ವಿ ಮತ್ತು ಎ. ಕೆ. ಗಂಗೂಲಿ ಅವರು ತಮ್ಮ ಪ್ರತ್ಯೇಕ ತೀರ್ಪಿನಲ್ಲಿ ಸರ್ವೋಚ್ಚ ನ್ಯಾಯಾಲಯವೇಕೆ ಜಾಗತೀಕರಣ ಮಂತ್ರ ಉಚ್ಚರಿಸಬೇಕೆಂದು ಪ್ರಶ್ನಿಸಿ, ಸಂವಿಧಾನದ ಆಶಯಗಳನ್ನು ಕಡೆಗಣಿಸಿದರೆ ಅದರ ಪರಿಣಾಮ ಘೋರವೆಂದು ಎಚ್ಚರಿಸಿದ್ದಾರೆ.

ಭಾರತದ ಸರ್ವೋಚ್ಚ ನ್ಯಾಯಾಲಯ ಪ್ರಪಂಚದಲ್ಲೇ ಅತಿ ಹೆಚ್ಚಿನ ಅಧಿಕಾರ ಹೊಂದಿದ ನ್ಯಾಯಾಲಯವೆಂದೂ, ಹಾಗೆಯೇ ಯಾರ ಲೆಕ್ಕಕ್ಕೂ ಸಿಗದ ಸಂಸ್ಥೆಯೆಂದೂ ಕರೆಯಲ್ಪಟ್ಟಿದೆ. ಈ ಅಧಿಕಾರ ದುರುಪಯೋಗಗೊಂಡಾಗ ಸಮಾಜದ ಮೇಲೆ ಅದರ ಪರಿಣಾಮ ಮತ್ತು ಹಾನಿ ಅಪಾರ. ಈ ಕಾರಣಗಳಿಂದಾಗಿಯೇ ಉನ್ನತ ನ್ಯಾಯಾಲಯಗಳ ನ್ಯಾಯಮೂರ್ತಿಗಳ ನಡತೆ ಮತ್ತು ನಡವಳಿಕೆಗಳು ಅತ್ಯಂತ ಪಾರದರ್ಶಕವಾಗಿರಬೇಕು. ಎಲ್ಲ ಚಂಚಲತೆ ಮತ್ತು ವ್ಯಾಮೋಹಗಳನ್ನು ಮೆಟ್ಟಿನಿಂತ ಅವಧೂತರಂತಿರಬೇಕೆಂದು ನಿರೀಕ್ಷಿಸುವುದೇನೂ ಪ್ರಮಾದವಲ್ಲ. ಆದರೆ ತಮ್ಮನ್ನು ಯಾರೂ ಪ್ರಶ್ನಿಸುವಂತಿಲ್ಲವೆಂಬ ನಿಲುವು ಬಹುಮಂದಿ ನ್ಯಾಯಮೂರ್ತಿಗಳಲ್ಲಿ, ಇತ್ತೀಚಿನ ವರ್ಷಗಳಲ್ಲಿ ಬೇರೂರುತ್ತಿರುವ ಅಪಾಯಕಾರಿ ಸೂಚನೆಗಳು ಕಾಣಿಸುತ್ತಿವೆ. ರಾಜ್ಯಗಳ ವಿಧಾನ ಸಭೆ, ವಿಧಾನ ಪರಿಷತ್ತುಗಳ ಚುನಾಯಿತ ಸದಸ್ಯರು, ಲೋಕ ಸಭೆಯ ಚುನಾಯಿತ ಸದಸ್ಯರು, ಸರ್ಕಾರಿ ಅಧಿಕಾರಿಗಳು, ನೌಕರರು, ಜಿಲ್ಲಾ ನ್ಯಾಯಾಧೀಶರು ಮತ್ತು ಇತರೆ ಅಧೀನ ನ್ಯಾಯಾಲಯಗಳ ನ್ಯಾಯಾಧೀಶರು ಕಾಲಕಾಲಕ್ಕೆ ತಮ್ಮ ಮತ್ತು ತಮ್ಮ ಕುಟುಂಬದ ಆಸ್ತಿ ವಿವರಣೆಯನ್ನು ಸಲ್ಲಿಸಬೇಕೆಂಬುದು ಇವರಿಗೆಲ್ಲ ಅನ್ವಯವಾಗುವ ಕಾನೂನು ಅಥವಾ ಸೇವಾ ನಿಯಮ. ಆದರೆ ಉಚ್ಚ ನ್ಯಾಯಾಲಯಗಳ ಮತ್ತು ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳಿಗೇಕೆ ಈ ರೀತಿಯ ಸ್ಪಷ್ಟ ನಿರ್ದೇಶನ ಅಥವಾ ಸೇವಾ ನಿಯಮಗಳಿಲ್ಲವೆಂಬುದು ದೊಡ್ಡ ಪ್ರಶ್ನೆ. ಕಾನೂನಿನ ದೃಷ್ಟಿಯಲ್ಲಿ ಎಲ್ಲರೂ ಸಮಾನರು ಎಂಬುದು ನಮ್ಮ ಸಂವಿಧಾನದಲ್ಲಿ ಅಡಕವಾಗಿರುವ ಅಂಶ. ನ್ಯಾಯಾಂಗ ವ್ಯವಸ್ಥೆ ಸಮಾಜ ತನಗೆ ನೀಡಿದ್ದ ಶ್ರೇಷ್ಠ ಸ್ಥಾನವನ್ನು ಉಳಿಸಿಕೊಂಡಿದ್ದರೆ ಈ ಪ್ರಶ್ನೆ ಇನ್ನೂ ಗೌಣವಾಗಿರುತ್ತಿತ್ತೇನೊ. ಆದರೆ ಇತ್ತೀಚಿನ ವರ್ಷಗಳಲ್ಲಿ ಬಹಿರಂಗಗೊಂಡ ಅನೇಕ ಪ್ರಕರಣಗಳು ನ್ಯಾಯಾಂಗ ವ್ಯವಸ್ಥೆಯ ಅಡಿಪಾಯವನ್ನೇ ಅಲ್ಲಾಡಿಸುತ್ತಿವೆ. ಪಂಜಾಬ್ ಮತ್ತು ಹರಿಯಾಣ ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿ ನಿರ್ಮಲ್ ಯಾದವ್ ಪ್ರಕರಣ, ಕರ್ನಾಟಕ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿ ಪಿ. ಡಿ. ದಿನಕರನ್ ಪ್ರಕರಣ, ಅಲಹಾಬಾದ್ ಉಚ್ಚ ನ್ಯಾಯಾಲಯದ ಮುಖ್ಯ ನಾಯಮೂರ್ತಿ ಚಂದ್ರಮೌಳಿ ಕುಮಾರ್ ಪ್ರಸಾದ್

ಪ್ರಕರಣ ನ್ಯಾಯಾಂಗದ ಮೇಲೆ ಜನತೆ ಇಟ್ಟಿದ್ದ ವಿಶ್ವಾಸಕ್ಕೆ ಮತ್ತು ಗೌರವಕ್ಕೆ ಕೊಟ್ಟ ಕೊಡಲಿ ಪೆಟ್ಟುಗಳಾಗಿವೆ. ಎಲ್ಲರನ್ನೂ ಪ್ರಶ್ನಿಸಬಹುದಾದಂತಹ ಅಧಿಕಾರ ಹೊಂದಿರುವ ನ್ಯಾಯಮೂರ್ತಿಗಳ ನಡತೆಯನ್ನು ಪ್ರಶ್ನಿಸುವ ಹಂತ ತಲುಪಿಯಾಗಿದೆ. ಇದೊಂದು ದುರದೃಷ್ಟಕರ ಬೆಳವಣಿಗೆಯಾದರೂ ಪ್ರಗತಿಪರವಾದದ್ದೆಂದು ಸಮಾಧಾನ ಪಡಬಹುದು.

೧೯೯೨ರಲ್ಲಿ ದೆಹಲಿಯಲ್ಲಿ ನಡೆದ ವಿವಿಧ ರಾಜ್ಯಗಳ ಉಚ್ಚ ನ್ಯಾಯಾಲಯಗಳ ಮುಖ್ಯ ನ್ಯಾಯಮೂರ್ತಿಗಳ ಸಮ್ಮೇಳನದಲ್ಲಿ ಎಲ್ಲ ನ್ಯಾಯಮೂರ್ತಿಗಳು ತಮ್ಮ ಮತ್ತು ತಮ್ಮ ಕುಟುಂಬದ ಆಸ್ತಿ ವಿವರಗಳನ್ನು ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಗಳಿಗೆ ಸ್ವಇಚ್ಛೆಯಿಂದ ಸಲ್ಲಿಸಬೇಕೆಂದು ನಿರ್ಣಯವಾದ ನಂತರ, ೧೯೯೭ರಲ್ಲಿ ಸರ್ವೋಚ್ಚ ನ್ಯಾಯಾಲಯದ ಸರ್ವ ನ್ಯಾಯಮೂರ್ತಿಗಳ ಸಭೆಯಲ್ಲಿ ಅದು ಅಂಗೀಕಾರಗೊಂಡು ನ್ಯಾಯಮೂರ್ತಿಗಳು ತಮ್ಮ ಆಸ್ತಿ ವಿವರಣೆಯನ್ನು ಮುಖ್ಯ ನ್ಯಾಯಮೂರ್ತಿಗಳಿಗೆ ಸಲ್ಲಿಸುವುದು ಒಂದು ಸಂಹಿತೆಯಾಗಿ ರೂಪುಗೊಂಡಿತು. ನಂತರ ೧೯೯೯ರಲ್ಲಿ ನಡೆದ ಉಚ್ಚ ನ್ಯಾಯಾಲಯಗಳ ಮುಖ್ಯ ನ್ಯಾಯಮೂರ್ತಿಗಳ ಸಮ್ಮೇಳನದಲ್ಲಿ ಇದನ್ನು ಪುನರುಚ್ಚರಿಸಲಾಯಿತು. ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಗಳಿಗೆ ಸಲ್ಲಿಸಿದ ಆಸ್ತಿ ವಿವರಗಳು ಗೋಪ್ಯವೆಂದು ಇವರೇ ನಿರ್ಧರಿಸಿಬಿಟ್ಟರು ! ಆಸ್ತಿ ವಿವರಣೆ ನೀಡದ ನ್ಯಾಯಮೂರ್ತಿಗಳ ಮೇಲೆ ಏನು ಕ್ರಮ ಜರುಗಿಸಲಾಗುವುದೆಂಬುದಕ್ಕೆ ವಿವರಣೆಯಿಲ್ಲ.

ಸುಭಾಷಚಂದ್ರ ಅಗರ್‌ವಾಲ್ ಎಂಬುವರು ಸರ್ವೋಚ್ಚ ನ್ಯಾಯಾಲಯದ ಸಾರ್ವಜನಿಕ ಮಾಹಿತಿ ಅಧಿಕಾರಿಯವರಿಗೆ ಮಾಹಿತಿ ಹಕ್ಕು ಕಾಯ್ದೆ ೨೦೦೫ರಡಿಯಲ್ಲಿ ಒಂದು ಅರ್ಜಿ ಸಲ್ಲಿಸಿ, ಸರ್ವೋಚ್ಚ ನ್ಯಾಯಾಲಯ ತಾರೀಖು ೦೭-೦೫-೧೯೯೭ರಂದು ತನ್ನ ತುಂಬು ಕೋರ್ಟ್‌ನಲ್ಲಿ ತೆಗೆದುಕೊಂಡ ನಿರ್ಣಯದ ಪ್ರತಿಯನ್ನು ಕೊಡಬೇಕೆಂದೂ ಮತ್ತು ಈ ನಿರ್ಣಯದ ಪ್ರಕಾರ ಉಚ್ಚ ನ್ಯಾಯಾಲಯಗಳ ನ್ಯಾಯಮೂರ್ತಿಗಳು ಸಲ್ಲಿಸಿರುವ ಆಸ್ತಿ ವಿವರಗಳ ಬಗ್ಗೆ ಮಾಹಿತಿ ನೀಡಬೇಕೆಂದೂ ಕೇಳಿಕೊಂಡಿದ್ದರು. ಈ ಒಂದು ಸಾಮಾನ್ಯ ಅರ್ಜಿ ನ್ಯಾಯಾಂಗದಲ್ಲಿ ಬಿರುಗಾಳಿಯನ್ನೇ ಹುಟ್ಟುಹಾಕಿದ್ದು ವಿಷಯದ ಗಂಭೀರತೆಗೆ ಸಾಕ್ಷಿ. ಸಾರ್ವಜನಿಕ ಮಾಹಿತಿ ಅಧಿಕಾರಿ ೦೭-೦೫-೧೯೯೭ರ ನಿರ್ಣಯದ ಪ್ರತಿಯನ್ನು ಒದಗಿಸಿದರೂ ಮಿಕ್ಕ ಮಾಹಿತಿ ಕೊಡದ ಕಾರಣ ಪ್ರಕರಣ ಕೊನೆಗೆ ದೆಹಲಿಯ ಉಚ್ಚ ನ್ಯಾಯಾಲಯವನ್ನು ತಲುಪಿತು. ನ್ಯಾಯಮೂರ್ತಿ ರವೀಂದ್ರ ಭಟ್ ತಮ್ಮ ಐತಿಹಾಸಿಕ ತೀರ್ಪಿನಲ್ಲಿ ಈ ಸಂಬಂಧವಾಗಿ ಅನೇಕ ವಿಷಯಗಳನ್ನು ಚರ್ಚಿಸಿ, ನ್ಯಾಯಮೂರ್ತಿಗಳ ಆಸ್ತಿಯ ವಿವರಣೆಯನ್ನು ಪಡೆಯುವ ಹಕ್ಕು ಅರ್ಜಿದಾರನಿಗಿದೆಯೆಂದು ನಿರ್ಣಯಿಸಿದರು. ಈ ತೀರ್ಪನ್ನು ವಿಭಾಗೀಯ ಪೀಠದಲ್ಲಿ ಪ್ರಶ್ನಿಸುವ ತೀರ್ಮಾನ ತೆಗೆದು ಕೊಂಡದ್ದು ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಗಳೆ. ದೆಹಲಿ ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿ ಅಜಿತ್ ಪ್ರಕಾಶ್ ಷಾ, ವಿಕ್ರಮ್ ಜಿತ್ ಸೇನ್ ಮತ್ತು ಎಸ್. ಮುರಳಿಧರ್ ಅವರನ್ನು ಒಳಗೊಂಡ ನ್ಯಾಯಪೀಠ ೧೨-೧-೨೦೧೦ರಂದು ನ್ಯಾಯಮೂರ್ತಿ ರವೀಂದ್ರ ಭಟ್ ಕೊಟ್ಟ ತೀರ್ಪನ್ನು ಎತ್ತಿಹಿಡಿದಿದೆ. ಇದೊಂದು ಚರಿತ್ರಾರ್ಹ ಬೆಳವಣಿಗೆ; ಏಕೆಂದರೆ ಈ ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯವೇ ಕಟಕಟೆಯಲ್ಲಿ ನಿಂತಿತ್ತು.

ಈ ಹಿನ್ನೆಲೆಯಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿ ಶೈಲೇಂದ್ರ ಕುಮಾರ್, ಪಂಜಾಬ್ ಮತ್ತು ಹರ್ಯಾಣ ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿ ಕಣ್ಣನ್‌ರವರು ಸ್ವಯಂಪ್ರೇರಿತವಾಗಿ ತಮ್ಮ ಆಸ್ತಿಯ ವಿವರಗಳನ್ನು ಸಾರ್ವಜನಿಕರಿಗೆ ಮಾಹಿತಿಯಾಗಿ ಒದಗಿಸಿದ್ದು ಸ್ವಾಗತಾರ್ಹ. ಈಗ ಅನೇಕ ಉಚ್ಚ ನ್ಯಾಯಾಲಯಗಳ ನ್ಯಾಯಮೂರ್ತಿಗಳು ತಮ್ಮ ಆಸ್ತಿ ವಿವರಗಳನ್ನು ಪ್ರಕಟಿಸಿದ್ದಾರೆ. ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳು ತಮ್ಮ ಆಸ್ತಿ ವಿವರಗಳನ್ನು ಪ್ರಕಟಿಸಿದ್ದಾರೆ. ಆದರೆ ಪೂರ್ಣ ಮಾಹಿತಿ ನೀಡಿಲ್ಲವೆಂಬ ಅಪಸ್ವರ ಕೇಳಿಬರುತ್ತಿದೆ. ಅದೇನೇ ಇರಲಿ ದೆಹಲಿ ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿ ರವೀಂದ್ರ ಭಟ್, ಅಜಿತ್ ಪ್ರಕಾಶ್ ಷಾ, ವಿಕ್ರಮಜಿತ್ ಸೇನ್, ಎಸ್. ಮುರಳಿಧರ್‌ರವರು ಕಾನೂನಿನ ಕಣ್ಣಿನಲ್ಲಿ ಎಲ್ಲರೂ ಸಮಾನರು ಎಂಬುದನ್ನು ಎತ್ತಿಹಿಡಿದು ನ್ಯಾಯಾಂಗದ ಭವಿಷ್ಯಕ್ಕೆ ಹೊಸ ಆಸೆಯನ್ನು ಮೂಡಿಸಿದ್ದಾರೆ. ''ಹೊಸತು'' ಇವರಿಗೆ ಮತ್ತು ಅರ್ಜಿದಾರ ಸುಭಾಷ್‌ಚಂದ್ರ ಅಗರ್‌ವಾಲ್‌ಗೆ ಅಭಿನಂದನೆ ಸಲ್ಲಿಸುತ್ತದೆ, ಇದು ಹೊಸ ಮಂಥನಕ್ಕೆ ನಾಂದಿ ಹಾಡಲೆಂದು ಆಶಿಸುತ್ತದೆ.

## ಸಂವಿಧಾನಕ್ಕೆ ಅರವತ್ತು ವರ್ಷ

ನಮ್ಮಲ್ಲಿ ''ಪ್ರಭವಾದಿ ಷಷ್ಟಿ ಸಂವತ್ಸರಾಣಾಂ ಮಧ್ಯೇ...'' ಎಂದು ಪೂಜಾ ವಿಧಿಯ ಭಾಗವಾಗಿ ಸಂಕಲ್ಪದಲ್ಲಿ ''ಬ್ರಾಹ್ಮಣೋತ್ತಮರು'' ಹೇಳಿಕೊಳ್ಳುತ್ತಾರೆ. ಹಾಗೆಂದರೇನೆಂದು ಅವರಿಗೆ ತಿಳಿದಿಲ್ಲದಿರುವುದು ಬೇರೆ ವಿಷಯ. ಪ್ರಭವ-ವಿಭವ ಇತ್ಯಾದಿ ೬೦ ಸಂವತ್ಸರಗಳು ಒಂದು ಚಕ್ರ ಎನ್ನಬಹುದು. (ಅವೆಲ್ಲಾ ನಾರದನು ಮಹಿಳೆಯಾಗಿ, ಅಂದರೆ ಬಹುಶಃ ನಾರದೆಯಾಗಿ, ಪಡೆದ ಮಕ್ಕಳಂತೆ. ಎಷ್ಟು ವರ್ಷಗಳಲ್ಲಿ ಇಂತಹ ಸಮೃದ್ಧ ಫಲ ದೊರೆಯಿತೋ ಗೊತ್ತಿಲ್ಲ) ಒಂದು ದೇಶ ಅಥವಾ ಒಬ್ಬ ವ್ಯಕ್ತಿ ಸಾಮಾನ್ಯವಾಗಿ ಅಷ್ಟು ವರ್ಷಗಳಲ್ಲಿ ಮುಖ್ಯವಾದ ಆಶಯಗಳನ್ನು ಪೂರೈಸಿಕೊಳ್ಳಲು ಸಾಧ್ಯವಾಗಬೇಕೆಂಬ ಆಕಾಂಕ್ಷೆ ಈ ಸಂವತ್ಸರ ಚಕ್ರದಲ್ಲಿರಬಹುದು. (ಆಮೇಲೆ ೬೦ಕ್ಕೆ ನಿವೃತ್ತಿ. ಅವರೆಗೆ ಏನೂ ಸಾಧಿಸಿಲ್ಲದಿದ್ದರೆ ನಂತರ ಸಾಧಿಸುವ ಸಾಧ್ಯತೆ ಕಡಿಮೆ.)

ನಮ್ಮ ದೇಶ ಗಣರಾಜ್ಯವಾದದ್ದು ೧೯೫೦ರ ಜನವರಿ ೨೬ರಂದು. ಹಾಗೆ ಆಗಬೇಕೆಂದು ಸಂವಿಧಾನ ರಚನಾ ಸಭೆ ತೀರ್ಮಾನಿಸಿದ್ದು ಮೂರು ತಿಂಗಳ ಮುಂಚೆ ಮತ್ತು ಸದಸ್ಯರು ಸಂವಿಧಾನಕ್ಕೆ ಸಹಿ ಹಾಕಿದ್ದು ಎರಡು ದಿನಗಳ ಮುಂಚೆ. ಸದಸ್ಯರು ಪ್ರಾಂತೀಯ ಶಾಸನ ಸಭೆಗಳಿಂದ ಆಯ್ಕೆಯಾಗಿದ್ದವರು, ಜನರಿಂದ ನೇರವಾಗಿ ಚುನಾಯಿತರಾಗಿದ್ದವರಲ್ಲ. ಮೂವತ್ತೈದು ತಿಂಗಳಿಗೂ ಹೆಚ್ಚಿನ ಕಾಲ ತೆಗೆದುಕೊಂಡು ಸದಸ್ಯರು ಸಂವಿಧಾನವನ್ನು ಸಿದ್ಧಗೊಳಿಸಿದರು. ಅದು ನಮಗಿಂದು ಮಹತ್ತರವಾದ ಸರ್ವಾಂಗೀಣ ಸಂಹಿತೆ. ಯಾವ ಸಂಹಿತೆಯೂ ಚಿರಂತನವಲ್ಲ. ಮುಂದಿನ ಪೀಳಿಗೆ ಅದನ್ನು ತಿದ್ದಿಕೊಳ್ಳಬಹುದು. ತಿದ್ದಿಕೊಳ್ಳಲು ಅಡಚಣೆ ಉಂಟಾದರೆ ಅವರಿಗೆ ಸರಿದೋರಿದ ಕ್ರಮದಿಂದ ತಿದ್ದಿಕೊಳ್ಳಬೇಕಾಗ ಬಹುದು. ಭಗವದ್ಗೀತೆಯ ಕರ್ತೃವಿಗೆ ಒಂದು ಭ್ರಮೆ ಇತ್ತು, ಅಂದಿನ ''ಕುಲಧರ್ಮಗಳು'' ಶಾಶ್ವತ, ಎಂದು. ಅಂದರೆ,

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



ಚಂದಾ ವಿವರಗಳು

ಬಿಡಿ ಸಂಚಿಕೆ ರೂ. ೧೨/-
ವಾರ್ಷಿಕ ಚಂದಾ ರೂ. ೧೫೦/-
ಮೂರು ವರ್ಷಕ್ಕೆ ರೂ. ೩೫೦/-

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ಅಂದಿನ ಮೌಲ್ಯಗಳು ಸದಾಕಾಲಕ್ಕೂ ಜೀವಂತವಾಗಿರುವಂಥವು, ಎಂದು. ಅದು ಆಗುತ್ತದೋ ಇಲ್ಲವೋ, ಆ ಕರ್ತೃವಿನ ಆಶಯವಂತೂ ಅದಾಗಿತ್ತು. ಅವನ ವರ್ಗದ ಅಥವಾ ಗುಂಪಿನ ಹಿತ ಕಾಯಲು ಆ ಸಂಹಿತೆಯು ಸಮರ್ಥವೆಂದು ಅವನ ಇಂಗಿತ. ಆದರೂ ಅವನಿಗೆ ಆತಂಕವಿದೆ, ಈ ''ಶಾಶ್ವತವಾದ ಜಾತಿಧರ್ಮಗಳು ಮತ್ತು ಕುಲಧರ್ಮಗಳು'' ಉತ್ಪಾಟಿಸಲ್ಪಡಬಹುದು, ಎಂದು. ಕುರುಕ್ಷೇತ್ರದ ಯುದ್ಧ ಅಂತಹ ಉತ್ಪಾಟನೆಗೆ ಸೊಪ್ಪು ಹಾಕಬಹುದೆಂಬುದು ಅವನ ಭಯ. ಆದರೂ ಒಂದು ವಿಪರ್ಯಾಸವಿದೆ : ಜಾತಿಧರ್ಮ-ಕುಲಧರ್ಮಗಳು ನಿಜಕ್ಕೂ ''ಶಾಶ್ವತ'' ಎಂದಾದರೆ ಅವು ಉತ್ಪಾಟಿಸಲ್ಪಡುತ್ತವೆಂಬ ಭೀತಿ ಏಕೆ ?

ಈ ಪ್ರಶ್ನೆ ಮತ್ತು ಅದರ ಹಿನ್ನೆಲೆ ನಮ್ಮ ಸಂವಿಧಾನಕ್ಕೆ ಅನ್ವಯಿಸುತ್ತದೆ. ಹೊಸ ಸಂವಿಧಾನ ರೂಪಿಸಲು ಇಂದು ನೂತನ ಸಂವಿಧಾನ ರಚನಾ ಮಂಡಲಿಯನ್ನು ಜನರು ಚುನಾಯಿಸುತ್ತಾರೆಂದು ಭಾವಿಸೋಣ. ಅದರ ಸದಸ್ಯರು ೧೯೪೮ರಲ್ಲಿ ಆಯ್ಕೆಗೊಂಡ ಸದಸ್ಯರಷ್ಟು ನಿಗರ್ವಿಗಳು, ಮುಕ್ತಮನಸ್ಸಿನವರು, ಉದಾರವಾದಿಗಳು ಆಗಿರುತ್ತಾರೆಂದು ನಿರೀಕ್ಷಿಸಲಾಗದು. ನೂರು ಕೋಟಿಯನ್ನು ಮೀರಿ ಆಸ್ತಿಯನ್ನು 'ಮಾಡಿಕೊಂಡಿರುವವರು' ಮಂಡಲಿಯಲ್ಲಿ ಸ್ಥಾನ ಪಡೆದುಬಿಡುತ್ತಾರೆ. ಅವರು ರಚಿಸುವ ಸಂವಿಧಾನವು ಈಗಿನದಕ್ಕಿಂತಲೂ ಕೆಟ್ಟದಾಗಿರುತ್ತದೆ, ಶೋಷಕರ ಪರವಾಗಿರುತ್ತದೆ. ಈಗ ನಮ್ಮ ಸಂವಿಧಾನದಲ್ಲಿ ಊಳಿಗಮಾನ್ಯ ಮತ್ತು ಬಂಡವಾಳಶಾಹಿ ಪದ್ಧತಿಗಳೆರಡೂ ಪ್ರತಿಫಲಿತವಾಗಿವೆ. ಅಂಬಾನಿ ಹಾಗೂ ಅಮೇರಿಕಾ ಒಂದು ರೀತಿ ತೆರೆಯ ಮರೆಯಲ್ಲಿ ನಿಂತು ತಮಗೆ ಬೇಕಾದ ಅರ್ಥವನ್ನು ನೀಡಲು ಸಂವಿಧಾನವು ತೆರೆದುಕೊಂಡಿದೆ. ಸಂವಿಧಾನದ ಅರ್ಥವೇನೆಂದು ಹೇಳುವುದು ನ್ಯಾಯಾಲಯದ ಹಕ್ಕಾಗಿ ಪರಿಣಮಿಸಿರುವುದು ಇದಕ್ಕೆ ಕಾರಣ. ಗೋಲಕನಾಥ ಮೊಕದ್ದಮೆಯೆಂದು ಪ್ರಸಿದ್ಧವಾದ ತಕರಾರಿನಲ್ಲಿ ನ್ಯಾಯಾಲಯವು ಪಾರ್ಲಿಮೆಂಟಿನ ಹಕ್ಕುಗಳ ಪರಿಧಿಯನ್ನು ಪ್ರಶ್ನಿಸಿತ್ತು. ಆಗ ಶ್ರೀ. ನಾಥಪೈ ಆ ತೀರ್ಪನ್ನು ವಿರೋಧಿಸುವ ರೀತಿಯಲ್ಲಿ ಪಾರ್ಲಿಮೆಂಟಿನ ಮುಂದೆ ಒಂದು ನಿರ್ಣಯ ಮಂಡಿಸಿದ್ದರು. ಅದು ಪೂರ್ಣವಾಗಿ ಚರ್ಚೆಯಾಗಲಿಲ್ಲ. ನಂತರ ಬಂದಿದ್ದು ಕೇಶವಾನಂದ ಭಾರತಿ ಮೊಕದ್ದಮೆಯ ತೀರ್ಪು. ಸಂವಿಧಾನದ ''ಮೂಲ ಆಶಯಗಳನ್ನು ಪಾರ್ಲಿಮೆಂಟ್ ತಿದ್ದುಪಡಿ ಮಾಡುವಂತಿಲ್ಲ'' ಎಂದು ಆ ತೀರ್ಪು ಘೋಷಿಸಿತು. ''ಮೂಲ ಆಶಯಗಳು ಯಾವುವು'' ಎಂಬುದನ್ನು ಗುರುತಿಸುವುದು ಸಹ ತನ್ನ ಕಾರ್ಯವೆಂದು ನ್ಯಾಯಾಲಯ ಬಗೆದಿದೆ. ಉದಾಹರಣೆಗೆ, ಆಸ್ತಿಯನ್ನು ಹೊಂದುವ ಮೂಲಭೂತ ಹಕ್ಕು ನಮ್ಮ ದೇಶದ ನಾಗರಿಕರಿಗಿದೆ. ಆದರೆ 'ಆಸ್ತಿ' ಎಂದರೆ ಯಾವುದು ಮತ್ತು ಎಷ್ಟು? ಇತರರನ್ನು ತನ್ನ ಅಧೀನದಲ್ಲಿರಿಸಿಕೊಳ್ಳುವ ಶಕ್ತಿ ಕೊಡುವ ಆಸ್ತಿಯನ್ನು ಖಾಸಗಿಯಾಗಿ ಹೊಂದಿರಬಹುದೆ ? ೧೯೭೦ರ ದಶಕದಲ್ಲಿ ಇದು ವಿಪುಲವಾಗಿ ಚರ್ಚೆಗೆ ಬಂದಿತ್ತು. ಭಾರತ ಕಮ್ಯುನಿಸ್ಟ್ ಪಕ್ಷದ ಎಸ್. ಎ. ಡಾಂಗೆ ಒಮ್ಮೆ ಹೇಳಿದ್ದರು, ''ಇದೇನು ಸಂವಿಧಾನ ಮತ್ತು ನ್ಯಾಯಾಲಯ ! ನ್ಯಾಯಮೂರ್ತಿಗಳ ಮತದಾನದಿಂದ ಇಡೀ ದೇಶದ ಕಾನೂನು ನಿಗದಿಯಾಗಬೇಕೆ ? ಖಾಸಗಿ ಆಸ್ತಿಯ ವಿಷಯದಲ್ಲಿ ಏಳು ಮತ ಪರವಾಗಿ, ಆರು ಮತ ವಿರೋಧವಾಗಿ; ಆದ್ದರಿಂದ ಖಾಸಗಿ ಆಸ್ತಿ ಊರ್ಜಿತ ! ಸಂವಿಧಾನವನ್ನು ತೆಗೆದುಕೊಂಡು ಹೋಗಿ ಸುಬ್ಬರಾಯರ ತಲೆಯ ಮೇಲೆ ಹಾಕಿ'', ಎಂದು. ಅಂದರೆ, ನ್ಯಾಯಾಲಯವು ಒಂದು ರೀತಿ ಪಾರ್ಲಿಮೆಂಟಿನ ಸ್ಥಾನವನ್ನು ಪಲ್ಲಟಗೊಳಿಸಿದೆ. ಜನರ ಪ್ರತಿನಿಧಿಗಳ ಬದಲು ಏಳು ನ್ಯಾಯಮೂರ್ತಿಗಳು ಸಂವಿಧಾನವನ್ನು ಅರ್ಥೈಸಿ ಸಮಾಜವನ್ನು ನಿಯಂತ್ರಿಸುವ ಪರಿಸ್ಥಿತಿ ಉದ್ಭವಿಸಿದೆ. ನಾಥ ಪೈ ವಿರೋಧಿಸಿದ್ದುದು ಅದನ್ನೇ. ಕಾಲವು ಬದಲಾದಂತೆ ಸಂವಿಧಾನದ ''ಅರ್ಥ'' ಬದಲಾಗಬಹುದು, ಆದರೆ ಅದರ ಆಶಯಗಳು ತಿರುಗುಮುರುಗಾದರೆ ಸಂವಿಧಾನವನ್ನು ನಿರಾಕರಿಸಬೇಕಾಗುತ್ತದೆ. ಹಾಗಾಗದಿರುವಂತೆ ನೋಡಿಕೊಳ್ಳುವುದು ಪ್ರಜಾಪ್ರಭುತ್ವದ ಎಲ್ಲ ಅಂಗಗಳೂ ಏಕಪ್ರಕಾರವಾಗಿ ನಿರ್ವಹಿಸುವ ಜವಾಬ್ದಾರಿಯಾಗಿರುತ್ತದೆ.

ಆಯಾ ಕಾಲದಲ್ಲಿ ಸಂವಿಧಾನದ 'ಅರ್ಥ'ವೇನೆಂಬುದು 'ಚರಿತ್ರೆಯ ನಿರ್ಮಾಪಕರು ಯಾರು' ಎಂಬ ಪ್ರಶ್ನೆ ಇದ್ದಂತೆ. ಯಾರೋ ಒಬ್ಬ ಧೀಮಂತ ನಾಯಕನ ಇಚ್ಛೆ ಅಥವಾ ಆಣತಿಯಂತೆ ಚರಿತ್ರೆ ರೂಪುಗೊಳ್ಳುವುದಿಲ್ಲ; ಜನರ ನಾಡಿಮಿಡಿತದ ಪ್ರಕಾರ ಅದು ಜೀವ ತಾಳುತ್ತದೆ. ಅಂತೆಯೇ, ಸಂವಿಧಾನದ 'ಅರ್ಥ'ವನ್ನು ಒಬ್ಬ ಧೀಮಂತ ನ್ಯಾಯಾಧೀಶ ತೀರ್ಮಾನಿಸುವುದಲ್ಲ, ಅದನ್ನು ಜನತೆಯು ತೀರ್ಮಾನಿಸುತ್ತದೆ. ಪಾರ್ಲಿಮೆಂಟಿನ ಕರ್ತವ್ಯಗಳನ್ನು ನ್ಯಾಯಾಂಗವು ತನ್ನ ಮೇಲೆ ಆರೋಪಿಸಿಕೊಂಡರೆ ಅಪರಾಧದಲ್ಲಿ ಎರಡು ಅಂಗಗಳೂ ಸಮಾನ ಭಾಗಿಗಳು. 'ಅವರು ಸರಿಯಾಗಿ ಮಾಡದ್ದನ್ನು ನಾನು ಮಾಡಿದ್ದೇನೆ' ಎಂದು ಹೇಳುವ ಅಹಂಕಾರ ಯಾವ ಅಂಗಕ್ಕೂ ಯೋಗ್ಯವಲ್ಲ. ಬರ್ಟ್ರಂಡ್ ರಸೆಲ್‌ನನ್ನು ಯಾರೋ ಒಮ್ಮೆ ಕೇಳಿದ್ದರು : ''ಪ್ರಜಾಪ್ರಭುತ್ವವು ಯಶಸ್ವಿಯಾದ ವ್ಯವಸ್ಥೆ ಎನಿಸುತ್ತದೆಯೇ ನಿಮಗೆ ?'' ಅದಕ್ಕಾತನ ಉತ್ತರ: ''ಹೇಗೆ ಹೇಳಲಿ, ಅದನ್ನೆಲ್ಲಿ ಪ್ರಯೋಗಿಸಿ ನೋಡಲಾಗಿದೆ ?'' ಅಂದರೆ ನಿರಂತರ ಪ್ರಯೋಗ ಮುಂದುವರಿಯುತ್ತಿರುತ್ತದೆ. ಸ್ಥಗಿತವಲ್ಲದ ಸಮಾಜದಲ್ಲಿ ಸಂವಿಧಾನವೂ ಸ್ಥಗಿತಾರ್ಥ ಹೊಂದಲಾರದು. ಅದನ್ನು ನ್ಯಾಯಾಲಯ ತೀರ್ಮಾನಿಸಬೇಕಾಗಿಲ್ಲ, ಜನತೆಯು ತನ್ನ ಪ್ರತಿನಿಧಿಗಳ ಮೂಲಕ ತೀರ್ಮಾನಿಸಿಕೊಳ್ಳುತ್ತದೆ. ಪಾರ್ಲಿಮೆಂಟಿನ ಸದಸ್ಯರನ್ನು ಭ್ರಷ್ಟರೆಂದು ಮೂದಲಿಸಿ ಕೈತೊಳೆದುಕೊಳ್ಳುವವರು ನ್ಯಾಯಾಲಯಗಳಲ್ಲಿ ಎಷ್ಟು ಮೂಟೆಗಳನ್ನು ಹೇಗೆ ತುಂಬಿಸಿಕೊಳ್ಳಲಾಗುತ್ತಿದೆ ಎಂಬುದನ್ನು ಪರೀಕ್ಷೆಗೆ ಒಡ್ಡಬೇಕು. ಇತ್ತೀಚೆಗೆ ನಿವೃತ್ತ ನ್ಯಾಯಮೂರ್ತಿ ಶ್ರೀ. ಬಿ. ಎನ್. ಶ್ರೀಕೃಷ್ಣ ಬೆಂಗಳೂರಿನಲ್ಲಿ ಒಂದು ಉಪನ್ಯಾಸ ನೀಡುವಾಗ ಹೇಳಿದ್ದು : ''೧೯೭೦ರ ದಶಕದಲ್ಲಿ ಬೊಂಬಾಯಿ ಉಚ್ಚ ನ್ಯಾಯಾಲಯದಲ್ಲಿ ಒಬ್ಬ ನ್ಯಾಯಮೂರ್ತಿಯ ಮುಂದೆ ಯಾವ ಮೊಕದ್ದಮೆ ಹೋದರೂ ಉದ್ಯಮಿಗಳ ಪರ ತೀರ್ಪು ಬರುತ್ತಿರಲಿಲ್ಲ; ಎಲ್ಲಾ ದುಡಿಯುವವರ ಪರವೇ ಇರುತ್ತಿತ್ತು. ನಾನೊಮ್ಮೆ ಉದ್ದಿಮೆದಾರರ ಪರವಾಗಿ ವಕಾಲತ್ತು ವಹಿಸಿ ಅವರ ಮುಂದೆ ವಾದ ಮಂಡಿಸಬೇಕಿತ್ತು. ತೀರ್ಪು ನಮ್ಮ ವಿರುದ್ಧವೇ ಆಗಿರುತ್ತದೆಂಬ ಭಾವನೆ ಇತ್ತು. ನಾನು ಶಂಕರಾಚಾರ್ಯರ ದಾರ್ಶನಿಕ ವಿಚಾರಧಾರೆಯನ್ನು ದೀರ್ಘವಾಗಿ ವಿವರಿಸಿದ್ದುದರಿಂದಲೋ ಏನೋ ಆಕಸ್ಮಿಕವೆಂಬಂತೆ ತೀರ್ಪು ನಮ್ಮ ಪರವಾಗಿಯೇ ಬಂದಿತು.'' ಬಹುಶಃ ಶ್ರೀಕೃಷ್ಣ ಅವರು ನ್ಯಾಯಮೂರ್ತಿ ಪಿ. ಬಿ. ಸಾವಂತರನ್ನು ಮನಸ್ಸಿನಲ್ಲಿಟ್ಟುಕೊಂಡು ಹಾಗೆ ಹೇಳಿದ್ದಿರಬಹುದು. ಯಾರೇ ಆಗಿರಲಿ, ಸಂವಿಧಾನದಲ್ಲಿ ಸೂಚಿತವಾಗಿರುವ ಹಕ್ಕುಗಳನ್ನು ಏಕಪಕ್ಷೀಯವಾಗಿ ದುಡಿಯುವ ಜನರಿಂದ ಕಸಿಯುವ ಪ್ರವೃತ್ತಿಯನ್ನು ಖಂಡಿಸುವುದು ಉಚಿತ. ಜಾಗತೀಕರಣದ ಪಿಡುಗಿನ ಪ್ರಭಾವದಿಂದ ಈಚಿನ ದಿನಗಳಲ್ಲಿ ಇದು ನಡೆದಿದೆ. ಕರ್ನಾಟಕದಲ್ಲಿ ಮುನ್ನೂರು ಲಕ್ಷ ಕೋಟಿ ರೂಪಾಯಿ ಬೆಲೆ ಬಾಳುವಷ್ಟು ಸಾರ್ವಜನಿಕ ಭೂಮಿಯನ್ನು ಖಾಸಗಿಯವರು ಲಪಟಾಯಿಸಿದ್ದಾರೆಂದು ವರದಿಯಾಗಿದೆ. ಈಗಂತೂ ಅದು ರಭಸದಿಂದ ನಡೆಯುತ್ತಿದೆ. ಮುಂದಿನ ಸರ್ಕಾರಗಳಿಗೆ ''ಸರ್ಕಾರದ ಭೂಮಿ'' ಎಂಬುದೇನೂ ಉಳಿದಿರುವುದಿಲ್ಲ. ''ಸಂವಿಧಾನ ರಕ್ಷಕ'' ನ್ಯಾಯಾಲಯವು ಇದನ್ನು ಆಮೂಲಾಗ್ರವಾಗಿ ತನಿಖೆ ನಡೆಸಬೇಕೆಂದು ಸ್ವತಂತ್ರವಾಗಿ ಕಾರ್ಯಾಚರಣೆಯಲ್ಲಿ ತೊಡಗಬಹುದಿತ್ತು, ಆದರೆ ಹಾಗೆ ಮಾಡಿಲ್ಲ. ಹೋಗಲಿ, ಮುಂದೊಂದು ದಿನ ಖಾಸಗಿ ಲೂಟಿಕೋರರಿಂದ ಅದನ್ನು ಹಿಂದಕ್ಕೆ ಪಡೆಯಲು ಸಂವಿಧಾನ ಅಡ್ಡಬರುತ್ತದೆಂದು ಯಾರಾದರೂ ವಾದಿಸಿದರೆ ಸಂವಿಧಾನದ ಗತಿ ಏನಾದೀತು ! ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಗಳ ವಿಶಿಷ್ಟ ಹಕ್ಕುಗಳ ಬಗ್ಗೆ ತೀರ್ಪು ನೀಡುವಾಗೊಮ್ಮೆ ಸರ್ವೋಚ್ಚ ನ್ಯಾಯಾಲಯ ಹೇಳಿತ್ತು, ''ಆಡಳಿತ ನಡೆಸುವ ಹಕ್ಕೆಂಬುದು ದುರಾಡಳಿತ ನಡೆಸಬಹುದೆಂಬ ಹಕ್ಕಲ್ಲ'', ಎಂದು. ಇದು ಸಂವಿಧಾನವು ಅನ್ವಯವಾಗುವ ಎಲ್ಲ ಸನ್ನಿವೇಶಗಳಲ್ಲೂ ಸಂಗತವಾದುದು.

ಅರವತ್ತು ವರ್ಷಗಳ ಅಸ್ತಿತ್ವದಲ್ಲಿ ಸಂವಿಧಾನವು ಸಾಧಿಸಿದ್ದೇನು, ಎಂಬ ಪ್ರಶ್ನೆಗೆ ಅರ್ಥವಿಲ್ಲ; ನಿಜವಾದ ಪ್ರಶ್ನೆ ''ನಾವು ಸಾಧಿಸಿದ್ದೇನು'' ಎಂಬುದು. ಸಮುದಾಯದ ಹಿತವನ್ನು ವರ್ಧಿಸುವಲ್ಲಿ ಯಾವ ಅಡಚಣೆ ಬಂದರೂ ಅದಕ್ಕೆ ಪ್ರತಿರೋಧ ಒಡ್ಡಬೇಕಾದ್ದು ಸಮುದಾಯದ ಕರ್ತವ್ಯ ಮತ್ತು ಹಕ್ಕು. ಸಂವಿಧಾನ ಸಹ ಅಡ್ಡ ಬರಕೂಡದು.

## ಮಹಿಳಾ ದಿನಾಚರಣೆಯ ನೂರರ ನೆನಪು

ದಿನಾಚರಣೆಗಳ ಕಾಲದಲ್ಲಿಂದು ಬದುಕುತ್ತಿದ್ದೇವೆ. ಅಮ್ಮನಿಗೊಂದು, ಅಪ್ಪನಿಗೊಂದು, ಪ್ರೇಮಿಗಳಿಗೊಂದು, ಜಗತ್ತಿನಲ್ಲಿರುವ ಕಾಯಿಲೆಗಳಿಗೆಲ್ಲಾ ಒಂದೊಂದು ದಿನಗಳು. ವರ್ಷದ ಮುನ್ನೂರ್ರವತ್ತು ದಿನವೂ ಆಚರಿಸುವಿರಾದರೆ ದಿನಾಚರಣೆಗಳ ಪಟ್ಟಿಯೇ ಸಿಗುವಾಗ ಇನ್ನು ಮಹಿಳಾ ದಿನದ ಆಚರಣೆಯಲ್ಲೇನು ವಿಶೇಷ ? ಶಾಲೆ, ಕಾಲೇಜು, ಕಚೇರಿ, ಸಾರ್ವಜನಿಕ ರಂಗ, ರಾಜಕೀಯ ಕ್ಷೇತ್ರ – ಎಲ್ಲ ಸ್ಥಳಗಳಲ್ಲೂ ಮಹಿಳೆಯರ ಹೆಸರಿನಲ್ಲಿ ವಿವಿಧ ಸ್ವರೂಪದ ಕಾರ್ಯಕ್ರಮಗಳು ನಡೆಯುತ್ತವೆ. ಸರ್ಕಾರವು ಮಹಿಳೆಯರ ಬಗೆಗಿನ ತನ್ನ ಕಾಳಜಿಯನ್ನು ಭಾಷಣಗಳ ಮೂಲಕ, ವಿವಿಧ ಕಾರ್ಯಕ್ರಮಗಳ ಮೂಲಕ ಪ್ರದರ್ಶಿಸುತ್ತದೆ. ರಾಜ್ಯೋತ್ಸವದಂತೆ ಇಡೀ ಮಾರ್ಚ್ ತಿಂಗಳಲ್ಲಿ ನಡೆಯುವ ಈ ಕಾರ್ಯಕ್ರಮ ಕೆಲವೊಮ್ಮೆ ಮದರ್ಸ್ ಡೇ, ಫಾದರ್ಸ್ ಡೇ, ವ್ಯಾಲಂಟೈನ್ ಡೇಗಳಂತೆ, ಪಾರ್ಟಿ, ಮೋಜಿನ ಅಬ್ಬರದಲ್ಲಿ ಮುಳುಗುತ್ತದೆ. ಮಾರುಕಟ್ಟೆ ಜಗತ್ತಿನಲ್ಲಿ ಮಹಿಳಾ ದಿನ ಪಡೆದುಕೊಂಡ ಸ್ವರೂಪ ಆ ದಿನಾಚರಣೆಯ ಮಹತ್ವದ ಮೂಲವನ್ನೇ ಮರೆಸಿಬಿಟ್ಟಿದೆ. ಸಮೂಹ ಮಾಧ್ಯಮಗಳು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಅಕ್ಷರ ಜಗತ್ತನ್ನೆಲ್ಲಾ ಮಹಿಳಾ ವಿಷಯವಾಗಿ

ಬಿಡುತ್ತವೆ. ವಿದ್ಯುನ್ಮಾನ ಜಗತ್ತಿನಲ್ಲೂ ಸ್ಪರ್ಧೆಗಳು, ಜಾಹೀರಾತುಗಳು, ಧಾರಾವಾಹಿಗಳು, ಮಹಿಳಾಪರ 'ಕಾಳಜಿ'ಯ ಮಹಾಪೂರವನ್ನೇ ಹರಿಸುತ್ತವೆ. ಕಣ್ಣೀರುಗರೆಯುವ ಕಥಾನಾಯಕಿಯರ, ಹೆಣ್ಣಿನ ಬಗ್ಗೆ ರೂಢಮೂಲವಾಗಿರುವ ತಾಳಿ ಭಾಗ್ಯ, ಹರಿಸಿನ ಕುಂಕುಮದ ಮಂತ್ರ ಪಠಿಸುವ ಅದೇ ಹಳಸಲು ಚಿತ್ರಗಳು. ಈ ಎಲ್ಲ ಕಾರಣಗಳಿಂದ ಮಹಿಳಾ ದಿನಾಚರಣೆಯ ಶತಮಾನೋತ್ಸವದ ಇಂದಿನ ಸಂದರ್ಭದಲ್ಲಿ 'ಯಾತಕ್ಕಾಗಿ ಈ ಮಹಿಳಾ ದಿನ ?' ಎಂಬುದು ದೊಡ್ಡ ಪ್ರಶ್ನೆಯಾಗಿಯೇ ನಿಲ್ಲುತ್ತದೆ.

೧೯೦೮ರ ಮಾರ್ಚ್ ೮ರಂದು ನ್ಯೂಯಾರ್ಕ್ ನಗರದಲ್ಲಿ ಒಂದು ಮೆರವಣಿಗೆ. ಆರು ನೂರಕ್ಕೂ ಹೆಚ್ಚಿನ ಮಹಿಳೆಯರು ಘೋಷಣೆಗಳನ್ನು ಕೂಗಿಕೊಂಡು ಬೀದಿಗಿಳಿದರು. ಸಿದ್ಧ ಉಡುಪುಗಳ ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿದ್ದ ಈ ಮಹಿಳೆಯರು ತಮಗೆ ಹೆಚ್ಚಿನ ವೇತನ ಮತ್ತು ಎಂಟು ಗಂಟೆಗಳ ದುಡಿಮೆಯಷ್ಟೇ ಸಾಕು – ಎಂಬ ಬೇಡಿಕೆಗಳೊಡನೆ ಹೋರಾಟ ನಡೆಸಿದ್ದರು. ಈ ಪ್ರತಿಭಟನೆಯಿಂದ ತಕ್ಷಣ ಅವರಿಗೆ ಈ ಸವಲತ್ತುಗಳು ದೊರಕಿತೋ ಇಲ್ಲವೋ ತಿಳಿದಿಲ್ಲ. ಆದರೆ ಇಂದಿನ ಸಂಘಟಿತ ದುಡಿಯುವ ಮಹಿಳೆಯರು ಅನುಭವಿಸುತ್ತಿರುವ ಹಲವಾರು ಸವಲತ್ತುಗಳಿಗೆ ಈ ಪ್ರತಿಭಟನೆ ನಾಂದಿಯಾಯಿತು; ಇಂತಹ ಹಲವಾರು ಪ್ರತಿಭಟನೆಗಳು ಕಾರಣವಾದವು. 'ಗೃಹಲಕ್ಷ್ಮಿಯಾಗಿ ಮನೆಯೊಳಗೇ ಕಂಗೊಳಿಸಬೇಕಾದ' ಮಹಿಳೆಯರು ಬೀದಿಗಿಳಿದ ಈ ಘಟನೆ ಹೊರಜಗತ್ತಿಗೆ ಹಾಸ್ಯಾಸ್ಪದವಾಗಿ ಕಂಡಿರಬಹುದು. ಕೆಲವು ಮಂದಿ ಇದನ್ನು 'ಪೆಟಿಕೋಟ್ ಮುಷ್ಕರ' ಎಂದೂ ಲೇವಡಿ ಮಾಡಿದರು.

ನೂರು ವರ್ಷಗಳ ಹಿಂದೆ ೧೯೧೦ರಲ್ಲಿ ಆಗ್ಗೆ ಹೊಸದಾಗಿ ಸ್ಥಾಪಿತವಾಗಿದ್ದ ಅಂತರರಾಷ್ಟ್ರೀಯ ಸೋಷಿಯಲಿಸ್ಟ್ ಮಹಿಳಾ ಚಳುವಳಿಯ ಎರಡನೇ ಸಮಾವೇಶದಲ್ಲಿ ಅಂದಿನ ಮಹಿಳಾ ಚಳುವಳಿಯ ನಾಯಕಿಯಾಗಿದ್ದ ಜರ್ಮನಿಯ ಕ್ಲಾರಾ ಜೆಟ್‌ಕಿನ್ ೧೯೦೮ರಲ್ಲಿ ನಡೆದ ಈ ಮಹಿಳೆಯರ ಪ್ರತಿಭಟನೆಯ ಚಳುವಳಿಯನ್ನು ಉದಾಹರಿಸಿ ಮಾರ್ಚ್ ೮ರಂದು ಮಹಿಳಾ ದಿನವನ್ನು ಆಚರಿಸಬೇಕೆಂಬ ನಿರ್ಣಯವನ್ನು ಮಂಡಿಸಿದಳು. ಆ ನಿರ್ಣಯವನ್ನು ಆ ವಿಶ್ವ ಸಮ್ಮೇಳನದಲ್ಲಿ ಭಾಗವಹಿಸಿದ್ದ ಎಲ್ಲ ರಾಷ್ಟ್ರಗಳು ಸಂಭ್ರಮದಿಂದ ಸ್ವಾಗತಿಸಿದ್ದವು. ಅಂದಿನಿಂದ ವಿಶ್ವದಲ್ಲೆಲ್ಲೂ ಮಾರ್ಚ್ ೮, ಮಹಿಳಾ ದಿನವಾಗಿ ಆಚರಣೆ ಗೊಳ್ಳುತ್ತಾ ಬರುತ್ತಿದೆ. ಅಷ್ಟೇ ಅಲ್ಲ, ಮಹಿಳೆಯರ ಮತದಾನದ ಹಕ್ಕಿಗಾಗಿ, ತಮ್ಮ ನಾಡುಗಳ ದಾಸ್ಯ ವಿಮೋಚನೆಗಾಗಿ, ದೌರ್ಜನ್ಯ ವಿರೋಧಿ ದಿನವಾಗಿ – ಹತ್ತು ಹಲವಾರು ಬೇಡಿಕೆ ಗಳೊಂದಿಗೆ ಮಹಿಳಾ ದಿನವನ್ನು ಆಚರಿಸಿದ್ದಾರೆ.

ಈ ನೂರು ವರ್ಷಗಳ ಇತಿಹಾಸದಲ್ಲಿ ಮಹಿಳೆಯರ ಸ್ಥಾನಮಾನ, ಸಾಧನೆ, ಗಳಿಕೆಗಳ ಪುನರವಲೋಕನವನ್ನು ಮಾಡಿಕೊಳ್ಳುವ ಸಂದರ್ಭವಾಗಿ ಮಹಿಳಾ ದಿನಾಚರಣೆ ಮಹತ್ವ ಪಡೆಯಬೇಕಿದೆ.

ಮಹಿಳಾ ದಿನ ಹುಟ್ಟಿಕೊಂಡ ಮೂಲಾರ್ಥವನ್ನು ನೆನಪಿಸಿಕೊಳ್ಳದಿದ್ದರೆ, ಅದರ ಆಚರಣೆಯು ಅರ್ಥಹೀನವೆನಿಸುತ್ತದೆ. **ಮಹಿಳೆ ತನ್ನ ಮೇಲಿನ ಎಲ್ಲ ರೀತಿಯ ದೌರ್ಜನ್ಯವನ್ನು ಧಿಕ್ಕರಿಸಿ ಹೋರಾಡುವ ದಿನ ಮಹಿಳಾ ದಿನ. ಈ ರೀತಿ ಹೋರಾಟದಲ್ಲಿ ಭಾಗಿಯಾದ ಅಸಂಖ್ಯ ಸಾಮಾನ್ಯ ಮಹಿಳೆಯರನ್ನು ಚರಿತ್ರೆಯಲ್ಲಿ ದಾಖಲೆ ಮಾಡುವ ದಿನ ಮಹಿಳಾ ದಿನ.** ನಾಗರಿಕತೆಯುದ್ದಕ್ಕೂ ಇಂತಹ ತ್ಯಾಗಮಯಿ ಮಹಿಳೆಯರು ಹೇರಳವಾಗಿ ಸಿಕ್ಕುತ್ತಾರೆ. ಅವರು ಯಾವುದೇ ಒಂದು ಕಾಲ, ದೇಶ, ಭಾಷೆ, ಜಾತಿಗೆ ಸೇರಿದವರಲ್ಲ. ಇಂದಿನ ಹೆಣ್ಣುಮಕ್ಕಳ ಬದುಕು ಅವರ ಅಜ್ಜಿ, ಮುತ್ತಜ್ಜಿಯರ ಬದುಕಿಗಿಂತ ಹಸನಾಗಿದ್ದರೆ, ಅದರ ಹಿಂದೆ ಹಲವಾರು ಹೋರಾಟಗಾರ್ತಿಯರ ತ್ಯಾಗ, ಬಲಿದಾನಗಳು ಕಾರಣ ವಾಗಿರುತ್ತವೆ. ಆ ಎಲ್ಲಾ ಹೋರಾಟದ ಮೊದಲಗಿತ್ತಿಯರಿಗೆ ವಂದಿಸುವ ದಿನ ಈ ಮಹಿಳಾ ದಿನ. ಸಾಮಾನ್ಯವಾಗಿ ತಂದೆ, ಗಂಡ, ಮಕ್ಕಳ ಹೆಸರಿನ ಜೊತೆಯಲ್ಲಿಯೇ ಗುರುತಿಸಲ್ಪಡುವ ಹೆಣ್ಣು, ಅವಳ ಕೌಟುಂಬಿಕ ಪಾತ್ರಗಳಾಚೆಯೂ ಸಾಮಾಜಿಕವಾಗಿ ತನ್ನ ಅಸ್ಮಿತೆಯನ್ನು ಗುರುತಿಸಿಕೊಂಡು, ತನ್ನ ಪ್ರತಿಭೆ, ಸಾಮರ್ಥ್ಯಗಳಿಂದ ಸ್ವತಂತ್ರ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳ ಬೇಕೆಂಬುದನ್ನು ಸ್ಥಾಪಿಸುವ ದಿನ.

ಗಾಯತ್ರಿ. ಎಸ್.




**ನಾ**ನು ಸಣ್ಣವನಿದ್ದಾಗ
ಎಣಿಸುತ್ತಿದ್ದೆ
ಕೋಳಿ ಇಟ್ಟ ಮೊಟ್ಟೆಗಳನ್ನು
ಅವ್ವ ಸುಟ್ಟ ರೊಟ್ಟಿಗಳನ್ನು
ಅಪ್ಪ ಹಿಡಿದು ತಂದ ಮೀನುಗಳನ್ನು
ಜೇಬು ತುಂಬಿದ ಗೋಲಿಗುಂಡುಗಳನ್ನು
ಅಜ್ಜಿ ಹೇಳಿದ ಕಥೆಗಳನ್ನು

ಎಣಿಸುತ್ತಿದ್ದೆ ನಾನು
ಬೆಳ್ಳಕ್ಕಿ ಸಾಲುಗಳನ್ನು
ಗುಬ್ಬಿಯ ಗೂಡುಗಳನ್ನು
ಬಣ್ಣ ಬಣ್ಣದ ಹೂವುಗಳನ್ನು
ರಂಗವಲ್ಲಿಯ ಚುಕ್ಕಿಗಳನ್ನು

ಎಣಿಸುತ್ತಿದ್ದೆ ನಾನು
ಮಿನುಗುವ ನಕ್ಷತ್ರಗಳನ್ನು
ಕಾಮನಬಿಲ್ಲಿನ ಬಣ್ಣಗಳನ್ನು
ಬೆಳದಿಂಗಳ ರಾತ್ರಿಗಳನ್ನು
ಗಡಿಯಾರದ ಮುಳ್ಳುಗಳನ್ನು

ಈಗ,
ಬೆಳೆದು ನಿಂತಿದ್ದೇನೆ
ಈಗಲೂ ಎಣಿಸುತ್ತಿದ್ದೇನೆ ನಾನು
ಸಿಡಿದ ಬಾಂಬಿನ ಸದ್ದುಗಳನ್ನು
ಚೂರು ಚೂರಾದ ಕೈ, ಕಾಲು
ತಲೆ ಬುರುಡೆಗಳನ್ನು
ರಕ್ತದ ಹನಿಗಳನ್ನು
ನನ್ನೆದೆಯ ಬಡಿತಗಳನ್ನು

ಎಣಿಸುತ್ತಿದ್ದೇನೆ
ಕೆಡವಿದ ಗೋಪುರಗಳನ್ನು
ಮನುಷ್ಯನ ನಡುವೆ
ಎದ್ದು ನಿಂತಿರುವ ಅಡ್ಡಗೋಡೆಗಳನ್ನು
ಸುಟ್ಟು ಬೂದಿಯಾದ
ಬಡವರ ಗುಡಿಸಲುಗಳನ್ನು

ಎಣಿಸುತ್ತಿದ್ದೇನೆ ನಾನು
ನೇಣುಗಂಬಗಳಲ್ಲಿ ನೇತಾಡುವ
ಅನ್ನದಾತನ ಹೆಣದ ಸಾಲುಗಳನ್ನು
ಬೀಜ ಗೊಬ್ಬರಕ್ಕಾಗಿ ನಡೆದ
ಬೀದಿ ಮೆರವಣಿಗೆಗಳನ್ನು
ಎದೆ ಸೀಳಿದ ಗುಂಡುಗಳನ್ನು

ಎಣಿಸುತ್ತಿದ್ದೇನೆ
ಗುಳೆ ಹೊಂಟವರ ಗಂಟುಮೂಟೆಗಳನ್ನು
ಖಾಲಿ ಕಣ್ಣುಗಳನ್ನು
ನಡೆದ ಬರಿಗಾಲಿನ
ಹೆಜ್ಜೆ ಗುರುತುಗಳನ್ನು


**ಹುಲಿಕಟ್ಟಿ ಚನ್ನಬಸಪ್ಪ**
ಇ.ಡಬ್ಲ್ಯೂ.ಎಸ್.-೬೦, ಹುಡ್ಕೊ ಬಡಾವಣೆ, ಸಿರುಗುಪ್ಪ - ೫೮೩ ೧೨೧

ಹೇಗೆ ಸಾಧ್ಯ! ಉದಾಹರಣೆಗೆ, ಫರೀದ್ ಜ಼ಕಾರಿಯ ಮತ್ತು ಛತ್ವಾಲ್ ಅಂಥವರನ್ನು ನೋಡಿ. ಇಬ್ಬರೂ ಪ್ರಥಮ ಶ್ರೇಣಿಯ ಧೂರ್ತರೆನ್ನುತ್ತಾರೆ. ಒಬ್ಬ ಅಮೆರಿಕಾದಲ್ಲಿ ನೆಲೆಸಿರುವ 'ಬುದ್ಧಿಜೀವಿ', ಇನ್ನೊಬ್ಬ ಅಲ್ಲೇ ಹೊಟೇಲ್ ಉದ್ಯಮಿ. ಈ ಜ಼ಕಾರಿಯನ ಅಪ್ಪ ರಫ಼ೀಕ್ ಜ಼ಕಾರಿಯ ಮುಂಬೈ ನಿವಾಸಿ, ಕಾಂಗ್ರೆಸ್ ನಾಯಕ, ಮಹಾರಾಷ್ಟ್ರ ಸರ್ಕಾರದ ಮಂತ್ರಿ ಆಗಿದ್ದವನು. ಮಗ ದೊಡ್ಡ ಅರ್ಥಶಾಸ್ತ್ರಜ್ಞ ನಂತೆ, ಅಮೆರಿಕಾದ ಅಧ್ಯಕ್ಷನಿಗೆ ಆಗಾಗ್ಗೆ ಸಲಹೆಗಾರನಂತೆ. ಅಮೆರಿಕಾದ ''ಶ್ರೇಷ್ಠತೆ''ಯನ್ನು ಹೊಗಳಿ ಹೊಗಳಿ ಅವನಿಗೆ ಒಮ್ಮೆ ಉಸಿರುಕಟ್ಟಿತ್ತಂತೆ. 'ಪದ್ಮಶ್ರೀ' ಕರುಣಿಸಲು ಬೇರಿನ್ನೇನು ಅರ್ಹತೆ ಬೇಕು! ನಮ್ಮ ಪ್ರಧಾನಿ ನ್ಯೂಯಾರ್ಕ್‌ಗೆ ಹೋದಾಗ ಆತನೇ ಶ್ರಮವಹಿಸಿ ಸಭೆಗಳನ್ನು ಆಯೋಜಿಸುತ್ತಾನೆಂದು ಅಮೆರಿಕಾದ ಬಲ್ಲ ವಲಯಗಳಿಂದ 'ಹೊಸತು'ಗೆ ತಿಳಿದುಬಂದಿದೆ. ಫ಼ರೀದ್‌ನನ್ನು ಮೀರಿಸುವ ಪದ್ಮವದನದವನು ಛತ್ವಾಲ್. ಅವನ ಮೇಲೆ ಕೇವಲ ನಾಲ್ಕು ಘೋರ ಆಪಾದನೆಗಳಿದ್ದುವಂತೆ, ಅಷ್ಟನ್ನೂ ಸಿ.ಬಿ.ಐ. ತನಿಖೆ ಮಾಡಿದ್ದಿತಂತೆ. ಆ ಕಾರಣದಿಂದಲೇ ದೇಶಬಿಟ್ಟು ಹೋಗಿ ಅಮೆರಿಕಾದಲ್ಲಿ ಹೊಟೇಲ್ ಉದ್ಯಮಿಯಾದನಂತೆ ಛತ್ವಾಲ್. ಇಂಥವರ ಜೊತೆ ತಾವೂ ಪದ್ಮಶ್ರೀ ಮುಂತಾದ ಪುರಸ್ಕಾರಗಳನ್ನು ಪಡೆದ ಮಹಿಳೆಯರು – ಮಹನೀಯರು ಎಷ್ಟು ದಿನ ನಿದ್ದೆ ಮಾಡಲಿಲ್ಲವೋ ಗೊತ್ತಿಲ್ಲ. ಆದರೆ ಮನಮೋಹನ ಸಿಂಗ್ ಸರ್ಕಾರದ ಕಪ್ಪು ಮನಸ್ಸು ಪದ್ಮಗಳಿಂದ ಆವೃತವಾಗಿಲ್ಲವೆಂಬುದು ಖಚಿತ.

* * *

ನರೇಂದ್ರ ಮೋದಿ ಬಹುಮಟ್ಟಿಗೆ ಎಲ್ಲರಿಗೂ ಗೊತ್ತು, ಕೆ. ವಿ. ಥಾಮಸ್ ಸಾಮಾನ್ಯವಾಗಿ ಯಾರಿಗೂ ಗೊತ್ತಿಲ್ಲ. ಆದರೆ ಅವರಿಬ್ಬರಲ್ಲಿ ಒಂದು ಸಾಮ್ಯವಿದೆ. ಕೆಡುಕಿಗೆ ಕಾರಣರೆಂದು ಪರರನ್ನು ಬೆರಳುಮಾಡಿ ತೋರಿಸಿ ಬಯ್ಯುವುದು ಅಂತಹ ಒಂದು ಸಾಮ್ಯ. ನಮ್ಮ ದೇಶದ ಜನರ ಸೊಲ್ಲು ಕುಸಿದಿದೆಯಾದ್ದರಿಂದ ಇಂಥವರು ಬೈದಾಡಿಕೊಂಡಾಗ ಅದು ತಮಗೆ ಸಂಬಂಧಿಸಿಲ್ಲವೆಂಬಂತೆ ನಡೆದುಕೊಳ್ಳುತ್ತಾರೆ; ಇಲ್ಲದಿದ್ದರೆ ಇಬ್ಬರನ್ನೂ ಹಿಡಿದು ತದುಕುತ್ತಿದ್ದರೇನೋ! ವಿಷಯ ಎಲ್ಲರಿಗೂ ತಿಳಿದದ್ದು, ಏಕೆಂದರೆ ಅದು ಅವರ ಅನುಭವದ ಅಂಶ. ಆಹಾರ ಪದಾರ್ಥಗಳ ಏರಿದ ಬೆಲೆಗೆ ಸಂಬಂಧಿಸಿದ್ದು. ರಾಜಭವನಗಳಲ್ಲಿ ಬೆಲೆಯೇರಿಕೆಯ ಅರಿವು ಉಂಟಾಗಲಾರದು, ಸರಿ; ಆದರೆ ಮಂತ್ರಿಗಳಿಗೂ ಅದು ತಟ್ಟುವುದಿಲ್ಲವೆ? ತಟ್ಟಿದೆಯೆಂದು ಹೇಳಿಕೊಳ್ಳದಿದ್ದರೆ ಜನರು ಇವರಿಗೆ ಲಾಲಾರಸದ ಅಭಿಷೇಕ ಮಾಡಿಸಿಯಾರು ಎಂಬ ಭಯ ಸ್ವಲ್ಪ ಇನ್ನೂ ಉಳಿದಿದೆ. ಆದ್ದರಿಂದ ಮೋದಿ ಕೇಂದ್ರ ಸರ್ಕಾರವನ್ನು ಬಯ್ಯುತ್ತಾರೆ, ಥಾಮಸ್ ಮೋದಿಯವರ ರಾಜ್ಯಸರ್ಕಾರವನ್ನು ಬಯ್ಯುತ್ತಾರೆ. ಬೈಗುಳಿಂದ ಬೆಲೆ ಇಳಿಯುವುದಿಲ್ಲ. ವಿಶೇಷವೆಂದರೆ, ಬೈಗುಳಿಂದ ಸಮಸ್ಯೆ ಬಗೆಹರಿಸಲು ಹೊರಟಿರುವ ಮಂತ್ರಿಗಳ ಬೆಲೆಯೂ ಜನಸಾಮಾನ್ಯರ ದೃಷ್ಟಿಯಲ್ಲಿ ಪೂರ್ತಿಯಾಗಿ ಇನ್ನೂ ಇಳಿದಿಲ್ಲದಿರುವುದು. ಸಮಸ್ಯೆ ಉದ್ಭವಿಸಿರುವುದು ಮೋದಿ ಅಥವಾ ಥಾಮಸ್ ವೈಯಕ್ತಿಕವಾಗಿ ಅಪರಾಧ ವೆಸಗಿರುವುದರಿಂದ ಅಲ್ಲ, ಮನಮೋಹನ ಸಿಂಗ್ ಸರ್ಕಾರದ ಆರ್ಥಿಕ ನೀತಿಗಳ ಫಲಿತಾಂಶ ಈ ಬೆಲೆಯೇರಿಕೆ. ಅವರ ಯೋಜನಾ ಆಯೋಗ, ವಿಶೇಷ ಆರ್ಥಿಕ ವಲಯ, ಬಹುರಾಷ್ಟ್ರೀಯ ಕಂಪನಿಗಳಿಂದ ಹಾವಳಿ, ಮುಕ್ತ ಮಾರುಕಟ್ಟೆಯ ಆರ್ಥಿಕತೆಯೆಂಬ ವಿಷಾನಿಲ, ವಿದೇಶಿ ಬಂಡವಾಳ ಹೂಡಿಕೆಯೆಂಬ ವಿಷಸರ್ಪ, ಕೃಷಿವಲಯವನ್ನು ಹಾಳುಗೆಡಹುವಂತಹ ಕ್ರಮಗಳು, ಇವೆಲ್ಲಾ ಕಾರಣಗಳು. ''ನಿಕಮ್ಮೀ'' ಎಂದು ದೇವೇಗೌಡರನ್ನು ಅವರು ಪ್ರಧಾನಿಯಾಗಿದ್ದಾಗ ಕಾಂಗ್ರೆಸ್‌ನ ಸೀತಾರಾಮ ಕೇಸರಿ ಛೇಡಿಸಿದ್ದ. ಅದನ್ನು ಯಥಾರ್ಥವಾಗಿ ಅನ್ವಯಿಸಬಹುದಾದ್ದು ಕೃಷಿ ಮಂತ್ರಿಯೆಂದು ಕರೆದುಕೊಳ್ಳುವ ಕ್ರಿಕೆಟ್ ಮಂತ್ರಿ ಶರದ್ ಪವಾರ್‌ಗೆ. ಆತನು ಬಾಳ ಠಾಕ್ರೆಯನ್ನು ಓಲೈಸಲು ದೌಡಾಯಿಸುತ್ತಾನೆ, ಆದರೆ ಬೆಲೆಯೇರಿಕೆ ಆತನಿಗೆ ಗೌಣ. ಕ್ರಿಕೆಟ್ಟನ್ನು ತಿಂದು-ಕುಡಿದು ಜೀವಿಸಬಹುದಾದ ಭಾರತೀಯರಿಗೆ ಅನ್ನ-ನೀರು ಬೇಕಿಲ್ಲವೆಂದು ಆತನಿಗೆ ದಿವ್ಯಜ್ಞಾನ ಲಭಿಸಿದೆ. ಕ್ರಿಕೆಟ್‌ಗೆ ತೊಂದರೆ ಬೇಡ, ಶಾರುಖ್ ಖಾನ್‌ಗೆ ಬೇಕಾದರೆ ತೊಂದರೆ ಕೊಡಿ ಪರವಾಗಿಲ್ಲ, ಎಂದೇನಾದರೂ ''ಮುಂಬೈ ಸಾಮ್ರಾಟ'' ಬಾಲ ಠಾಕ್ರೆಗೆ ಪವಾರ್ ತಿಳಿಸಿರಬಹುದೆ? ಗಲಭೆಕೋರರನ್ನು ಗುಂಡಿಕ್ಕಿ ಕೊಲ್ಲುತ್ತೇವೆ ಎನ್ನುವ ಚಿದಂಬರಂ ಮಹಾಶಯರು ಠಾಕ್ರೆ ವಿಷಯ ಬಂದಾಗ ಗಪ್‌ಚುಪ್ ಆಗಿಬಿಡುತ್ತಾರಲ್ಲ, ಏಕೆ? ಹಾರ್ವರ್ಡ್‌ನಲ್ಲಿ ಅದನ್ನೆಲ್ಲಾ ಕಲಿಸಿರುತ್ತಾರೆಯೆ? ''ಹಿಂಸೆ''ಯನ್ನು ಕುರಿತು ನಿರರ್ಗಳವಾಗಿ ಮಾತನಾಡುವ ನಮ್ಮ ದೇಶದ ನಾಯಕರು ಠಾಕ್ರೆಯ ದಂಡು ಹಿಂಸಾಕೃತ್ಯಗಳಲ್ಲಿ ತೊಡಗಿದಾಗ ಏಕೆ ಗುಡುಗುವುದಿಲ್ಲ? ಯಡಿಯೂರಪ್ಪನವರು ರಾಮಸೇನೆಯ ಅಕೃತ್ಯಗಳನ್ನು ಗಮನಿಸುವುದಿಲ್ಲ, ಚಿದಂಬರಂ ಠಾಕ್ರೆಯ ಪಿಡುಗನ್ನು ಎದುರಿಸುವುದಿಲ್ಲ. ಪ್ರಮೋದ ಮುತಾಲಿಕ್ ಮತ್ತು ಬಾಳ ಠಾಕ್ರೆ ಹೇಗೂ ಚರ್ಚೆಗೆ ಯೋಗ್ಯರಲ್ಲ. ತರ್ಕ ಬಲ್ಲವರೊಡನೆ ಮಾತ್ರ ಚರ್ಚೆ ಸಾಧ್ಯ, ಇವರೊಡನೆ ಎಂತಹ ಚರ್ಚೆ! ಶರದ್ ಪವಾರ್‌ಗೆ ಅಂಥವರು ಪ್ರಿಯರು. ದೇಶದ ರೈತರು ಕಣ್ಣೀರಿನಿಂದ ಕೈ ತೊಳೆದುಕೊಳ್ಳಲಿ, ಆಹಾರ ಪದಾರ್ಥ ಕೊಳ್ಳಲಾಗದವರು ಬಂಗಾಳಕೊಲ್ಲಿಗೆ ಬೀಳಲಿ, ಶರದ್ ಪವಾರ್ - ಮೋದಿ - ಥಾಮಸ್ ಪರಸ್ಪರ ದೂಷಣೆಗಳಲ್ಲಿ ಸಮಾಧಾನದ ಭಾವ ತಾಳಿ ಜನರ ಜೀವಕ್ಕೆ ಬೆಂಕಿ ಇಕ್ಕಲಿ; ಮನಮೋಹನ ಸಿಂಗ್ ಇದನ್ನೆಲ್ಲಾ ನೋಡುತ್ತಾ ತಮ್ಮ ನಿಧಾನದ ಮೆತ್ತಗಿನ ಮಾತುಗಳಲ್ಲಿ ನಿರರ್ಥಕ ಆಶ್ವಾಸನೆ ನೀಡುತ್ತಿರಲಿ. ಶಾಂತಿ ಮತ್ತು ಸಹನೆಗಳಿಗೇನೂ ಕೊರತೆ ಇಲ್ಲವಲ್ಲ! ಜನ ಉದ್ವಿಗ್ನರಾದಾಗ ಮಾತೇ ಬೇರೆ.

* * *

ಕಂದಮಾಲ್ ಜಿಲ್ಲೆ ಈಗ ವಿಶ್ವಕ್ಕೆಲ್ಲಾ ಪರಿಚಿತವಾಗಿ ಹೋಗಿದೆ. ಅದಕ್ಕೆ ಕಾರಣರಾದ ತೀವ್ರಗಾಮಿ ಕೋಮುವಾದಿಗಳು ಮಾತ್ರ ನಿಸೂರಾಗಿ ಅಲ್ಲೇ ಓಡಾಡಿಕೊಂಡಿದ್ದಾರೆ. ಅವರಿಗೆ ನಮ್ಮ ದೇಶದ ಕಾನೂನು ಈವರೆಗೆ ಏನೂ ಮಾಡಿಲ್ಲ. ಈಚೆಗೆ ಕಂದಮಾಲ್ ಮತ್ತೆ ಸುದ್ದಿ ಮಾಡಿತು. ಜನರನ್ನು 'ಹೇಗಿದ್ದೀರಿ' ಎಂದು ''ವಿಚಾರಿಸಲು'' ಯೂರೋಪಿನ ರಾಷ್ಟ್ರಗಳ ಕೆಲವು ರಾಯಭಾರಿಗಳು ಆ ಜಿಲ್ಲೆಗೆ ಭೇಟಿ ನೀಡಿದ್ದರು. ಅವರ ದೇಶಗಳು ಯಾವ ದೇಶಗಳಲ್ಲಿ (ಇರಾಕ್, ಆಫ್ಘಾನಿಸ್ತಾನ, ಪ್ಯಾಲೆಸ್ಟೈನ್, ಆಫ್ರಿಕಾದ ಹಲವು ದೇಶಗಳು ಇತ್ಯಾದಿ) ಜನರನ್ನು ನಿರ್ದಯವಾಗಿ ಕೊಂದಿವೆಯೋ ಅಲ್ಲಿಗೆ ಹೋಗಿ 'ಹೇಗಿದ್ದೀರಿ' ಎಂದು ಯಾರನ್ನೂ ಈ ರಾಯಭಾರಿಗಳು ಕೇಳಿಲ್ಲ. ಕಂದಮಾಲ್‌ನಲ್ಲಿ ನಡೆದ ದುರ್ಘಟನೆಗಳನ್ನು ಯಾರೂ ಸಮರ್ಥಿಸಲಾಗದು, ನಿಜ. ಆದರೆ ಅಲ್ಲಿಗೆ ಹೋಗಲು ಯೂರೋಪಿನ ರಾಯಭಾರಿಗಳಿಗೆ ಏನಂತಹ ಅವಸರ ಮತ್ತು ಕಾಳಜಿ? ಅವರಿಗೆ ಅನುಮತಿ ನೀಡಿದ ಕೇಂದ್ರ ಸರ್ಕಾರ ಅದರಿಂದ ಏನನ್ನು ನಿರೀಕ್ಷಿಸುತ್ತದೆ? ನಮ್ಮ ದೇಶದ ಆಂತರಿಕ ಗಲಭೆಗಳನ್ನು ಹತ್ತಿಕ್ಕಲು ನಾವು ಶ್ರಮಿಸಬೇಕೋ, ಯೂರೋಪಿನ ರಾಯಭಾರಿಗಳು ಬಂದು ಕಣ್ಣೀರು ಸುರಿಸಿದಂತೆ ಮಾಡಲು ಅವಕಾಶ ಕಲ್ಪಿಸಿಕೊಡಬೇಕೋ? ಇದೇ ರಾಯಭಾರಿಗಳು ಛತ್ತೀಸ್‌ಗಢಕ್ಕೆ ಹೋಗಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಐಕ್ಯ ಜನವಿರೋಧಿ ನೀತಿಯಾದ 'ಸಾಲ್ವಾ ಜುಡುಂ' ಹೆಸರಿನಲ್ಲಿ ಇಂದಿಗೂ ನಡೆಯುತ್ತಿರುವ ಅತ್ಯಾಚಾರ ಮತ್ತು ಹಿಂಸೆಯನ್ನು ನೋಡಿಬರಬಾರದೇಕೆ? ಚಿದಂಬರಂ ಅದಕ್ಕೆ ಸಮ್ಮತಿಸಿದರೆ, 'ತೆಹೆಲ್ಕಾ' ಪತ್ರಿಕೆಯ ಪ್ರತಿನಿಧಿ ಸಂಜನಾ ಅವರನ್ನು ಜೊತೆಮಾಡಿ ರಾಯಭಾರಿಗಳನ್ನು ಅಲ್ಲಿಗೆ ಕಳಿಸಲಿ. ಈ ಯುವತಿ ಅಲ್ಲಿಯ ಕಾಡುಗಳಲ್ಲಿ ಸಂಚರಿಸಿ ಸಾಲ್ವಾ ಜುಡುಂಗೆ ಬಲಿಯಾದ ಹತ್ತಾರು ಕುಟುಂಬಗಳ ದಾರುಣ ಕತೆಯನ್ನು ಕೇಳಿ, ನೋಡಿ ಬಂದಿದ್ದಾರೆ. ಅವರ ಅನುಭವವನ್ನು ಚಿದಂಬರಂ ಕೇಳಿ ತಿಳಿಯಬೇಕು. ನಕ್ಸಲರನ್ನು ಮಟ್ಟಹಾಕುವುದಾಗಿ ಹೇಳುವ ನಮ್ಮ ಸರ್ಕಾರಗಳು 'ಸಾಲ್ವಾ ಜುಡುಂ'ನಂತಹ ಹೇಯ ಗೂಂಡಾ ಗುಂಪುಗಳನ್ನು ಅಮಾಯಕ ನಾಗರಿಕರ ಮೇಲೆ ಛೂ ಬಿಟ್ಟಿವೆ. ಪ್ರಜಾಪ್ರಭುತ್ವ, ನಾಗರಿಕ ಹಕ್ಕುಗಳು, ಸಂವಿಧಾನ, ಮುಂತಾಗಿ ಮಾತನಾಡುವ ನಾವು ಏನು ಮಾಡಬೇಕೆಂಬುದನ್ನು ಚಿದಂಬರಂ ಹೇಳುವುದಿಲ್ಲ, ಹೇಳಬೇಕಾಗಿಲ್ಲ. ಅಮೆರಿಕಾದೊಡನೆ ಸಖ್ಯ ಹೆಚ್ಚಿದಷ್ಟೂ ಆತಂಕಕಾರಿ ಆಕ್ರಮಣಗಳು, ಭಯೋತ್ಪಾದನೆ, ನಮ್ಮ ದೇಶದ ಮೇಲೆ ಹೆಚ್ಚುತ್ತಿರುವ ಸಂಭವ ಹೆಚ್ಚು. ಒಳಗೆ ಸಾಲ್ವಾ ಜುಡುಂ, ಹೊರಗಿನಿಂದ ಲಷ್ಕರ್-ಎ-ತೈಬಾ; ಒಳಗೆ ಚಿದಂಬರಂ-ಅಹ್ಲುವಾಲಿಯ, ಹೊರಗಿನಿಂದ ಜಾಗತೀಕರಣದ ಕ್ಷುದ್ರ ಅಧ್ವರ್ಯುಗಳು. ನೆಮ್ಮದಿ ಕೆಡಿಸಲು ಜನಕ್ಕೆ ಇನ್ನೇನು ಬೇಕು! ಖಂಡನೀಯ ಪುಣೆ ದುರಂತ ಆದಮೇಲೆ ಇನ್ನು ಸಾಕು.

* * *

ಫೆಬ್ರವರಿ ೮ರಂದು ತಮಿಳುನಾಡು ವೃದ್ಧಮಂತ್ರಿ ಕರುಣಾನಿಧಿಗೆ ಸನ್ಮಾನ ನಡೆಯಿತಂತೆ. ಸೌಂದರ್ಯ ಪ್ರಜ್ಞೆಯ ಮಾದರಿ ಮನುಷ್ಯ ಅಮಿತಾಭ್ ಬಚ್ಚನ್ ಅದರಲ್ಲಿ ಪಾಲ್ಗೊಂಡಿದ್ದುದಾಗಿ ವರದಿಯಾಗಿತ್ತು. ಬಹಳ ಶ್ರೇಷ್ಠ ಸಮಾಗಮ! ಸಂಭಾಷಣೆಯ ವೇಳೆ ಕರುಣಾನಿಧಿ ಹೇಳಿದರಂತೆ, ''ಸಿನಿಮಾಗಳಲ್ಲಿ ರಾಜಕೀಯ ತರುವುದು ಬೇಡ'' ಎಂದು. ಅವರ ಪಾಲಿಗೆ ರಾಜಕೀಯವೆಂದರೆ ಏನೋ ತಿಳಿಯದು; ಬಹುಶಃ ಜಯಲಲಿತಾಗೆ ಅನುಕೂಲವಾಗುವ ಯಾವುದೇ ಮಾತು ಅಥವಾ ಕ್ರಿಯೆ ಇರಬೇಕು. ಜನರ ಸನ್ನಿವೇಶ ಮತ್ತು ಸಂಘರ್ಷವನ್ನು ಅರ್ಥೈಸುವುದು, ಸಂಘಟಿಸುವುದು, ಉತ್ತಮಗೊಳಿಸಲು ಸಾಮುದಾಯಿಕವಾಗಿ ಯತ್ನಿಸುವುದು, ಇವೆಲ್ಲಾ ರಾಜಕೀಯ ಎನಿಸಿಕೊಳ್ಳುತ್ತದೆ. ಕಲಾ ಮಾಧ್ಯಮಕ್ಕೆ ಅದರಲ್ಲಿ ಯಾವ ಪಾತ್ರವೂ ಇಲ್ಲವೆಂದು ವೃದ್ಧಾಪ್ಯದಲ್ಲಿ ಬೋಧಿಸುತ್ತಿರುವ ಕರುಣಾನಿಧಿ ತಾನೇ ಚಿತ್ರಕಥೆಗಳನ್ನು ಬರೆಯುತ್ತಿದ್ದಾಗ

ಯಾವ ವಸ್ತುವನ್ನು ನಿರ್ವಹಿಸುತ್ತಿದ್ದರು ? ರಾಜಕೀಯದಲ್ಲಿ ಹೇಯ ಮತ್ತು ಆಧೇಯ (ಯೋಗ್ಯವಾದ್ದು) ಎರಡೂ ಇವೆ. ಕರುಣಾನಿಧಿ ಜಾಯಮಾನ ಯಾವುದರಿಂದ ರೂಪುಗೊಂಡಿದೆಯೆಂಬುದನ್ನು ಜನ ತೀರ್ಮಾನಿಸಬೇಕು. ಜೀವನವನ್ನು ಪ್ರತಿಫಲಿಸುವ ಕಲಾಮಾಧ್ಯಮದಲ್ಲಿ ರಾಜಕೀಯವೂ ಉಂಟು. ಕರುಣಾನಿಧಿಯ ಉಪದೇಶ ನಡೆದ ಸುಮಾರಿನಲ್ಲೇ ವಿದ್ಯುನ್ಮಾಧ್ಯಮ ವಾಹಿನಿಯೊಂದರಲ್ಲಿ ಕಲೆ-ರಾಜಕೀಯ ಎಂಬ ಚರ್ಚೆ ಏರ್ಪಾಡಾಗಿದ್ದಿತಂತೆ. ಅಲ್ಲಿ ಸಂವಾದ ಆರಂಭಿಸಿದ ವ್ಯಕ್ತಿ, ಯಥಾಪ್ರಕಾರ ಸಿನಿಮಾದಲ್ಲಿ ರಾಜಕೀಯವಿದ್ದರೆ ಕಲೆ ಸೊರಗುತ್ತದೆ ಎಂದು ಹೇಳಲು ಆರಂಭಿಸಿದ. ಚರ್ಚೆಯಲ್ಲಿ ಭಾಗಿಯಾಗಿದ್ದ ನಾಲ್ಕು ಯುವ ಕಲಾವಿದ - ಛಾಯಾಚಿತ್ರಕಾರರ ಪೈಕಿ ಶ್ರೀ. ಅದ್ವೈತ ಹೇಳಿದರಂತೆ : ''ಇದೇನು ಮಾತೆಂದು ಆಡುತ್ತಿದ್ದೀರಿ ? ಐಸೆನ್‌ಸ್ಟೈನ್ ಮತ್ತು ಪುಡೋಫ್ಕಿನ್ ಒಳ್ಳೆಯ ಚಲನಚಿತ್ರ ನಿರ್ದೇಶಕರಲ್ಲವೆ? ಅವರ ಸಿನಿಮಾಗಳಲ್ಲಿ ರಾಜಕೀಯ ಇಲ್ಲವೆನ್ನುತ್ತೀರಾ ?'' ಮುಂದಿನ ಚರ್ಚೆ ಬೇರೆಯೇ ಹಾದಿ ಹಿಡಿಯಿತಂತೆ. ಕರುಣಾನಿಧಿ ಹೇಳಿದ್ದು ಅಮಿತಾಭ ಬಚ್ಚನ್ ಸಮ್ಮುಖದಲ್ಲಿ. ಆತನ ಸೌಂದರ್ಯ ಸ್ಪರ್ಧೆ ಕೂಡ ಮಾರುಕಟ್ಟೆಯ ರಾಜಕೀಯವಾಗಿತ್ತು. ಆಮೇಲೆ ಆತ ಸಮಾಜವಾದಿ ಪಕ್ಷದ ಅಮರ ಸಿಂಗ್ ಸಮರ್ಥಕ, ಕಾಂಗ್ರೆಸ್‌ನಿಂದಲೂ ಬಹಳಷ್ಟು ಗಳಿಸಿಕೊಂಡಿದ್ದಾನೆ. ಈಗ ನರೇಂದ್ರ ಮೋದಿಯವರ ಗುಜರಾತಿಗೆ ಈತ ವಿಶೇಷ ರಾಯಭಾರಿ. ಭೂಗತ ಜಗತ್ತಿನ ಭಾರಿ ಕುಳಗಳೊಡನೆ ಸಿನಿಮಾ ನಂಟು ಎಷ್ಟೆಂದು ಅಮಿತಾಭ್‌ಗೆ ಗೊತ್ತಿಲ್ಲವೆ ? ಅಂದರೆ, ಅದೆಲ್ಲಾ ಕ್ಷುದ್ರ ರಾಜಕೀಯ. ಅವರು ಬೇಡವೆನ್ನುವುದು ಬದಲಾವಣೆಯ ರಾಜಕೀಯವನ್ನು ಮಾತ್ರ. ಏಕೆಂದರೆ, ಜನಪರವಾಗಿ ಬದಲಾದ ಸಂದರ್ಭದಲ್ಲಿ ಇವರ ಅರುಚಿಕರ ಆಟಗಳು ನಡೆಯಲು ಸಾಧ್ಯವಾಗುವುದಿಲ್ಲವಲ್ಲ, ಅದಕ್ಕೆ.

* * *

ಬಿಹಾರವೆಂದ ಕೂಡಲೆ ಯಾವುದೋ ಅನಭಿವೃದ್ಧ ಬರ್ಬರ ರಾಜ್ಯವೆಂಬ ಭಾವನೆ ಕೆಲವರಲ್ಲಿದೆ. ಅಲ್ಲಿಯ ಸಂಪನ್ಮೂಲಗಳನ್ನು ಜನಹಿತಕ್ಕೆ ರೂಢಿಸಿಕೊಂಡಿಲ್ಲದಿರುವುದು ಅದಕ್ಕೊಂದು ಕಾರಣ. ಗಾಂಧೀಜಿಯೇನಾದರೂ ಮತ್ತೆ ಚಂಪಾರಣ್‌ಗೆ ಹೋದರೆ ಹಿಂದಿನಂತೆ ಗ್ರಾಮನೈರ್ಮಲ್ಯ ಮುಂತಾದ ಕಾರ್ಯಕ್ರಮಗಳನ್ನು ಹೊಸದಾಗಿ ಅನುಷ್ಠಾನಕ್ಕೆ ತರಬೇಕಾಗುತ್ತದೆಂಬ ಮಾತಿದೆ. ಅಂದರೆ, ಸುಮಾರು ತೊಂಭತ್ತು ವರ್ಷಗಳಲ್ಲಿ ಬಿಹಾರ ಪ್ರಗತಿಯನ್ನು ಕಂಡದ್ದು ಅತ್ಯಲ್ಪ. ಕಲ್ಲಿದ್ದಲು ಮತ್ತು ಗಂಗಾ ಎರಡೂ ಇರುವ ರಾಜ್ಯದಲ್ಲಿ ವಿದ್ಯುದುತ್ಪಾದನೆ ಕಡಿಮೆ. ಎರಡೋ ನಾಲ್ಕೋ ಶಾಖೋತ್ಪನ್ನ ವಿದ್ಯುತ್ ಸ್ಥಾವರಗಳನ್ನು ಸ್ಥಾಪಿಸಲು ಏನು ಅಡ್ಡಿ? ರಾಜೇಂದ್ರ ಪ್ರಸಾದರ ಕಾಲದಿಂದಲೂ ಯಥಾಸ್ಥಿತಿ. ಗಯಾ, ಬೋಧ್‌ಗಯಾ, ನಾಲಂದ, ರಾಜಗೃಹ, ಮುಂತಾದವುಗಳ ಪೈಕಿ ಮೌಢ್ಯದ ಪ್ರಾಬಲ್ಯ ದಿಂದಾಗಿ ಗಯಾ ಮಾತ್ರ ಪ್ರಸಿದ್ಧವಾಗಿದೆ. ಕಳೆದ ಮೂರು ದಶಕಗಳಲ್ಲಿ ಬಿಹಾರದ ಸರ್ಕಾರಗಳು ರಸ್ತೆ, ಶಿಕ್ಷಣ, ಸಾರಿಗೆ, ಕೃಷಿ , ಗೃಹನಿರ್ಮಾಣ, ಉದ್ಯಮ ಇತ್ಯಾದಿ ಯಾವ ಕ್ಷೇತ್ರದಲ್ಲೂ ಗಮನಾರ್ಹ ಸಾಧನೆ ಗಳಿಸಲಿಲ್ಲ. ಬಿಹಾರವೆಂದರೆ ಲಾಲೂ ಪ್ರಸಾದ್ ಎಂಬ ಐತಿಹ್ಯವೂ ಪ್ರಚಾರದಲ್ಲಿತ್ತು. ಎಲ್ಲೂ ಸಾಧ್ಯವಾಗದಂತಹ ರಾಜಕೀಯ ಅಲ್ಲಿ ನಡೆದು ಹೋಯಿತು : ತಾನು ಜೈಲಿಗೆ ಹೋಗಬೇಕಾಗಬಹುದೆಂಬ ಭೀತಿ ಬಂದಾಗ ಲಾಲೂ ತನ್ನ ಪತ್ನಿಯನ್ನು ಮುಖ್ಯಮಂತ್ರಿ ಪದವಿಯಲ್ಲಿ ಕೂರಿಸಿದ್ದು ಶತಮಾನದ ಒಂದು ವಿಸ್ಮಯ. ಬಿಹಾರದಲ್ಲಿ ಭಾರತೀಯ ಜನತಾ ಪಕ್ಷದೊಡನೆ ಜನತಾದಳ (ಸಂಯುಕ್ತ) ನೀತೀಶ್ ಕುಮಾರ್ ನೇತೃತ್ವದಲ್ಲಿ ಈಗ ಅಧಿಕಾರದಲ್ಲಿದೆ. ಬಿಹಾರವೆಂದರೆ ಬೇರೆ ಎಂಬ ಭಾವನೆ ತರುವಂತಹ ಹೊಸ ಕ್ರಮಗಳು ಜಾರಿಯಲ್ಲಿವೆಯೆಂದು ಹೇಳುತ್ತಾರೆ. ಭಾರತೀಯ ಜನತಾ ಪಕ್ಷ ಆಗಾಗ್ಗೆ ತೊಡರು ಕೊಡುತ್ತಿದ್ದರೂ ನೀತೀಶ್ ಅದಕ್ಕೆ ಬಗ್ಗದೆ ತಮ್ಮ ಕೆಲಸ ಸಾಕಷ್ಟು ಚೆನ್ನಾಗಿ ಮಾಡುತ್ತಿರುವುದು ಶ್ಲಾಘನೀಯ. ಅವರದೇ ಕಾರಣಕ್ಕೆ ಭಾಜಪದೊಟ್ಟಿಗಿದ್ದರೂ ನೀತೀಶ್ ಕೋಮುಸಂಸ್ಕೃತಿಗೆ ಬಲಿಯಾಗಿಲ್ಲದಿರುವುದು ಗಮನಾರ್ಹ. ಒಂದು ಕಾಲಕ್ಕೆ ಬಿಹಾರದ ಶಿಕ್ಷಣ ಸಂಸ್ಥೆಗಳಲ್ಲಿ ಇಡೀ ವರ್ಷ ನೌಕರರಿಗೆ ಸಂಬಳ ನೀಡಲಾಗಿರಲಿಲ್ಲ. ಇಂದು ಅಂತಹ ಮುಗ್ಗಟ್ಟು ಸುಧಾರಿಸಿದೆ. ಉದ್ಯಮಿಗಳೂ ಬಿಹಾರದತ್ತ ಹೆಜ್ಜೆ ಹಾಕಲು ಅಂಜುತ್ತಿಲ್ಲ. ಕೃಷಿ ಕ್ಷೇತ್ರದಲ್ಲಿ ಮಾಡಬೇಕಾದ್ದು ಅಗಾಧವಾಗಿದೆ. ಬಿಹಾರದಲ್ಲಿ ಈವರೆಗೆ ಮೂಲತಃ ಭೂ ಸುಧಾರಣೆಯನ್ನೇ ಜಾರಿಗೊಳಿಸಿಲ್ಲ. ''ಸಮಾಜವಾದಿಗಳು'' ಅಧಿಕಾರಕ್ಕೆ ಹಲವು ಬಾರಿ ಬಂದಿದ್ದರೂ ಇದನ್ನು ಯೋಚಿಸಿಲ್ಲದಿರುವುದು ಒಂದು ದುರಂತ. ಇದಿಲ್ಲದೆ ಬೇರಾವ ಅಭಿವೃದ್ಧಿ ಕಾರ್ಯಕ್ರಮಗಳೂ ನಿರರ್ಥಕ, ಅವು ನಿರೀಕ್ಷಿತ ಫಲ ನೀಡುವುದಿಲ್ಲ. – ಈ ಹಿನ್ನೆಲೆಯಲ್ಲಿ ನೀತೀಶ್ ಕುಮಾರ್ ಸರ್ಕಾರ ಎಲ್ಲವನ್ನೂ ಹೊಸ ರೀತಿಯಲ್ಲಿ ಹೇಗೆ ನಿಭಾಯಿಸುತ್ತದೆಂದು ಇಡೀ ದೇಶ ಕುತೂಹಲದಿಂದ ನೋಡುತ್ತಿದೆ. ಅಲ್ಲಿಯ ಜನತೆಗೆ ಯಶಸ್ಸು ಕೋರೋಣ.

* * *

ನಮ್ಮ ದೇಶದ ಶಿಕ್ಷಣ ನೀತಿಯಲ್ಲಿ ಹೊಸದೆಂದು ಏನು ಮಾಡಿದರೂ ಅದು ಮಹಾನ್ ಕ್ರಾಂತಿಯೆಂಬಂತೆ ಬಿಂಬಿಸಲಾಗುವುದು ರೂಢಿ. ಸ್ವಲ್ಪ ಕಾಲದ ನಂತರ ಇದೂ ಮಾಮೂಲೇ ಎಂಬ ಫಲಿತಾಂಶ ಮಾತ್ರ ತಪ್ಪಿಲ್ಲ. ಈಗ ಉನ್ನತ ಶಿಕ್ಷಣದ ಸರದಿ. ವಿಶ್ವವಿದ್ಯಾಲಯ ಧನಸಹಾಯ ಆಯೋಗ, ತಾಂತ್ರಿಕ ಶಿಕ್ಷಣ ಮಂಡಲಿ, ಮುಂತಾದುವನ್ನು ರದ್ದುಮಾಡಿ ಎಲ್ಲ ಉನ್ನತ ಶಿಕ್ಷಣ ಹಾಗೂ ಸಂಶೋಧನಾ ವಿಭಾಗಗಳ ಉಸ್ತುವಾರಿಗಾಗಿ ಒಂದು ಮಂಡಲಿಯನ್ನು ರಚಿಸುವ ಯೋಜನೆ ಇದೆ. ಪಾರ್ಲಿಮೆಂಟ್ ಮುಂದೆ ಶಾಸನವನ್ನು ಮಂಡಿಸಲು ತಯಾರಿ ನಡೆದಿದೆ. ಕರಡು ಶಾಸನವನ್ನು ಚರ್ಚಿಸಲು ಇತ್ತೀಚೆಗೆ ಬೆಂಗಳೂರಿನಲ್ಲಿ ಒಂದು ಸಭೆ ನಡೆಯಿತು. ಡಾ॥ ಗೋವರ್ಧನ ಮೆಹ್ತಾ, ಡಾ॥ ಮಾಧವ ಮೆನನ್, ಡಾ॥ ಎಂ. ಆರ್. ಶ್ರೀನಿವಾಸನ್ ಮುಂತಾದ ಸುಮಾರು ಐವತ್ತು ಮಂದಿ ಕರಡನ್ನು ಚರ್ಚಿಸಿ ಸಲಹೆಗಳನ್ನು ನೀಡಿದರು. ಶಾಸನವನ್ನು ರೂಪಿಸಿರುವ 'ಟಾಸ್ಕ್ ಫೋರ್ಸ್' ಸದಸ್ಯರ ಪ್ರಕಾರ ಮುಂದಿನ ದಿನಗಳಲ್ಲಿ ಉನ್ನತ ಶಿಕ್ಷಣ ಕ್ಷೇತ್ರದಲ್ಲಿ ಸ್ವಾಯತ್ತತೆ ಅಧಿಕವಾಗುತ್ತದೆ, ಉತ್ತಮ ಮಟ್ಟದ ಸಂಶೋಧನೆಗಳು ನಡೆಯುತ್ತವೆ, ಹಣದ ವಿಲೇವಾರಿ ಸಾಂಗವಾಗಿ ನೆರವೇರುತ್ತದೆ. ಆದರೆ ಸಭೆಯಲ್ಲಿ ವ್ಯಕ್ತವಾದಂತೆ ವಿಕೇಂದ್ರೀಕರಣದ ಮಂತ್ರ ಹೆಚ್ಚು ಹೆಚ್ಚು ಕೇಳಿಬರುತ್ತಿರುವ ಇಂದಿನ ದಿನಗಳಲ್ಲಿ ಪ್ರಸ್ತುತ ಶಾಸನವು ಎಲ್ಲವನ್ನೂ ಕೇಂದ್ರೀಕರಿಸಿ ಆಡಳಿತ ನಡೆಸುವ ಮಾದರಿ ಯೊಂದನ್ನು ರಚಿಸಿದೆ. ಕೆಲವು ನಿವೃತ್ತ ಶಿಕ್ಷಣತಜ್ಞರಿಗೆ, ನ್ಯಾಯಮೂರ್ತಿಗಳಿಗೆ, ತಾಂತ್ರಿಕ ಕ್ಷೇತ್ರದ ಅಧಿಕಾರಿಗಳಿಗೆ ಹೊಸ ಸುಪ್ಪತ್ತಿಗೆ ರೀತಿಯ ಉದ್ಯೋಗ ಖಾತರಿ ಯೋಜನೆಯಂತೆ ಶಾಸನವು ರೂಪುಗೊಳ್ಳುತ್ತಿದೆ. ಸಭೆಯಲ್ಲಿ ('ಹೊಸತು' ಸಂಪಾದಕರೂ ಸೇರಿದಂತೆ) ಹಲವರು ಇದನ್ನು ವಿರೋಧಿಸಿದರು. ಅಧ್ಯಾಪಕರ ಪರವಾಗಿ ಡಾ॥ ಕೆ. ಜಿ. ಶ್ರೀನಿವಾಸಮೂರ್ತಿ, ಡಾ॥ ರವೀಂದ್ರ ರೇಷ್ಮೆ, ಡಾ॥ ಶ್ರೀಕಂಠ ಮತ್ತು ಡಾ॥ ಹಾಲೇಶ್ ಭಾಗವಹಿಸಿ ತಮ್ಮ ವಿಶ್ಲೇಷಣೆಗಳನ್ನು ಮಂಡಿಸಿದರು. ಮುಂದಿನ ಬೆಳವಣಿಗೆಗಳನ್ನು ಕಾದು ನೋಡಬೇಕು.

* * *

ಜಾಗತೀಕರಣದ ಅಮಲಿನಲ್ಲಿ ದೇಶದ ಸಾರ್ವಭೌಮತ್ವದೊಂದಿಗೆ ಸಂವಿಧಾನ ದತ್ತವಾದ ಹಕ್ಕುಗಳು ಸಹ ಮೊಟಕಾಗುತ್ತಿರುವುದು ಸರಿಯಷ್ಟೆ. ದುಡಿಯುವ ಜನರಿಗೆ ನ್ಯಾಯವೆಂಬುದು ಮರೀಚಿಕೆಯಾಗುತ್ತಿರುವ ಇಂದಿನ ಸಂದರ್ಭದಲ್ಲಿ ಕಡೆಗೂ ನಾಲ್ಕು ಹನಿ ಬಿದ್ದಿದೆ. ಸರ್ವೋಚ್ಚ ನ್ಯಾಯಾಲಯದ ಇಬ್ಬರು ನ್ಯಾಯಾಧೀಶರ ಪೀಠವೊಂದು ತನ್ನ ತೀರ್ಪಿನಲ್ಲಿ ಹೀಗೆ ಹೇಳಿದೆ: ''ಈಚಿನ ದಿನಗಳಲ್ಲಿ ನ್ಯಾಯಾಲಯಗಳ ಕಾರ್ಯ ನಿರ್ವಹಣೆಯಲ್ಲಿ ಗಣನೀಯ ಪ್ರಮಾಣದ ಬದಲಾವಣೆ ಕಂಡುಬಂದಿದೆ. ಸಮಾಜ ಕಲ್ಯಾಣಕ್ಕೆ ಸಂಬಂಧಿಸಿದ ಶಾಸನಗಳನ್ನು ಅರ್ಥೈಸುವಾಗ ಇಂತಹ ಪ್ರಸಂಗಗಳು ನಡೆಯುತ್ತಿವೆ. ಜಾಗತೀಕರಣ ಮತ್ತು ಉದಾರೀಕರಣದ ಮಂತ್ರಗಳ ಭರಾಟೆಯಲ್ಲಿ ಇಡೀ ನ್ಯಾಯಾಂಗ ಪ್ರಕ್ರಿಯೆಗಳಿಗೆ ಅವೇ ಮೂಲಸೂತ್ರ, ಅವನ್ನು ಪೋಷಿಸುವುದೇ ನ್ಯಾಯಾಂಗದ ಉದ್ದೇಶ, ಎಂಬಂತಹ ಅಭಿಪ್ರಾಯ ವ್ಯಾಪಕವಾಗಿದೆ.'' ಇದು ಸರ್ವಥಾ ಸಲ್ಲದೆಂದು ನ್ಯಾಯಮೂರ್ತಿ ಸಿಂಘ್ವಿ ತಮ್ಮ ತೀರ್ಮಾನವೊಂದರಲ್ಲಿ ಹೇಳಿದ್ದಾರೆ. ಬೇರೆ ನ್ಯಾಯಮೂರ್ತಿಗಳಿಗೆ ಅದಿನ್ನೂ ಕೇಳಿಸಿಲ್ಲದಿದ್ದರೆ ಸರಿಯಾಗಿ ಕೇಳಿಸುವ ಜವಾಬ್ದಾರಿ ದುಡಿಯುವ ಜನರದ್ದು, ಮಾಧ್ಯಮಗಳದ್ದು.

* * *

ಖ್ಯಾತ ಲೇಖಕ ಶ್ರೀ. ಅನಂತ ಕಲ್ಲೋಳ ಅವರು ಬೆಳಗಾವಿಯಿಂದ ೨-೨-೨೦೧೦ ರಂದು ಒಂದು ಪತ್ರ ಬರೆದಿದ್ದಾರೆ. ಪತ್ರವಿಭಾಗದಲ್ಲಿ ಪ್ರಕಟಿಸುವ ಬದಲು ಅದನ್ನಿಲ್ಲಿ ಪ್ರಕಟಿಸಲು ಕಾರಣ ಅವರ ಕೆಲವು ಹೇಳಿಕೆಗಳಿಗೆ ಪ್ರತಿಕ್ರಿಯಿಸುವ ಉದ್ದೇಶವಿದೆ ಎಂಬುದು. ಫೆಬ್ರವರಿ ಸಂಚಿಕೆ ತಲುಪಿದ ತರುವಾಯದಲ್ಲಿ ಅವರು ಬರೆದಿದ್ದ ಪತ್ರ ಹೀಗಿದೆ :

ಇತ್ತೀಚೆಗೆ ಅಸು ನೀಗಿದ ಮಹಾನ್ ಚೇತನ ಜ್ಯೋತಿ ಬಸುರವರ ಮೊಗಪುಟದ ಚಿತ್ರ ಹಾಗೂ ಹೊಸತುವಿನ ಸಂಪಾದಕೀಯದಲ್ಲಿ ಒಡಮೂಡಿರುವ ಗೌರವಾಂಜಲಿಯ ನುಡಿಚಿತ್ರ ಮನತಟ್ಟುವಂತಿದೆ. ದಂತಕಥೆಯಾಗಿರುವ ಈ ತತ್ವನಿಷ್ಠ ರಾಜಕಾರಣಿ ಸಂತನ ಸ್ಮರಣೆ ಸಂತತ ಸ್ಮರಣೀಯವಾಗಿವೆ. ಅದನ್ನೇ ಮನದಲ್ಲಿ ಮೆಲುಕುಹಾಕು ತ್ತಿರುವಾಗಲೇ ದಿನಪತ್ರಿಕೆಯಲ್ಲಿ ಬಸು ಕುಟುಂಬದವರು ವೈಕುಂಠ ಸಮಾರಾಧನೆ ಮಾಡಿದ ಸಂಗತಿಯೂ ಕಣ್ಣಿಗೆ ಬಿದ್ದಿತು. ಮಧ್ಯಾಹ್ನ ಅಂಚೆಯಲ್ಲಿ ಬಂದ ಈ ವಾರದ 'ವೀಕ್' ಆಂಗ್ಲ ವಾರಪತ್ರಿಕೆಯಲ್ಲಿ ಪ. ಬಂಗಾಲದ ವಾಮಪಂಥೀಯ ಮಂತ್ರಿಗಳು, ಮುಖಂಡರು ಕೋಟಿಗಟ್ಟಲೆ ಹಣ ಮಾಡಿಕೊಂಡಿರುವ ವರದಿ ಕಣ್‌ಗೆಡಿಸಿತು. ನಿಮ್ಮ 'ಈ ತಿಂಗಳು' ಲೇಖನ ಮೇಲ್ಕಾಣಿಸಿರುವ ವಿಷಯಗಳ ಹಿನ್ನೆಲೆಯಲ್ಲಿ ಹರಿದ ಜೋಳಿಗೆಯಲ್ಲಿ ಹಿಟ್ಟು ತುಂಬಿದಂತಾಯಿತು. ವೈಜ್ಞಾನಿಕ ಮನೋಭಾವ, ಸಮತಾವಾದ, ವಿಜ್ಞಾನಿಗಳಲ್ಲಿ ಕಂಡುಬರುವ ಧಾರ್ಮಿಕ ರೂಢಿ ಶರಣತೆ ಇವೆಲ್ಲ

ಸಹಜ ಪ್ರಾಕೃತಿಕ ಗುಣಗಳು ಮತ್ತು ಸಾರುವ ತತ್ತ್ವವಾದವು ಸಾಪೇಕ್ಷವಾದ ಎಂಬುದು ಕೇವಲ ಒಂದೆರಡು ಗಂಟೆಗಳ ಅಂತರದಲ್ಲಿಯ ಓದಿನಲ್ಲಿ ಒದಗಿತು. ಅಂತೂ ನೆಮ್ಮದಿ ಇಂದು ಇಲ್ಲ, 'ನೆಮ್ಮದಿಯ ನಾಳೆ ನಮ್ಮದು' ಎಂಬ ನೋಟೀಸು ಬಾಗಿಲ ಮೇಲೆ ಬರೆಯುವ 'ನಾಳೆ ಬಾ' ಎಂಬಂತೇ ಇದೆ ಎಂದಾಯಿತು.

ಕನ್ಯಾಕುಮಾರಿಯಲ್ಲಿ ಗ್ರಹಣ ಸಂದರ್ಭದಲ್ಲಿಯ ಸ್ಥಿತಿಗತಿಯ ಬಗ್ಗೆ ಅಚ್ಚರಿ ಪಡುವಂತಹದೇನಿದೆ? ದೃಶ್ಯ, ಶ್ರಾವ್ಯ ಮಾಧ್ಯಮಗಳಲ್ಲಿ ಹುಚ್ಚೆಬ್ಬಿಸಿರುವ ಕಿಚ್ಚು ಬಿತ್ತರಗೊಂಡದ್ದು ಕಾಣುತ್ತೇವೆ. ಎಲ್ಲವೂ ವ್ಯಾಪಾರೀಕರಣ, ಸ್ವಲಾಭಪ್ರೇರಿತ ಆಟಗಳು ಸದಾ ಕಾಲ ಇರೋದೇ. 'ಹೊಸತು'ವಿನ ವಿಶೇಷಾಂಕದಲ್ಲಿ ಡಾ|| ನೇಮಿಚಂದ್ರ ಅವರು ಔಷಧಿಗಳು, ವೈದ್ಯಕೀಯ ಸಂಸ್ಥೆಗಳು, ಔಷಧಿ ಕಾರಖಾನೆಗಳು ಇವುಗಳ ಕುರಿತು ಬರೆದದ್ದು ಇದೆಯಲ್ಲ.

ವಿವೇಕಾನಂದ ಸ್ಮಾರಕದ ಕುರಿತು 'ಏಕನಾಥಜಿ, ದ್ವಿನಾಥಜಿ' ಎಂದು ಅಂದಿದ್ದೀರಿ. ಏಕನಾಥಜಿಯವರು ತತ್ಪರರಾಗದಿದ್ದಲ್ಲಿ, ಜಾನ್‌ನಾಥಜಿಯೋ ಯೂಸುಫ್‌ನಾಥಜಿಯೋ ಆ ನಡುಗಡ್ಡೆಯ ಮೇಲೆ ನೆಲೆಗೊಳ್ಳುತ್ತಿದ್ದರು. ಈ ನೆಲದಲ್ಲಿಯ ಮೂಲಚಿಂತನೆಗಳ ಮೂಲೋಚ್ಚಾಟನೆಗೆ ಬದ್ಧವಾಗಿರುವ ಬದಲಿಗೆ ದೇಶಪ್ರೇಮಿಯೋರ್ವರು ಮಾಡಿದ್ದ ಒಳ್ಳೆಯ ಕೆಲಸವು ಕಣ್‌ಕಿಸುರಾಗಬೇಕೇಕೆ?

ನಮ್ಮ ಮಾಧ್ಯಮಗಳು ವಸ್ತುನಿಷ್ಠತೆಯನ್ನು ಪಾಲಿಸಿದ್ದು ಕಮ್ಮಿ; ಈಗಂತೂ ಅದರ ಮಾತೇ ಇಲ್ಲ. ನಮಗೆ ಬೇಕಾದ ಸುದ್ದಿಯನ್ನು ನಾವೇ ಬರೆದು ಪತ್ರಿಕೆಯೊಂದರ ವರದಿಯೆಂಬಂತೆ ಪ್ರಕಟಿಸುವ ಅವಕಾಶ ಮುಕ್ತವಾಗಿದೆ. ಸಾಲಿಗೆ ಇಂತಿಷ್ಟು ಹಣ ಎಂದು ಪತ್ರಿಕೆಯು ನಿಗದಿಪಡಿಸಿದ್ದನ್ನು ಕೊಟ್ಟರೆ ಮುಗಿಯಿತು. ಇದು ಮಾನ್ಯ ಕಲ್ಲೋಳ ರಂಥವರಿಗೆ ಚೆನ್ನಾಗಿ ತಿಳಿದಿರುತ್ತದೆ. ಜ್ಯೋತಿ ಬಸು ಅಸುನೀಗಿದ ನಂತರ ನಾಲ್ಕು ಅಥವಾ ಐದು ನೂರು ಜನ ಒಂದೆಡೆ ಸೇರಿ ಸಂತಾಪ ಸೂಚಕ ಸಭೆ ನಡೆಸುತ್ತಾರೆ; ಅದು ರಾಜಕೀಯ ಸಭೆಯ ಮಾದರಿಯಲ್ಲಿ ನಡೆಯುತ್ತದೆ; ಸಭೆಯ ನಂತರ ಅಲ್ಲೇ ಊಟದ ಏರ್ಪಾಟಿರುತ್ತದೆ; ಊಟದ ಭಾಗವಾಗಿ ಬಂಗಾಲಿಗಳು ಬಿಡಲಾಗದ 'ರೊಶೊಗುಲ್ಲಾ' ಸಹ ಇರುತ್ತದೆ. ಅದನ್ನು ಯಾವುದಾದರೂ ಪತ್ರಿಕೆಯು ವೈಕುಂಠ ಸಮಾರಾಧನೆಯೆಂದು ವರದಿ ಮಾಡಿದರೆ ಏನು ಮಾಡಬೇಕು? ಇನ್ನೋರ್ವ ಅದನ್ನು ಕೈಲಾಸ ಸಮಾರಾಧನೆ ಎನ್ನಬಹುದು ಅಥವಾ 'ಬಸು ಸಮಾರಾಧನೆ' ಎನ್ನುತ್ತಾನೋ? ಮೊದಲಿಗೆ 'ವೈಕುಂಠ ಸಮಾರಾಧನೆ' ಎಂಬ ಪದ್ಧತಿ ಬಂಗಾಳದಲ್ಲಿ ಬಹಳವಾಗಿ ಪ್ರಚಲಿತವಲ್ಲ. ಚೈತನ್ಯ ಮಹಾಪ್ರಭುಗಳ ಪರಂಪರೆಯಿಂದಾಗಿ ಬಂಗಾಳದಲ್ಲಿ ವೈಕುಂಠ ಸಾಕಷ್ಟು ಪ್ರಸಿದ್ಧ ವಾದುದು. ನಾಯಕನು ಸತ್ತನೆಂದು ಸಂತಾಪಸೂಚಕ ಸಭೆಯ ನಂತರ ಸಾಮೂಹಿಕವಾಗಿ ಊಟಮಾಡುವುದು ವರ್ಜ್ಯವೆಂದು ಪಶ್ಚಿಮ ಬಂಗಾಳದ ಯುವರಾಜಕಾರಣಿಗಳು ಭಾವಿಸಿಲ್ಲದಿದ್ದರೆ ಆಶ್ಚರ್ಯವೇನೂ ಇಲ್ಲ. ಇನ್ನೊಂದು ಪತ್ರಿಕೆಯು ರಂಜನೀಯವಾಗಿ ಬೇರೊಂದು ಸುದ್ದಿಯನ್ನು ಪ್ರಕಟಿಸಿ ಇದೇ ವಿಷಯವನ್ನು ಬೆಳೆಸಬಹುದು: ಉದಾಹರಣೆಗೆ, ಚಂದನ ಬಸು (ಜ್ಯೋತಿ ಬಸು ಅವರ ಮಗ) ಪಂಚೆಯುಟ್ಟು, ತಿಲಕವಿಟ್ಟು, ಸ್ವಾಮಿಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿ, ತಂದೆಯ ಪಿಂಡವನ್ನಿರಿಸಿ, ಪುರೋಹಿತರೆದುರು ಕುಳಿತು ಮೂಗುಹಿಡಿದುಕೊಂಡು ತನಗೆ ಗೊತ್ತಿರದ 'ಪ್ರಾಣಾಯಾಮ' ಮಾಡಿದ! ಮೂರು ಪಿಂಡಗಳ ಒಂದು ಸೊಗಸಾದ ಚಿತ್ರವನ್ನು ಅಚ್ಚು ಮಾಡಿದರಾಯಿತು. ಕಂಪ್ಯೂಟರ್ ಏನೆಲ್ಲ ಮಾಡಬಹುದು ಎಂಬುದು ತಿಳಿದಿದೆಯಲ್ಲ! ಇನ್ನು ಬಸು ಮಂತ್ರಿಮಂಡಲದ ಸದಸ್ಯರು ಕೋಟಿಗಟ್ಟಲೆ ಹಣಮಾಡಿಕೊಂಡಿರುವ ಬಗೆಗಿನ ಐತಿಹ್ಯ: ಇದೇನೂ ಹೊಸದಲ್ಲ. ಇಪ್ಪತ್ತು ವರ್ಷಗಳ ಹಿಂದೆಯೇ ಬಸು ಮಗ ಆತನ ತಂದೆಯ 'ನಾಮದ ಬಲದಿಂದ' ಉದ್ಯಮ ಸ್ಥಾಪಿಸಿಕೊಂಡು ದೊಡ್ಡ ಕಾರುಗಳಲ್ಲಿ ಓಡಾಡುತ್ತಿದ್ದಾನೆ, ಎಂಬ ''ಸಮಾಚಾರ'' ಇದೇ ''ದಿ ವೀಕ್'' ಮಾದರಿಯ ಕೆಲವು ವಾರಪತ್ರಿಕೆಗಳಲ್ಲಿ ಹಲವು ಕಾಲ ವಿಜೃಂಭಿಸಿತ್ತು. ಹೇಗೂ ಪತ್ರಿಕೆ 'ವೀಕ್' ಆದ್ದರಿಂದ 'ಸ್ಟ್ರಾಂಗ್' ಆಗಲು ಇಂತಹ ಕತೆಗಳು ಸಹಾಯಕ. ಇರಲಿ: ಮಂತ್ರಿಗಳು ಒಂದು ವಾರದಲ್ಲೋ ತಿಂಗಳಲ್ಲೋ ಹಣ ಮಾಡಿಕೊಂಡರೆ? ಅದು ನಿರಂತರ ನಡೆಯುತ್ತಿದ್ದಿರಬೇಕಲ್ಲವೆ? ಈವರೆಗೆ ಅಂತಹ ಆಪಾದನೆಗಳು ಬಂದಿರಲಿಲ್ಲವೇಕೆ? ಬಸು ಅವರು ನಿಧನರಾಗುವವರೆಗೆ ''ಸಮಾಚಾರ'' ಗುಟ್ಟಾಗಿಯೇ ಇರಬೇಕೆಂದು ಪತ್ರಿಕೆಗಳ ಸಂಕಲ್ಪವಾಗಿತ್ತೆ? ಆಪಾದನೆ ಮಾಡುವಾಗ ದಾಖಲೆಗಳನ್ನು ಪರೀಕ್ಷಿಸಿರ ಬೇಕೆಂದು ಮಾಧ್ಯಮಗಳಿಂದ ನಿರೀಕ್ಷಿಸಲಾಗುತ್ತದೆ. ಉದಾಹರಣೆಗೆ, ಈಗ ಕೇರಳದ ಪಿಣರಾಯಿ ವಿಜಯನ್ ಬಗೆಗಿನ ಆಪಾದನೆ ಇದೆ. ಅದಕ್ಕೇನೋ ದಾಖಲೆಗಳನ್ನು ನೀಡುತ್ತಿದ್ದಾರೆ, ವಿಚಾರಣಾ ಆಯೋಗವಿದೆ. ಆಯೋಗದ ತೀರ್ಮಾನ ಬರುವವರೆಗೆ ಜನರು ಪಿಣರಾಯಿಯನ್ನು 'ಭ್ರಷ್ಟ' ಎಂದು ಭಾವಿಸಿದರೆ ಅದು ಬೇರೆ ತೆರನಾದ ವಿಷಯ. ಮಾನ್ಯ ಕಲ್ಲೋಳರಂಥವರು ಇದನ್ನೆಲ್ಲಾ ತಿಳಿದಿರುತ್ತಾರೆ. ''ವಾಮಪಂಥೀಯ''ರನ್ನು ಬೇರೆ ಕಾರಣಗಳಿಗೆ ನಿಂದಿಸುವವರೂ ಇದ್ದಾರೆ. ಅಲ್ಲಿ ಸೈದ್ಧಾಂತಿಕ ಭಿನ್ನ ನಿಲುವುಗಳಿರುತ್ತವೆ, ಅಡ್ಡಿಯಿಲ್ಲ. ''ಬಲಪಂಥೀಯರ'' (ವಿಶೇಷವಾಗಿ ನಮ್ಮ ರಾಜ್ಯದ ಸದ್ಯದ ಮಂತ್ರಿಮಂಡಲದಲ್ಲಿರುವ ಪ್ರಚಂಡರ) ಪಾಪಕೂಪದ ಅಪರಿಮಿತ ಭ್ರಷ್ಟಾಚಾರವನ್ನು ಮುಚ್ಚಿಡಲು ''ವಾಮಪಂಥೀಯ''ರನ್ನು ಹೀಗೆ ತರಾಟೆಗೆ ತೆಗೆದುಕೊಳ್ಳುವುದು ಮಾಧ್ಯಮಗಳ ನೂತನ ಆವಿಷ್ಕಾರ. ಇರಲಿ.

ಒಂದು ಪತ್ರಿಕೆ ನಾಳೆ ಹೀಗೊಂದು ಕತೆ ಪ್ರಕಟಿಸಿದರೆ ಏನೆನ್ನೋಣ? ಕತೆ ಹೀಗಿರಬಹುದು: ಮಾನ್ಯ ಅಟಲ ಬಿಹಾರಿ ವಾಜಪೇಯಿ, ಮಾಜಿ ಪ್ರಧಾನಿ, ಕಟ್ಟಾ ಬ್ರಹ್ಮಚಾರಿ, ಶಾಕಾಹಾರಿ, ಮದ್ಯಪಾನ ಮಾಡದವರು, ಎನ್ನುತ್ತಾರೆ. ವಸ್ತುಸ್ಥಿತಿ ಅದಕ್ಕೆ ವ್ಯತಿರಿಕ್ತವಾದ್ದು. ಮೊರಾರ್ಜಿ ದೇಸಾಯಿ ಸಂಪುಟದಲ್ಲಿ ವಿದೇಶಾಂಗ ಸಚಿವರಾಗಿದ್ದಾಗ ವಾಜಪೇಯಿಯವರು ವಿದೇಶಗಳಲ್ಲಿ ಅತಿಥಿ ಸತ್ಕಾರದ ಅನೇಕ ಸಂದರ್ಭಗಳಲ್ಲಿ ಎಂತೆಂಥದೋ ಮಾಂಸ ತಿಂದರು, ಪಾನಮತ್ತರಾಗಿ ತತ್ತರಿಸಿ ಬಿದ್ದರು, ಇತ್ಯಾದಿ.

ಇದು ಮಾಧ್ಯಮಗಳಿಗೆ ಯೋಗ್ಯವೆ? ಅಲ್ಲ, ಏಕೆಂದರೆ ವಾಜಪೇಯಿಯವರು ''ಸುಸಂಸ್ಕೃತ'' ಪಕ್ಷದವರು. ಅವರಿಗೆ ಕೆಸರು ಎರಚಿದರೆ ಅಂಟಿಕೊಳ್ಳುವುದಿಲ್ಲ. ಅಂಟಿಕೊಳ್ಳುವ ಸಂಭವವಿದ್ದರೆ ಮಾಧ್ಯಮಗಳಲ್ಲಿ ಬಿರುಗಾಳಿ ಎಬ್ಬಿಸಿ ಅದನ್ನು ಇಲ್ಲವಾಗಿಸುವ ಚಾಕಚಕ್ಯತೆ ಅವರಿಗಿದೆ, ಅವರು ಸದಾ ಪೋಷಿಸುವ ವರ್ಗಕ್ಕಿದೆ. ಎಡಪಂಥೀಯರಿಗಾದರೆ ನೀವು ಹೇಗೆ ಬೇಕಾದರೂ ತೆಗಳಬಹುದು, ಮಾಧ್ಯಮಗಳಿಗೆ ಅದು ಬಿಸಿ ಬಿಸಿ ಒಬ್ಬಟ್ಟಿನಂತಿರುತ್ತದೆ! ಅವರು ಪ್ರತಿನಿಧಿಸುವ ವರ್ಗವು ಮಾಧ್ಯಮಗಳಲ್ಲಿ ಬಿರುಗಾಳಿ ಎಬ್ಬಿಸಲು ಅಸಮರ್ಥವಾದುದು. ಇಂತಹ ಹಿಂದು-ಮುಂದುಗಳನ್ನೆಲ್ಲಾ ಮಾನ್ಯ ಶ್ರೀ. ಅನಂತ ಕಲ್ಲೋಳರಂಥವರು ಪರಾಮರ್ಶಿಸಿಕೊಳ್ಳಲು ಸಮರ್ಥರು.

ಕನ್ಯಾಕುಮಾರಿ ಎಂದಾಗ ನಮ್ಮ ರಾಜ್ಯದ ಶ್ರೇಷ್ಠ ಮೃದಂಗ ವಿದ್ವಾಂಸರಾದ ಶ್ರೀ. ಎ. ವಿ. ಆನಂದ್ ಸಂದರ್ಶನವೊಂದರಲ್ಲಿ ಹೇಳಿದ ಪ್ರಸಂಗ ನೆನಪಾಗುತ್ತದೆ. ಅವರು ಖ್ಯಾತ ಘಟವಾದಕರಾಗಿದ್ದ ಶ್ರೀ. ಮಂಜುನಾಥ್ ಅವರ ಶಿಷ್ಯರು. ಮಂಜುನಾಥ್ ಪಿಟೀಲು ಮಾಂತ್ರಿಕ ಶ್ರೀ. ಟಿ. ಚೌಡಯ್ಯನವರ ಜೊತೆಗೆ ಕಚೇರಿಗಳಲ್ಲಿ ಸದಾ ಇರುತ್ತಿದ್ದವರು, ನೆಚ್ಚಿನ ಮಿತ್ರರು. ಒಮ್ಮೆ ಅವರೆಲ್ಲಾ ಕನ್ಯಾಕುಮಾರಿಗೆ ಹೋಗಿದ್ದರಂತೆ. ದೇವಸ್ಥಾನಕ್ಕೆ ಹೋದಾಗ ಚೌಡಯ್ಯನವರಿಗೆ ಆಸೆಯಾಯಿತಂತೆ: ಕುಮಾರಿಯೆದುರು ಸಂಗೀತಸೇವೆ ಮಾಡಬೇಕೆಂದು. ಅರ್ಚಕರು ಆಗಬಹುದೆಂದರು. ಚೌಡಯ್ಯನವರು ತಾವು ತಂಗಿದ್ದ ಸ್ಥಳಕ್ಕೆ ತೆರಳಿ ಪಿಟೀಲು ತಂದರು, ಮೃದಂಗ ಮತ್ತು ಘಟ ವಿದ್ವಾಂಸರನ್ನು ಕರೆತಂದರು. ಅಷ್ಟರಲ್ಲಿ ದೇವಸ್ಥಾನದವರು ಊರಿನಲ್ಲಿ ತಮಟೆ ಸಾರಿಸಿ ಚೌಡಯ್ಯನವರ ಸೇವೆಯ ವಿಷಯ ಪ್ರಚಾರ ಮಾಡಿದ್ದರು, ನೂರಾರು ಜನ ಆಗಲೇ ಜಮಾಯಿಸಿದ್ದರು. ಎಂದಿನಂತೆ ಅತಿ ತಲ್ಲೀನರಾಗಿ ಚೌಡಯ್ಯನವರು ಒಂದು ಗಂಟೆಗೂ ಹೆಚ್ಚು ಕಾಲ ಕಚೇರಿ ನಡೆಸಿಕೊಟ್ಟು ಭಾವಪರವಶರಾದರು, ಕೇಳುಗರಲ್ಲಿ ಉಲ್ಲಾಸದ ಹೊಳೆ ಹರಿಸಿದರು.

ಇಂದು ಕನ್ಯಾಕುಮಾರಿಯಲ್ಲಿ ಇದು ಸಾಧ್ಯವಿಲ್ಲವಾಗಿದೆ. ಮೊದಲಿನ ಸಾಂಸ್ಕೃತಿಕ ವಾತಾವರಣವು ಹಾಳಾಗಿ, ಹೊಸ ಗಜಿಬಿಜಿ ವ್ಯಾಪಾರಿ ಕುಸಂಸ್ಕೃತಿ ತುಂಬಿಹೋಗಿದೆ. ಇದು ಕೇವಲ ಪರಿಸರದ ಹಾನಿಯಲ್ಲ, ಸಂಸ್ಕೃತಿಯ ಹೀನಾಯ ನಷ್ಟ. ಏಕನಾಥರು ಪರಿಭಾವಿಸಿಕೊಂಡಿದ್ದೇನೆಂಬುದಷ್ಟೇ ಮುಖ್ಯವಲ್ಲ; ಅದರ ಪರಿಣಾಮವೇನಾಗಿದೆ ಯೆಂಬುದೂ ಅಷ್ಟೇ ಮುಖ್ಯ. ವಿವೇಕಾನಂದರ ಬಂಡೆಯನ್ನು ಜಾನ್ ಅಥವಾ ಯೂಸುಫ್ ಕಬಳಿಸಿ ಹಾಳುಗೆಡಹುತ್ತಾನೆಂದು, ಅವನು ಅದನ್ನು ಮಾಡುವ ಮೊದಲು ನಾವೇ ಅದನ್ನು ಮಾಡಿಬಿಡೋಣವೆಂಬುದು ಜಾಣತನವಲ್ಲ, ಅದು ಅವಿವೇಕ. ಏಕನಾಥ, ಜಾನ್, ಯೂಸುಫ್..., ಯಾವನೂ ಅದನ್ನು ಕಬಳಿಸಿ ವಿರೂಪಗೊಳಿಸಲು ಅವಕಾಶವಿರಬಾರದು. ಅದಕ್ಕೆ ಸೂಕ್ತ ಕಾನೂನು ಮಾಡಬೇಕು, ಅನುಷ್ಠಾನಕ್ಕೆ ತರಬೇಕು. ಶ್ರೀರಾಮಸೇನೆಯವರು ಮೇರಿಯ ವಿಗ್ರಹವನ್ನು ಪುಡಿಗುಟ್ಟುತ್ತಾರೆಂಬ ಆತಂಕದಿಂದ ಮಂಗಳೂರಿನ ಬಳಿಯ ಚರ್ಚಿನ ಪಾದ್ರಿಯು ಶ್ರೀರಾಮಸೇನೆಯ ಕಿಂಕರರು ಬರುವ ಮೊದಲು ತಾನೇ ಮೇರಿಯನ್ನು ಭಗ್ನಗೊಳಿಸಿದರೆ ಹೇಗೆ? ಎಲ್ಲಾ ''ಸಂಸ್ಕೃತಿ'' ಎಂಬುದನ್ನು ನಾವು ಹೇಗೆ ವ್ಯಾಖ್ಯಾನಿಸಿಕೊಳ್ಳುತ್ತೇವೆಂಬುದನ್ನು ಅವಲಂಬಿಸಿದೆ. ವಿವೇಕಾನಂದರಿಗೆ ಜಾನ್ ಮತ್ತು ಯೂಸುಫ್ ಮಾನವ ವ್ಯಕ್ತಿಗಳಾಗಿ ಪರಕೀಯರಾಗಿರಲಿಲ್ಲವೆಂಬುದು ನಮಗೆ ರಸಾಯನವಾಗಬೇಕು, ಅಷ್ಟೆ.




### ಜನವರಿ ಸಂಚಿಕೆ

ವರ್ಷದಿಂದ ವರ್ಷಕ್ಕೆ 'ಹೊಸತು', ಅದರಲ್ಲೂ ಅದರ ವಿಶೇಷ ಸಂಚಿಕೆ, ಚೆನ್ನಾಗಿ ಬರುತ್ತಿದೆ. ಈ ಮಾತು ೨೦೧೦ರ ಜನವರಿ ತಿಂಗಳ ಸಂಚಿಕೆಗೆ ಹೆಚ್ಚು ಒಪ್ಪುವುದು. ಈ ಸಾರಿಯ ಲೇಖನಗಳು ವೈವಿಧ್ಯಮಯವಾಗಿವೆ. ಎಲ್ಲ ಆಸಕ್ತಿಗಳನ್ನೂ ಸಾಕಷ್ಟಾದರೂ ಪೂರೈಸಬೇಕೆಂಬ ತುಡಿತದಲ್ಲಿ ಜಿ. ಆರ್. ಶ್ರಮಿಸಿದ್ದಾರೆ ಎಂದರೆ ಅದು ಇಡೀ ಸಂಪಾದಕ ವರ್ಗಕ್ಕೆ ಸಲ್ಲುತ್ತದೆ.

ವಿ. ಚಂದ್ರಶೇಖರ ನಂಗಲಿ ಅವರ ಲೇಖನ 'ಕನ್ನಡ ಸಂಸ್ಕೃತಿಯಲ್ಲಿ ಅನ್ಯ ಮತ್ತು ಅನನ್ಯತೆಯ ಸಂಘರ್ಷಗಳು' ಕುತೂಹಲಕಾರಿಯಾಗಿದೆ. ಅವರು ಕೊಡುವ ಉದಾಹರಣೆಗಳು ಮನನಮಾಡಬೇಕಾದವು. 'ಲಿಂಗ್ವಿಸ್ಟಿಕ್ ಡೆಮಾಕ್ರಸಿ'ಗೆ 'ಭಾಷಿಕ ಪ್ರಜಾಪ್ರಭುತ್ವ', 'ಲಿಂಗ್ವಿಸ್ಟಿಕ್ ಡಿಕ್ಟೇಟರ್‌ಶಿಪ್'ಗೆ 'ಭಾಷಿಕ ಸರ್ವಾಧಿಕಾರ' ಎಂದು ಆಡಳಿತ ಕನ್ನಡದಲ್ಲಿ ಕೊಟ್ಟಿರುವುದರ ಬಗೆಗೆ ಅವರಿಗೆ ಅಸಮಾಧಾನವಿದೆ. ಇವುಗಳನ್ನು 'ಜನನುಡಿ ಆಡಳಿತ' ಹಾಗೂ 'ಭಾಷಾ ದಬ್ಬಾಳಿಕೆ' ಎಂದರೆ ಆಗುವುದೆ ?

ಮೈಸೂರು **ಡಾ|| ಕೆ. ಎಸ್. ಭಗವಾನ್**

ವಿಶೇಷಾಂಕದ ವಿಶೇಷತೆ ಶ್ರೀಮತಿ ಮಾಯಾರಾವ್ ಅವರ ಸಂದರ್ಶನ. ರಷ್ಯನರ ಆಳವಾದ ಅಧ್ಯಯನವನ್ನು ಅಮೆರಿಕನ್ನರೊಂದಿಗೆ ಹೋಲಿಸಿರುವುದು, ನೃತ್ಯಾಭ್ಯಾಸ ಮಾಡುವಾಗ ಶಿಕ್ಷಣಾರ್ಥಿ ಪಾಲಿಸಬೇಕಾದ ರೀತಿ ರಿವಾಜುಗಳು ಎಲ್ಲವನ್ನು ಸಂದರ್ಶನಕಾರರು ಸಮರ್ಥವಾಗಿ ಹೊರತಂದಿದ್ದಾರೆ. ಪುಟ ಸಂಖ್ಯೆ ೨೧ರಲ್ಲಿ ಜಾನಪದ ವಸ್ತು ಸಂಯೋಜನೆ ಮಾಡಿರುವ ವಿಚಾರವಾಗಿ ಮಾಯಾರಾವ್ ಹೇಳಿದ '...ಮಣಿಪುರಕ್ಕೆ ಹೋದಾಗ ಮಣಿಪುರಿ, ಆಂಧ್ರಕ್ಕೆ ಹೋದಾಗ ಒಡಿಸ್ಸಿ...' ಎಂದು ಮುದ್ರಿತವಾಗಿರುವುದು ಬಹುಶಃ ಮುದ್ರಾದೋಷವೇ ? "ಒಡಿಸ್ಸಾಗೆ ಹೋದಾಗ ಒಡಿಸ್ಸಿ" ಆಗಬೇಕಾಗಿತ್ತು ಅಥವಾ "ಆಂಧ್ರಕ್ಕೆ ಹೋದಾಗ ಕೂಚಿಪುಡಿ" ಎಂದಾಗಬೇಕಾಗಿತ್ತಲ್ಲವೆ ?

ಮೈಸೂರಿನಲ್ಲಿ ಕೆಲವು ವರ್ಷಗಳ ಹಿಂದೆ ವೀಣೆ ಶೇಷಣ್ಣ ಭವನದಲ್ಲಿ 'ವೀಣಾ ಉತ್ಸವ'ವನ್ನು ಸಂಗೀತ ನೃತ್ಯ ಅಕಾದೆಮಿಯು ಏರ್ಪಡಿಸಿದ್ದಾಗ ಅಕಾದೆಮಿಯ ಅಧ್ಯಕ್ಷೆಯಾಗಿದ್ದ ಶ್ರೀಮತಿ ಮಾಯಾರಾವ್ ಅವರನ್ನು ನೃತ್ಯಪಟುಗಳೆಯ ಕೆ. ರಾಮಮೂರ್ತಿ ರಾವ್ ಅವರು ಪರಿಚಯಿಸಿದ್ದರು. ಕಾರ್ಯಕ್ರಮದ ಛಾಯಾಚಿತ್ರ ತೆಗೆಯುವ ಜವಾಬ್ದಾರಿಯನ್ನು ನನಗೆ ವಹಿಸಲಾಗಿತ್ತು. ಅದನ್ನು ನೆನೆಯುತ್ತೇನೆ. ಸೌಜನ್ಯಪೂರ್ಣ, ಆತ್ಮೀಯ ನಡವಳಿಕೆಯು ಮಾಯಾರಾವ್ ಅವರ ವೈಶಿಷ್ಟ್ಯವಾಗಿದ್ದು, ಭಾರತೀಯ ನೃತ್ಯ ವೈವಿಧ್ಯತೆಯನ್ನು ಹೊರದೇಶದಲ್ಲಿ ಪರಿಚಯ ಮಾಡಿಕೊಟ್ಟ ಮಾಯಾರಾವ್ ಅವರಿಗೆ ನನ್ನ ಅಭಿನಂದನೆಗಳು.

ಶ್ರೀಮತಿ ಭಾರ್ಗವಿ ನಾರಾಯಣ ಅವರ ಲೇಖನ ಕೂಡ ಗಮನಾರ್ಹ. ರಂಗಭೂಮಿಯೇ 'ಭಾರ್ಗವಿ' ಎಂದರೂ ತಪ್ಪಿಲ್ಲ! ಅವರು ಒಂದು ಮಾತ್ರ ಬರೀಲಿಲ್ಲ! ಲವ್ ಅಟ್ ಫಸ್ಟ್ ಸೈಟ್ ಹೇಗಾಯ್ತು? ಮದ್ವೆ ಎಲ್ಲಾಯ್ತೂಂತ ! ನಿಜಕ್ಕೂ ಕಲಾವಿದರ ಮಧ್ಯೆ ಆಕರ್ಷಣೆ ಹುಟ್ಟುವುದು ರಂಗ ಚಟುವಟಿಕೆಗಳ ಮಧ್ಯೆಯೇ! ಪಾತ್ರಗಳಿಗೆ ಜೀವ ತುಂಬುವ 'ಭಾರ್ಗವಿ' ಅವರದು ಸಹಜಾಭಿನಯ, ಶ್ಲಾಘನೀಯವಾದ್ದು.

ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಡಿವಿಕೆ ಮೂರ್ತಿಯವರ ಸೇವೆ ಅನನ್ಯವಾದುದು. ಅವರ ಶಿಸ್ತು, ಅಚ್ಚುಕಟ್ಟುತನ ಇವುಗಳಿಂದ ಮನ ಸೆಳೆಯುತ್ತಿದ್ದ ಆತ್ಮೀಯರು. ಕನ್ನಡದ ಅನೇಕ ಹೊಸ ಬರಹಗಾರರನ್ನು ಸಾಹಿತ್ಯಪ್ರಪಂಚಕ್ಕೆ ಪರಿಚಯಿಸಿದ ಡಿವಿಕೆ ಮೂರ್ತಿ ಅವರ ಪುಸ್ತಕಗಳನ್ನು ನೋಟ ಮಾತ್ರದಿಂದಲೇ ಗುರುತಿಸಿ, ಇದು ಡಿವಿಕೆ ಮೂರ್ತಿ ಅವರ ಪ್ರಕಾಶನದ ಪುಸ್ತಕ ಎಂದು ಹೇಳಬಹುದಿತ್ತು. ಅವರಿಗೆ ಸಲ್ಲಿಸಿದ ನುಡಿನಮನ ಸಕಾಲಿಕ.

ಮೈಸೂರು **ಕೊ. ಸು. ನರಸಿಂಹಮೂರ್ತಿ**



'ಬೆತ್ತಲೆ ಜಗತ್ತು' ಎಂಬಂತಹ ಪುಸ್ತಕದ ಜಾಹೀರಾತು ಪ್ರಕಟಿಸದೇ ಇದ್ದರೆ 'ಹೊಸತು' ಎಂಬ ಧೀಮಂತ ವೈಚಾರಿಕ ಪತ್ರಿಕೆಯ ವಿಶೇಷ ಸಂಚಿಕೆ ಮೂಡಿಬರಲು ಸಾಧ್ಯವಿಲ್ಲವೆ ? ವಿಶೇಷ ಸಂಚಿಕೆಗೊಂದು ಕಪ್ಪು ಚುಕ್ಕೆ !!

ನಂಜನಗೂಡು **ಸಂತೋಷ ಗುಡ್ಡಿಯಂಗಡಿ**

ವಿಶೇಷಾಂಕ ತುಂಬ ಸುಂದರವಾಗಿ ಮೂಡಿಬಂದಿದೆ. ಎಲ್ಲ ಲೇಖನಗಳೂ ವೈಚಾರಿಕತೆಯನ್ನು ಹೆಚ್ಚಿಸುವಂತಿವೆ. ಕತೆಗಳು ಮತ್ತು ಕವಿತೆಗಳು ಸೃಜನಶೀಲ ಮನಸ್ಸುಗಳಿಗೆ ಉತ್ತೇಜಕವಾಗಿವೆ. ಹನಿಗವಿತೆಗಳು ಕಪಾಳಕ್ಕೆ ಹೊಡೆಯುವಂತಿವೆ. ಆದರೆ ವಿವಿಧ ಕವಿಗಳ ಹನಿಗಳನ್ನು ಬಳಸಿಕೊಂಡಿದ್ದರೆ, ಏಕತಾನತೆಯಿಂದ ದೂರವಾಗಬಹುದಿತ್ತು.

'ಹೊಸತು' ಎಂದಿನಂತೆ ಹೊಸತಾಗಿದೆ.

*ಗಂಗಾವತಿ* **ವಿ. (ಹೆಸರನ್ನು ಪೂರ್ತಿಯಾಗಿ ನಮೂದಿಸಿಲ್ಲ)**

೨೦೧೦ರ 'ಹೊಸತು' ಇನ್ನೂ ಅಭ್ಯಾಸ ಮಾಡುತ್ತಿರುವಾಗಲೇ ಕೆಲವು ತುಂಬಿ ಬಂದ ಭಾವನೆಗಳನ್ನು ವ್ಯಕ್ತಪಡಿಸುತ್ತಿದ್ದೇನೆ. 'ಹೊಸತು'ಗಳ ವಿಚಾರ ಯಾವಾಗಲೂ ಹೊಸತಾಗಿಯೇ ಇರುತ್ತವೆ. ಒಮ್ಮೆ ಓದಿದರೆ ಮತ್ತೂ ಒಮ್ಮೆ ಓದಬೇಕೆನ್ನುವ ಸಂಪಾದಕೀಯ ವಿಚಾರಗಳು. ಇಲ್ಲಿ ಹಿಂದೂ ಧರ್ಮದ ಹೆಸರಿನಲ್ಲಿ ನಡೆಯುವ ಕೆಲ ನಂಬಿಕೆಗಳ ಪುನರಾವರ್ತನೆ ಇಂಗ್ಲೆಂಡ್‌ದಲ್ಲೂ ನಡೆಯುವುದನ್ನು ನೀವು ಚೆನ್ನಾಗಿ ಎತ್ತಿ ತೋರಿಸಿರುವಿರಿ, ಸಾಕಷ್ಟು ಉದಾಹರಣೆಗಳನ್ನು ಕೊಟ್ಟಿರುವಿರಿ. ಇದಕ್ಕಿಂತ ಬೇರೆ ನಿದರ್ಶನ ಬೇಕೆ ?

'ಮಾಧ್ಯಮ ಸ್ವಾತಂತ್ರ್ಯ, ಜವಾಬ್ದಾರಿ ಎಂಬ ವಸ್ತುನಿಷ್ಠತೆ ಎಂಬ ಮರೀಚಿಕೆಗಳು' - ಡಾ|| ಎಚ್.ಎಸ್. ಈಶ್ವರ ಅವರ ಲೇಖನದಲ್ಲಿ ಇಂದಿನ ಪತ್ರಕರ್ತರಿಗೂ ತಿಳಿಸಿ ಹೇಳುವಂಥ ವಿಚಾರಗಳು ಇವೆ. ಕೆನಡಾ ಕವಿತೆ ಅನುವಾದ ಮಾಡಿದ ಡಾ|| ಬಿ. ಎ. ಸನದಿಯವರ 'ಜಾನ್ ಫ್ಲಿನ್' ಒಂದು ಸಂವಾದದ ಚಿತ್ರ.

ಅವನ ವೇತನದಲ್ಲಿ ಮೂರು ವಾರದ ಬದುಕು
ಸಾಗುವುದು, ಬರಿಗೈಯೆ ಉಳಿದ ಸಮಯ !
ನಾಲ್ಕನೆಯ ವಾರವೂ ಬದುಕಬೇಕೆಂದಿರಲು
ಸೆರೆಮನೆಯ ಆಸರವ ತಾನಾಗಿ ಅರಸಬೇಕು.
ಇದು ನನ್ನ ಭಾರತೀಯ ಜೀವನವೂ ಅಹುದು.

ಒಟ್ಟಾಗಿ ಓದುಗರಿಗೆ ಅನುಭವಗಳ ರಸ ಉಣಿಸುವ ನಿಮ್ಮ 'ಹೊಸತು' ಪತ್ರಿಕೆಗೆ ಧನ್ಯವಾದಗಳು !

ಬೆಳಗಾವಿ **ವಿಜಯಕುಮಾರ್, ಸಂಪಾದಕರು 'ಹಳ್ಳಿಯ ಸಂದೇಶ'**

ವಿಶೇಷ ಸಂಚಿಕೆ ಬಹಳ ವಿಳಂಬವಾಗಿ ತಲುಪಿತು. ವಿಳಂಬವಾದರೂ ಶೀಘ್ರ ತಲುಪುವಂತಾಗಲು ಖ್ಯಾತ ಲೇಖಕ ಬೇದ್ರೆ ಮಂಜುನಾಥರೂ ಕಾರಣಕರ್ತರಾದರು. ವರ್ಷದ ಸಂಚಿಕೆ ಕಂಡು-ಓದಿ ಅಮಿತಾನಂದವಾಯ್ತು. 'ಸ್ಪರ್ಧೆ'ಯ ನೆಪದಲ್ಲಿ ಅಸಹಾಯಕತೆಯನ್ನು ಪ್ರದರ್ಶಿಸಿ ತಮ್ಮ ಬೇಳೆ ಬೇಯಿಸಿಕೊಳ್ಳುವ ಪತ್ರಿಕೆಗಳ ನಡುವೆ 'ಹೊಸತು' ನಿತ್ಯನೂತನವಾಗಿ ತನ್ನ ಸಾಮಾಜಿಕ, ಶೈಕ್ಷಣಿಕ ಬದ್ಧತೆಗಳನ್ನು ಮೌಲಿಕವಾಗಿ ಎತ್ತಿಹಿಡಿದ ಸಂಪಾದಕೀಯ ಅರ್ಥಪೂರ್ಣ. ಈ ಹಿನ್ನಲೆಯಲ್ಲಿ ಕೇಂದ್ರ-ರಾಜ್ಯದ ನಾಯಕರುಗಳ ಅವಕಾಶವಾದಿತನಗಳನ್ನು ವಸ್ತುನಿಷ್ಠವಾಗಿ ವಿಶ್ಲೇಷಿಸಿದ್ದು ಪತ್ರಿಕಾ ಸಂಪಾದನೆ ಬಗ್ಗೆ ಅಭಿಮಾನವೆನ್ನಿಸಿತು. "ವಿಜ್ಞಾನಿ ರಾಧಾಕೃಷ್ಣನ್ ಅವರನ್ನು ಟೀಕಿಸಲಾಗಿದೆ, ಕ್ಷಮೆ ಕೇಳಬೇಕು" ಎಂಬ ಪತ್ರಕ್ಕೆ ಸಂಪಾದಕರ ಟಿಪ್ಪಣಿ ಸಕಾರಣವಾಗಿತ್ತು. ವೈಯಕ್ತಿಕ ನಂಬಿಕೆ-ನಡವಳಿಕೆಗಳು ನಮ್ಮ ನಮ್ಮ ಮನೆಯಲ್ಲಿರಬೇಕೇ ವಿನಾ ಸಾರ್ವಜನಿಕ ಬದುಕಲ್ಲಿ ಪ್ರದರ್ಶಿಸುವುದು ಉಚಿತವಲ್ಲ.

ವಿಶೇಷ ಸಂಚಿಕೆಯ ಪುಟ ತೆರೆದಂತೆಲ್ಲಾ ಒಟ್ಟು ವ್ಯವಸ್ಥೆಯ ಕಾಯಕಲ್ಪಕ್ಕೆ ಅಗತ್ಯವಾದ ಮೌಲಿಕ ಬರಹಗಳೇ ರಾರಾಜಿಸುತ್ತಿವೆ. ಸಂದರ್ಶನ ಬರಹಗಳಂತೂ 'ಹೊಸತು'ವಿನ ಬದ್ಧತೆಯ ನಡೆಯನ್ನು ಪ್ರತಿಬಿಂಬಿಸುತ್ತವೆ.

ಚಿತ್ರದುರ್ಗ **ಚನ್ನಬಸವ ಪುತ್ತೂರ್ಕರ**

ಜಗತ್ತಿನ ಸಾಕ್ಷೀಪ್ರಜ್ಞೆಯಂತಿರುವ ಅದ್ಭುತ ಚಿಂತಕ ನೋಮ್ ಚೋಮ್‌ಸ್ಕಿಯವರ ಸಂದರ್ಶನ ತುಂಬ ಮೌಲಿಕವಾದುದು

ಒಂದೆರಡು ಭಿನ್ನಧೋರಣೆಯ ವ್ಯಕ್ತಿಗಳ ಪರಿಚಯ ಬಿಟ್ಟರೆ ಮಿಕ್ಕಂತೆ ವಿಶೇಷ ಸಂಚಿಕೆ ಮೈದುಂಬಿಕೊಂಡಿದೆ. ಜಾಹಿರಾತುಗಳೂ ಸ್ವಲ್ಪ ಹೊರೆ (ಹೆಚ್ಚು) ಎನಿಸಿದರೂ ಈಗಿನ ಸಂದರ್ಭದಲ್ಲಿ ಅದು ಅನಿವಾರ್ಯ ಕೂಡ

ಹೌದು. ನಿಮ್ಮ ಬದ್ಧತೆಯನ್ನು ಮೀರಿಯೂ ಸಂಚಿಕೆ ವೈವಿಧ್ಯತೆಯಿಂದ ಕೂಡಿರುವುದು ಗಮನಾರ್ಹ.

ಅಜ್ಞಾತನಾದ ನನ್ನಂಥವನಿಗೂ ನಿಮ್ಮ ಪತ್ರಿಕೆಯಲ್ಲಿ ಅವಕಾಶ ಕಲ್ಪಿಸಿಕೊಟ್ಟದ್ದಕ್ಕೆ ತುಂಬ ಕೃತಜ್ಞ.

ಬೆಂಗಳೂರು — ಬಿ. ರಾಜಣ್ಣ

ವಿಶೇಷಾಂಕವು ಎಂದಿನಂತೆ ಹೊಸತು ಹೊಸತಾಗಿಯೇ ಇದೆ. ಸಂದರ್ಶನಗಳ ವಿಭಾಗದಲ್ಲಿ ನೃತ್ಯಕಲಾವಿದೆ ಮಾಯಾರಾವ್‌ರೊಂದಿಗಿನ ಸಂದರ್ಶನ ಗಮನ ಸೆಳೆಯುವಂತಿದೆ. ಜೊತೆಗೆ ರಂಗಕಲಾವಿದೆ ಭಾರ್ಗವಿ ನಾರಾಯಣರ ಸ್ವಾನುಭವಗಳ ನಿರೂಪಣೆ ಚೆನ್ನಾಗಿದೆ. ಅಮೆರಿಕಾದ ನೋಮ್ ಚೋಮ್‌ಸ್ಕಿಯವರೊಡನೆ ಶ್ರೀ ಕೆ. ಎಸ್. ಪಾರ್ಥಸಾರಥಿಯವರು ನಡೆಸಿದ ಸಂದರ್ಶನ ಈ ವರ್ಷದ ಹೈಲೈಟ್ ಎನ್ನಬಹುದು. ಹೆಸರನ್ನು ನೋಡಿದಾಗ ಚೋಮ್‌ಸ್ಕಿ ಎನ್ನುವರು ರಷ್ಯನ್ ಇರಬಹುದು ಎನ್ನುವಂತಿದೆ. ಆದರೆ ಅಮೆರಿಕಾದಂತಹ ಬಂಡವಾಳಶಾಹಿ ದೇಶದಲ್ಲಿದ್ದುಕೊಂಡು ಅವರು ಸಾಮೂಹಿಕ ಜಾಗೃತಿ ಮತ್ತು ಸಾಮಾಜಿಕ ಜಾಗೃತಿಯ ಬಗ್ಗೆ ಹೊಂದಿರುವ ಕಳಕಳಿ ಭಾರತದಂತಹ ಅಭಿವೃದ್ಧಿಪರ ದೇಶದವರಾದ ನಮಗೆ ಆಪ್ತವಾಗಿ ಕಾಣುತ್ತದೆ. ವಿಶೇಷವಾಗಿ ಭಾರತದ ಆರ್ಥಿಕ-ಸಾಮಾಜಿಕವಾಗಿ ದುರ್ಬಲರಾದ ದಲಿತರು ಮತ್ತು ಕಾರ್ಮಿಕವರ್ಗದ ಪರವಾಗಿ ದುಡಿಯುತ್ತಿರುವ ಎಡಪಂಥೀಯರು ಚೋಮ್‌ಸ್ಕಿಯವರಿಂದ ಸ್ಫೂರ್ತಿ ಹೊಂದಬಹುದು. ಈ ದಿಸೆಯಲ್ಲಿ ಹಿರಿಯ ಚೇತನ ಬಿ. ವಿ. ಕಕ್ಕಿಲ್ಲಾಯ ಅವರ ಲೇಖನ ಮಾರ್ಗದರ್ಶಕವಾಗಿದೆ.

ಲೋಕಾಯುಕ್ತ ಸಂತೋಷ ಹೆಗಡೆಯವರ ಬಿಚ್ಚು ನುಡಿಗಳು ಆಡಳಿತ ವರ್ಗದವರ ಮನತಟ್ಟುವಂತಿವೆ. ಸೀಯಾರ್ಕೆ ಮತ್ತು ಮುರಳೀಧರ ಅವರು ಅಳಿದ ವರ್ಷದ ಪರಿಣಾಮಗಳನ್ನು ಸಮಗ್ರವಾಗಿ ಬಿಂಬಿಸಿದ್ದಾರೆ. ಡಾ|| ಶೈಲಜಾರವರ ಹೊಸ ವರ್ಷದ ಹೊಸ ನೋಟ ಮನಮೆಚ್ಚುವಂತಿದೆ. ಚೆನ್ನವೀರ ಕಣವಿ ಮತ್ತು ಸುಬ್ರಾಯ ಚೊಕ್ಕಾಡಿಯವರ ಕವಿತೆಗಳು ಕಾವ್ಯಧಾರೆಗೆ ಮೆರಗು ನೀಡುವಂತಿವೆ.

ರವಿ ರಾ. ಅಂಚನ್ ಅವರು ನಾರಾಯಣಗುರುಗಳು ಮತ್ತು ಸ್ವಾಮಿ ವಿವೇಕಾನಂದ ಅವರ ಕುರಿತು ಬರೆದಿರುವ ಲೇಖನ ಈರ್ವರು ಸುಧಾರಕರೂ ತಮ್ಮ ಸಮಾಜ ಸುಧಾರಣೆಯ ನಿಲುವುಗಳು ತಮ್ಮ ಹಿಂಬಾಲಕರಿಂದಲೇ ಅವಗಣನೆಗೆ ಗುರಿಯಾದ ಬಗ್ಗೆ ಕೊಟ್ಟ ಕೆಲವು ಆಂತರಿಕ ವಿವರಗಳು ಮನಕರಗುವಂತಿವೆ :

''ಜಗದ ಜನರೆಲ್ಲಾ ಒಂದು, ಅವರಿಗೆಲ್ಲಾ ದೇವರೊಬ್ಬನೇ ಎಂದ ನಾರಾಯಣಗುರು, ವಿಶ್ವದ ಜನರೆಲ್ಲರೂ ಒಂದೇ, ವಿಶ್ವಭ್ರಾತೃತ್ವವೇ ಹಿಂದೂಧರ್ಮದ ಸಾರ ಎಂದ ಸ್ವಾಮಿ ವಿವೇಕಾನಂದರು ಇವರೀರ್ವರಿಂದಲೂ ಅವರ ಜನಾಂಗ ಮತ್ತು ಸಮಾಜ ಸಾಕಷ್ಟು ಸೌಲಭ್ಯ ಸವಲತ್ತುಗಳನ್ನು ಹೊಂದಿಯೂ ಕೊನೆಗಾಲದಲ್ಲಿ ಅವರನ್ನು ಸಂಕುಚಿತತ್ವಕ್ಕೆ ಬಂಧಿಸಲು ಯತ್ನಿಸಿದ ವರ್ತನೆಯಿಂದ ಮನನೊಂದರು'' ಎಂದು ಅವರು ಹೇಳಿದ್ದಾರೆ. ಕರ್ನಾಟಕದ ಬಸವಣ್ಣನವರ ಗತಿಯೂ ಇದೇ ಆಯಿತೆಂದು ಅವರು ನೊಂದು ನುಡಿದಿದ್ದಾರೆ.

ಅಂತರರಾಷ್ಟ್ರೀಯ ಜೀವವೈವಿಧ್ಯ ವರ್ಷಕ್ಕೆ ಅಂಕಿತವಾಗಿ ಡಾ|| ಎಸ್. ಎಸ್. ಲೀಲಾ ಅವರು ಬರೆದ ಚಿಕ್ಕದಾದರೂ ಚೊಕ್ಕವಾದ ಲೇಖನ ವೈವಿಧ್ಯಪೂರ್ಣವಾಗಿದೆ. ಅರವಿಂದ ಚೊಕ್ಕಾಡಿ ಮುಂತಾದವರ ಲೇಖನಗಳು, ಕವನಗಳು, ಸಂಚಿಕೆಗೆ ಶೋಭೆ ತರುವಂತಿವೆ. ಒಟ್ಟಿನಲ್ಲಿ ತಮ್ಮ ಪತ್ರಿಕೆ 'ಲೆಫ್ಟ್ ಟು ದಿ ಸೆಂಟರ್' ಆಗಿದ್ದರೂ ವಿಶಾಲವಾದ ಪ್ರಗತಿಪರ ಧೋರಣೆಯನ್ನು ಪಾಲಿಸಿಕೊಂಡು ಬರುತ್ತಿರುವುದು ಶ್ಲಾಘನೀಯ ಎಂದು ಹೇಳಬಹುದಾಗಿದೆ.

ದಾವಣಗೆರೆ — ಎ. ಜಿ. ವಿರೂಪಾಕ್ಷಪ್ಪ

### ಫೆಬ್ರವರಿ ಸಂಚಿಕೆ

ಸಂಚಿಕೆಯ ಮುಖಪುಟ ಅರ್ಥಪೂರ್ಣ. ಸಂಪಾದಕೀಯವು ಕೊಡದಲ್ಲಿ ಸಾಗರವನ್ನೇ ತೋರಿಸಿದಂತಿತ್ತು.

ಎಂ. ಮಂಜುನಾಥ ಬಮ್ಮನಕಟ್ಟಿಯವರ 'ಸಹಕಾರಿ ತತ್ವದ ಬಗೆಗಿನ ರಂಗದ ಹರಿಕಾರ', ಸಹಕಾರ ಪಿತಾಮಹ ಶಿ. ಸ. ಪಾಟೀಲರ ಪರಿಚಯಾತ್ಮಕ ಲೇಖನ ಓದಿಸುತ್ತ ಹೋಯಿತು. ಒಂದು ಶತಮಾನದ ಇತಿಹಾಸ ಸಹಕಾರಿ ರಂಗಕ್ಕಿದೆ. ಆದ್ದರಿಂದು ಜನಸಾಮಾನ್ಯರಿಗೆ ನಿಲುಕದ ಸಂಸ್ಥೆ. ಸ್ವಾರ್ಥಿಗಳ ಕೈಗೊಂಬೆಯಾಗಿ ಆರ್ಥಿಕ ದಿವಾಳಿತನದಿಂದ ಸಹಕಾರಿ ಬ್ಯಾಂಕು, ಸಂಘಗಳು ನೆಲಕಚ್ಚುತ್ತಿವೆ. ಸಹಕಾರಿ ಕ್ಷೇತ್ರದ ಸಕ್ಕರೆ-ಗಿರಣಿಗಳು ಸ್ತಬ್ಧಗೊಳ್ಳುತ್ತಿರುವುದು ವಿಪರ್ಯಾಸ.

ಲಕ್ಷ್ಮೇಶ್ವರ — ಬಸವರಾಜ ಶಿ. ಬಾಳೇಶ್ವರಮಠ

### ರಾಷ್ಟ್ರೀಯ ವಿಜ್ಞಾನ ಸಮ್ಮೇಳನ

ಈ ವರ್ಷದ ಜನವರಿ ತಿಂಗಳ ಮೊದಲನೇ ವಾರದಲ್ಲಿ ತಿರುವನಂತಪುರದಲ್ಲಿ ಜರುಗಿದ ರಾಷ್ಟ್ರೀಯ ವಿಜ್ಞಾನ ಸಮ್ಮೇಳನದಲ್ಲಿ ೭೦೦೦ಕ್ಕೂ ಅಧಿಕ ಸಂಖ್ಯೆಯಲ್ಲಿ ವಿಜ್ಞಾನಿಗಳು ದೇಶದ ವಿವಿಧ ಭಾಗಗಳಿಂದ ಆಗಮಿಸಿ ಭಾಗವಹಿಸಿದ್ದರು. ಸಮ್ಮೇಳನವನ್ನು ಆಯೋಜಿಸಲು ಐದು ಕೋಟಿ ರೂಪಾಯಿಗಳನ್ನು ವ್ಯಯಿಸಲಾಯಿತು. ಸಮ್ಮೇಳನದಲ್ಲಿ ಹಲವು ಸಂಶೋಧನಾ ಪ್ರಬಂಧಗಳನ್ನು ಮಂಡಿಸಲಾಯಿತು. ಸರ್ಕಾರದ ಖರ್ಚಿನಲ್ಲಿ ಜರುಗುವ ಈ ಸಮ್ಮೇಳನಗಳ ಕಾರ್ಯಕಲಾಪಗಳೂ ಯಾವುದೋ ಅಂತರರಾಷ್ಟ್ರೀಯ ನಿಯತಕಾಲಿಕ ಪ್ರಕಟಣೆಗಳಲ್ಲಿ ಪ್ರಕಟವಾಗುವುದೇ ಹೊರತು ಸಾರ್ವಜನಿಕರಿಗೆ ವರದಿ ಮಾಡುವ ಪರಿಪಾಠವಿಲ್ಲ.

ತಿರುವನಂತಪುರದ ಸಮೀಪದ ಹಳ್ಳಿಯಲ್ಲಿ ೬೫ ವರ್ಷದ ವೃದ್ಧ ರೈತನೋರ್ವ ತನ್ನ ಒಂದು ಎಕರೆ ಜಮೀನಿನಲ್ಲಿ ನೆಟ್ಟ ಭತ್ತದ ಫಸಲು ಕೈಗೆಟುಕುವುದೋ ಇಲ್ಲವೋ ಎಂಬ ಚಿಂತೆಗೆ ಈಡಾಗಿದ್ದ. ವಿಜ್ಞಾನ ಸಮ್ಮೇಳನಗಳು ಕೃಷಿಕ್ಷೇತ್ರದ ಸಮಸ್ಯೆಗಳನ್ನಾಗಲಿ ಅಥವಾ ಪರಿಸರ ಸಂಬಂಧಿತ ಬಿಕ್ಕಟ್ಟುಗಳನ್ನಾಗಲಿ ಚರ್ಚಿಸಲು ವೇದಿಕೆಯಾಗುವುದಿಲ್ಲ. ಇತ್ತೀಚೆಗೆ ಜಾಗತಿಕ ತಾಪಮಾನದ ದುಷ್ಪರಿಣಾಮಗಳನ್ನು ತಡೆಗಟ್ಟಲು ಕೋಪನ್‌ಹೇಗನ್ ನಗರದಲ್ಲಿ ನಡೆದ ವಿಶ್ವ ಸಮ್ಮೇಳನ ಕೂಡ ಜನಸಾಮಾನ್ಯರಲ್ಲಿ ಆಸಕ್ತಿ ಮೂಡಿಸಲಿಲ್ಲ. ಈ ವಿದ್ಯಮಾನಗಳಿಂದ ಮೂಡುವ ಪ್ರಶ್ನೆಯೆಂದರೆ ಸಮಾಜದಲ್ಲಿ ವಿಜ್ಞಾನದ ಪಾತ್ರವೇನು ?

ವೈಜ್ಞಾನಿಕ ಸಂಶೋಧನಾ ಕೇಂದ್ರಗಳು ನಮ್ಮ ದೇಶದಲ್ಲಿ ಸರ್ಕಾರದ ಅನುದಾನದಿಂದ ಸಾರ್ವಜನಿಕ ವಲಯದಲ್ಲಿ ಬೆಳೆದುಬಂದಿವೆ. ಆದರೆ ವೈಜ್ಞಾನಿಕ ಸಂಶೋಧನೆಗಳು ಬಂಡವಾಳಶಾಹಿ ಉದ್ಯಮಗಳಿಗೆ ಉತ್ಪಾದನಾ ವೆಚ್ಚ ಕಡಿಮೆ ಮಾಡುವ ತಂತ್ರಜ್ಞಾನ ಒದಗಿಸುವುದಕ್ಕೆ ಸೀಮಿತವಾಗಿವೆ. ಆಹಾರ ಪದಾರ್ಥಗಳ ಬೆಲೆ ಶೇಕಡ ೧೯ರಷ್ಟು ಏರಿದೆ. ಸಕ್ಕರೆ ಬೆಲೆ ಕೆ.ಜಿ. ಒಂದಕ್ಕೆ ೪೨ ರೂ., ಅಕ್ಕಿ ಬೆಲೆ ೩೫ ರೂ. ಹಾಗೂ ತೊಗರಿಬೇಳೆ ಬೆಲೆ ಕೆ.ಜಿ. ಒಂದಕ್ಕೆ ೬೦ ರೂ.ಗಳನ್ನು ಮುಟ್ಟಿವೆ. ಇಂತಹ ಸನ್ನಿವೇಶದಲ್ಲಿ ಸಮಾಜವಿಮುಖಿ ವಿಜ್ಞಾನ ಸಮ್ಮೇಳನಗಳು ಅರ್ಥಹೀನವಾಗುತ್ತವೆ, ಅಂತರರಾಷ್ಟ್ರೀಯ ಸಮಾವೇಶಗಳು ಕೇವಲ ಪ್ರತಿಷ್ಠೆಯ ದ್ಯೋತಕಗಳಾಗುತ್ತವೆ.

ಭಾರತೀಯ ಬಾಹ್ಯಾಕಾಶ ಸಂಶೋಧನಾ ಸಂಸ್ಥೆ ೨೦೦ ಕೋಟಿ ರೂ.ಗಳನ್ನು ಖರ್ಚುಮಾಡಿ ಚಂದ್ರನ ಮೇಲ್ಮೈ ಪದರದಲ್ಲಿ ನೀರಿನ ಅಂಶವಿರುವ ಸತ್ಯವನ್ನು ಬಹಿರಂಗಗೊಳಿಸಿದೆ. ಸಾರ್ವಜನಿಕ ಹಣವನ್ನು ಈ ರೀತಿ ವ್ಯಯಿಸುವುದು ಎಷ್ಟರಮಟ್ಟಿಗೆ ಸರಿ ಎಂದು ಆಲೋಚಿಸಬೇಕಾಗಿದೆ. ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ಆಯವ್ಯಯ ಪತ್ರ ಮತ್ತು ಯೋಜನೆಗಳನ್ನು ರೂಪಿಸುವಾಗ ದೇಶ ಎದುರಿಸುತ್ತಿರುವ ಸವಾಲುಗಳು ಮತ್ತು ಆದ್ಯತೆಗಳನ್ನು ಗಮನದಲ್ಲಿಟ್ಟುಕೊಳ್ಳಬೇಕಾಗುತ್ತದೆ. ಕೃಷಿಕ್ಷೇತ್ರದಲ್ಲಿ ಇಂದು ಸಣ್ಣ ಮತ್ತು ಮಧ್ಯಮ ವರ್ಗದ ರೈತರು ತೀವ್ರ ಬಿಕ್ಕಟ್ಟನ್ನು ಎದುರಿಸುತ್ತಿದ್ದಾರೆ. ಹಸಿರು ಕ್ರಾಂತಿ ನೆವದಲ್ಲಿ ರಾಸಾಯನಿಕ ಗೊಬ್ಬರಗಳ ಬಳಕೆ ಅತಿಯಾಗಿ ಸಣ್ಣ ಹಾಗೂ ಮಧ್ಯಮವರ್ಗದ ರೈತರು ರಾಸಾಯನಿಕ ಗೊಬ್ಬರ ಮತ್ತು ಬೀಜಗಳನ್ನು ಕೊಳ್ಳಲು ಅಸಮರ್ಥರಾಗಿದ್ದಾರೆ. ವಿದೇಶಗಳಿಂದ ಪ್ರಚಾರವಾಗುತ್ತಿರುವ ಆನುವಂಶಿಕವಾಗಿ ಮಾರ್ಪಾಡು ಮಾಡಲಾದ ತಳಿಗಳ ಹಾವಳಿ ಹೆಚ್ಚಾಗಿದೆ. ಬಿಟಿ ಬದನೆ ಬಂದರೆ ಅದರ ಬಳಕೆಯಿಂದ ಉಂಟಾಗುವ ಅಪಾಯಗಳು ಜನಸಾಮಾನ್ಯರಿಗೆ ಮನವರಿಕೆಯಾಗಿಲ್ಲ.

ವರ್ಷಕ್ಕೊಮ್ಮೆ ಸಾರ್ವಜನಿಕರ ವೆಚ್ಚದಲ್ಲಿ ಜರುಗುವ ವೈಜ್ಞಾನಿಕ ಸಮ್ಮೇಳನಗಳು ದೇಶದ ನಾನಾ ಭಾಗಗಳಲ್ಲಿ ತಲೆದೋರುತ್ತಿರುವ ಭೀಕರ ಬರಗಾಲ ಮತ್ತು ಪ್ರವಾಹಗಳು ಮುಂದೊಡ್ಡುತ್ತಿರುವ ಸವಾಲುಗಳತ್ತಲೂ ಗಮನ ಹರಿಸಬೇಕು.

ಬೆಂಗಳೂರು — ಶಂಕರನಾರಾಯಣ

### ಜ್ಯೋತಿ ಬೆಳಗುತಿದೆ ಇನ್ನೂ



ಯಾರು ಹೇಳಿದರು
ಬಸು ಜ್ಯೋತಿ
ದೀಪ ಆರಿತೆಂದು ?

ನಶ್ವರ ದೇಹದಲಿ
ಸಜೀವ ಆತ್ಮ
ಆತ್ಮಜ್ಯೋತಿ
ಬೆಳಗುತಿದೆ
ನೋಡುವ ಕಂಗಳು ಬೇಕು.

ದೇಹದೊಳಗಿನ ಕಣ್ಣು
ನೋಡಲು ಕೊಟ್ಟಾನ !
ಆ ಕಣ್ಣಿನಿಂದ
ನೋಡುವನವ ಎಲ್ಲನು
ನೀವೂ ನೋಡಿರಿ ಅವನನು
ಅವನ ಬೆಳಕನು
ಅವನ ಬೆಳಕಿನ ದಾರಿ
ತುಳಿದು ಪ್ರಾರ್ಥಿಸಿರಿ
ಕೊಡು ಶಾಂತಿ ಎಂದು !

೨೦-೧-೨೦೦೦ — ವಿ. ವಿಜಯಕುಮಾರ್



# ರಂಗನಾಯಕಿ: ಅವಳು ಕನ್ನಡದ ನಾಯಕಿ

**ಡಾ॥ ವಿಜಯಾ**

"**ನಾ**ನು ಇಲ್ಲೇ ನಾಟಕ ಮಾಡ್ತನಿ. ಅದ್ಯಾವ ಮಗ ಬಂದು ನನ್ನ ಇಲ್ಲಿಂದ ಎಬ್ಬಿಸ್ತಾನೊ ನೋಡೇ ಬಿಡ್ತೇನಿ'' ಅಂತ ಘರ್ಜಿಸುವ ಸಿಂಹಿಣಿಯಾಗಿತ್ತು ಆ ಹೆಣ್ಣು. ಬದುಕು, ವೃತ್ತಿ ಎರಡೂ ಕಡೆ ಇಂಥ ಸವಾಲುಗಳೇ ಎದುರಾದವು. ಸೆಡ್ಡುಹೊಡೆದು ನಿಲ್ಲದಿದ್ದರೆ ಜೀವಂತ ಹೂತುಹಾಕಲೂ ಹೇಸದ ವ್ಯವಸ್ಥೆಯೊಂದು ಎದುರಿಗಿತ್ತು. ಕನ್ನಡದ ವೃತ್ತಿರಂಗ ಕಲಾವಿದೆ ಚಿಂದೋಡಿ ಲೀಲಾ (೧೯೩೭-೨೦೧೦)ರ ಬದುಕಿನ ಪ್ರತಿಕ್ಷಣವೂ ಇಂಥ ದಿಟ್ಟತನ, ಛಲವನ್ನು ಬೇಡುವಂಥವಾಗಿದ್ದವು.

ಲೀಲಾ ಅವರ ವೃತ್ತಿರಂಗ ಕುರಿತು, ಚಿಂದೋಡಿ ಕುಟುಂಬದ ವಿವಿಧ ಶಾಖೆಗಳ ಕುರಿತು ಸಾಕಷ್ಟು ವಿಷಯಗಳನ್ನು ಓದುಗರು, ಪ್ರೇಕ್ಷಕರು ಬಲ್ಲರು. ಅದೊಂದು ಇಡೀ ಕುಟುಂಬ ರಂಗಭೂಮಿಗಾಗಿ ತೇದುಕೊಂಡ ಯಶೋಗಾಥೆ.

ಈಗ ಚಿಂದೋಡಿ ಲೀಲಾ ಅನಂತದಲ್ಲಿ ಲೀನವಾಗಿದ್ದಾರೆ. ಆಕೆಯ ಬದುಕು-ವೃತ್ತಿಯ ಎಲ್ಲ ವಿವರಗಳಿಗೂ ಹೋದರೆ ಅದೊಂದು ಬೃಹತ್ ಗ್ರಂಥವಾದೀತು. ಅವರ ಧೈರ್ಯ-ಸ್ಥೈರ್ಯ, ಹೋರಾಟದ ಬದುಕು ಮತ್ತು ಮುಕ್ತ-ಮುಗ್ಧ ಮನಸ್ಸನ್ನು ಪರಿಚಯಿಸುವ ಕೆಲವು ಘಟನೆಗಳನ್ನು ಮಾತ್ರ ಇಲ್ಲಿ ನೆನಪು ಮಾಡಿಕೊಳ್ಳಲಾಗಿದೆ. ಆತ್ಮೀಯ ಗೆಳತಿ, ಒಂದೇ ಊರಿನವರು. ಜಗಳ-ಸರಸ, ಗೌರವಗಳನ್ನು ಜೊತೆಗಿಟ್ಟುಕೊಂಡೇ ಸಾಗಿ ಬಂದವರು ನಾವು. ದಾವಣಗೆರೆಯವರೇ ಆದ ಚಂದೂಲಾಲ್ ಜೈನ್ ಯಾವಾಗಲೂ ''ನೀನು ಪತ್ರಕರ್ತೆಯಾಗಿ ಸಾಹಸಿ, ನಾನು ಸಿನಿಮಾ ಮಾಡಿದ ಸಾಹಸಿ, ಚಿಂದೋಡಿ ಲೀಲಮ್ಮ ನಾಟಕ ಮಾಡಿ ಗೆದ್ದ ಸಾಹಸಿ. ದಾವಣಗೆರೆಯಿಂದ ಬಂದು ಗೆದ್ದವರವ್ವ ನಾವು'' ಎನ್ನುತ್ತಿದ್ದರು. ಇಂದು ಅವರಿಬ್ಬರೂ ಇಲ್ಲ!

ಲೀಲಾ ಒಂದು ಹಂತದಲ್ಲಿ ಕಂಪನಿಯ ಮಾಲಕಿಯಾಗಿ ಸ್ವತಂತ್ರ ಕಂಪನಿ ಕಟ್ಟಿದಾಗಿನ ಕೆಲವು ಸಂಗತಿಗಳನ್ನು ಇಲ್ಲಿ ಪ್ರಸ್ತಾಪಿಸುತ್ತಿದ್ದೇನೆ.

ಉತ್ತರ ಕರ್ನಾಟಕದ ಹೆಸರಾಂತ ಕಲಾವಿದ ಗುಡಗೇರಿ ಬಸವರಾಜರ ನೆರವಿನಿಂದ ಗೋಕಾಕದಲ್ಲಿ ತನ್ನದೇ ಆದ ಕೆ.ಬಿ.ಆರ್. ಡ್ರಾಮಾ ಕಂಪನಿಯ ಶಾಖೆಯನ್ನು ಪ್ರಾರಂಭಿಸಿದರು ಲೀಲಾ. ಹಾಗೇ ಬೆಳಗಾವಿಯಲ್ಲೂ. ಬೆಳಗಾವಿಯ ರಂಗಮಂದಿರದ ಮಾಲೀಕ ಕಿರಿಕಿರಿ ಮನುಷ್ಯ. ರಂಗಪ್ರಯೋಗ ಯಶಸ್ವಿ ಆದಾಗೆಲ್ಲ ಸ್ಥಳ ಖಾಲಿಮಾಡಿ ಅಂತ ವರಾತ ಮಾಡುತ್ತಿದ್ದ. ಒಂದಿಷ್ಟು ಹೆಚ್ಚು ಹಣ ಪಡೆಯೋದು ಅದರ ಹಿಂದಿನ ಹುನ್ನಾರ.

ನಾಟಕದ ನೂರನೇ ಪ್ರಯೋಗದ ದಿನ ಅಲ್ಲಿಯ ಪ್ರಭಾವಿ ರಾಜಕಾರಣಿ ಶಂಕರಾನಂದರನ್ನು ಆಹ್ವಾನಿಸಿದ್ದರು ಲೀಲಾ. ಬೆಳಗಾವಿಯ ಕಮೀಷನರ್ ಕೃಷ್ಣಮೂರ್ತಿ, ನ್ಯಾಯವಾದಿ ಬೆಲ್ಲದ್ ಮೊದಲಾದವರ ಸಮ್ಮುಖದಲ್ಲಿ ಲೀಲಮ್ಮ ತಮ್ಮ ಸಂಕಷ್ಟ ವಿವರಿಸಿ, ''ನನಗೊಂದಷ್ಟು ಭೂಮಿ ಕೊಡಿ, ಸ್ವಂತಕ್ಕೆ ಥಿಯೇಟರ್ ಕಟ್ಟಿ ನಾಟಕ ಆಡ್ತೀನಿ'' ಎಂದರು.

ಛಲ ಬಿಡದ ಪ್ರಯತ್ನಗಳ ಫಲವಾಗಿ ಕಮೀಷನರ್ ಕೃಷ್ಣಮೂರ್ತಿ ಅವರು ಒಂದು ಸ್ಥಳವನ್ನು ೧೧ ತಿಂಗಳ ಲೀಜ್‌ಗೆ ಕೊಟ್ಟರು. ಲೀಲಮ್ಮ ರಂಗಮಂದಿರ ಕಟ್ಟಿದರು. ಜನತೆ, ಹಿರಿಯರು ಬೆನ್ನಿಗಿದ್ದು ಅತ್ಯುತ್ತಮವಾದ ಮರ ಇತ್ಯಾದಿ ಒದಗಿಸಿದ್ದರು. ಲೀಲಮ್ಮ ಸ್ವಂತ ಸ್ಥಳದಲ್ಲಿ ನಾಟಕ ಆಡಿದರು. ಕೈಗೆತ್ತಿಕೊಂಡುದೆಲ್ಲಕ್ಕೂ ಯಶಸ್ಸೇ. ನೂರು, ಇನ್ನೂರು ಪ್ರಯೋಗಗಳು ಸಾಮಾನ್ಯವಾಗಿಬಿಟ್ಟವು. ಆದರೆ ಇದ್ಯಾವುದೋ ಕನ್ನಡ ಹೆಂಗಸು ಇಲ್ಲಿ ಬಂದು ಮೆರೀತಾಳಲ್ಲ, ಇವಳನ್ನು ಓಡಿಸಲೇಬೇಕು ಎಂದು ಮರಾಠಿ ಭಾಷಾಂಧರ ಒಂದು ಗುಂಪು ತೀರ್ಮಾನಿಸಿಬಿಟ್ಟಿತ್ತು. ಏಳಲು, ಕೂರಲು, ಮಾತಾಡಲೂ ಆಗದ ಹಾಗೆ ಕಿರುಕುಳಗಳ ಸುರಿಮಳೆಯೇ ಆಯಿತು. ಕಾಮನಹಬ್ಬದ ದಿನ ರಂಗಮಂದಿರಕ್ಕೆ ಬೆಂಕಿಯನ್ನು ಹಾಕಿತು ಆ ದುಷ್ಟ ಗುಂಪು! ಸಿರ್ಸಿ ಕ್ಯಾಂಪಿನಲ್ಲಿದ್ದ ಲೀಲಮ್ಮ ಸುದ್ದಿ ತಿಳಿದೊಡನೆ ಬಂದರು. ಮರದಲ್ಲಿ ಕಟ್ಟಿದ ರಂಗಮಂದಿರ ಉರಿದುಹೋಗಿತ್ತು. ಆ ಬೂದಿಯ ರಾಶಿಯ ನಡುವೆ ನಿಂತು ''ಯಾ ಭಾಡ್ಯಾ ಈ ಬೆಂಕಿ ಹಾಕ್ಯಾನೊ ? ಇಷ್ಟೇನಾ ಕಿಸಿದಿದ್ದು? ಇನ್ನೇನ ಮಾಡೀರ್‍ರಲೇ ನನ್ನೇ ಸುಡಾವ್ರೇನು ? ಅದೂ ಆಗೇ ಬಿಡ್ಲಿ, ಬರ್‍ರಲೇ'' ಅಂತ ಅಬ್ಬರಿಸಿತು ಆ ಹೆಣ್ಣು. ''ಇದೇ ಜಗಾದಾಗ ಮರದ್ದಲ್ಲೇ ಕಬ್ಬಿಣದಾಗ ಥೇಟರ್ ಕಟ್ತೀನಿ. ನೋಡ್ರಿರ್‍ರಿ...'' ಅಂತ ಶಪಥ ಮಾಡಿದ್ದ ಆ ರಂಗನಾಯಕಿಯನ್ನು ಅಷ್ಟಕ್ಕೆ ಸುಮ್ಮನೆ ಬಿಡಲೇ ಇಲ್ಲ ಆ ಜನ. ನಾಟಕದೊಳಗೆ ಆಕೆ ಗಂಟುಮೂಟೆ ಕಟ್ಟಿಕೊಂಡು ಮನೆಬಿಟ್ಟು ತನ್ನ ವಿಧಿಯನ್ನು ದೂಷಿಸುತ್ತ ಹೊರನಡೆವ ಒಂದು ದೃಶ್ಯವಿತ್ತು. ಅದನ್ನೊಂದು ಫೋಟೋ ತೆಗೆದು ಮರಾಠಿ ಪತ್ರಿಕೆಗಳಲ್ಲಿ ಈ ಕನ್ನಡದ ಜೋಗವ್ವನ್ನ ಹಿಂಗೆ ಗಂಟುಮೂಟೆ ಕಟ್ಟಿಕೊಂಡು ಹೋಗೋ ಹಾಗೆ ಮಾಡ್ತೀವಿ ಅಂತ ಬರೆಸಿತು. ಲೀಲಮ್ಮನ ನಾಟಕದ ಪ್ರಚಾರಕ್ಕೇ ಅವಕಾಶ ಕೊಡುತ್ತಿರಲಿಲ್ಲ. ಒಂದು ಜಟಕಾಗಾಡಿ, ಅದಕ್ಕೆ ಹಾಕಿದ ಪ್ರಚಾರ ಸಾಮಗ್ರಿ, ಪ್ರಚಾರ ಮಾಡುವ ವ್ಯಕ್ತಿ ಮಾತಿಗಿಳಿದರೆ ಕಲ್ಲು ತೂರಾಟ, ತಡೆ, ಅವಾಚ್ಯ ಶಬ್ದಗಳ ಸುರಿಮಳೆ. ಕಡೆಗೆ ಲೀಲಮ್ಮನೇ ಗಾಡಿಯೇರಿದರು. ಎರಡೂ ಕಡೆ ಪರದೆ ಹಾಕಿಕೊಂಡರು. ಗಾಡಿ ಹೊರಟಿತು. ಪ್ರಚಾರ ಪ್ರಾರಂಭ. ಗದ್ದಲ ಮಾಡುವ ಜನರ ಗುಂಪು ಅಡ್ಡಗಟ್ಟಿತು. ಈಗ ಪರದೆ ಸರಿಸಿದ ಲೀಲಮ್ಮ ಕೆಳಗಿಳಿದು ನಿಂತರು. ಮುಂದೆ ನಿಂತವನ ಶರಟಿನ ಪಟ್ಟಿ ಹಿಡಿದು ''ಯಾಕಲೇ, ಹೆಂಗ್ಯತಿ ? ... ಕಡೀತೆತ್ಯಾ ನಿನಗ ? ಯಾಕ ... ಯಾಕ ಪ್ರಚಾರ ಮಾಡಬಾರ್ದು'' ಅಂತ ಒಂದು ಬೀಸಿದರು. ''ಬರ್‍ರಪಾ... ಯಾರು ಬರ್ತೀರಿ ಬರ್‍ರೀ'' ಅಂತ ಕೂಗು ಹಾಕಿದರು. ಗುಂಪು ಗಪ್ ಚಿಪ್... ಲೀಲಮ್ಮ ನಿಂತೇ ಇದ್ದರು. ಯಾರೂ ಮುಂದೆ ಬರಲಿಲ್ಲ. ಆನಂತರವೂ ಲೀಲಮ್ಮ ಇದ್ದರೆ ಸುದ್ದಿಗೆ ಬರದೆ ಬಾಲ ಮುದುರಿಕೊಂಡು ಓಡುತ್ತಿತ್ತು ಆ ಕುಬುದ್ಧಿಯ ಯುವ ತಂಡ. ಗೋಕಾಕ, ಬೆಳಗಾವಿ ಎರಡೂ ಕಡೆ ನಾಟಕಗಳು. 'ಹಳ್ಳಿ ಹುಡುಗಿ'ಯಂತೂ ಅತ್ಯಂತ ಜನಪ್ರಿಯ ನಾಟಕ.



''ನಾನು ಇಲ್ಲೇ ನಾಟಕ ಮಾಡ್ತನಿ. ಅದ್ಯಾವ ಮಗ ಬಂದು ನನ್ನ ಇಲ್ಲಿಂದ ಎಬ್ಬಿಸ್ತಾನೊ ನೋಡೇ ಬಿಡ್ತೇನಿ'' ಅಂತ ಘರ್ಜಿಸುವ ಸಿಂಹಿಣಿಯಾಗಿತ್ತು ಆ ಹೆಣ್ಣು. ಬದುಕು, ವೃತ್ತಿ ಎರಡೂ ಕಡೆ ಇಂಥ ಸವಾಲುಗಳೇ ಎದುರಾದವು. ಸೆಡ್ಡು ಹೊಡೆದು ನಿಲ್ಲದಿದ್ದರೆ ಜೀವಂತ ಹೂತುಹಾಕಲೂ ಹೇಸದ ವ್ಯವಸ್ಥೆಯೊಂದು ಎದುರಿಗಿತ್ತು. ಕನ್ನಡದ ವೃತ್ತಿರಂಗ ಕಲಾವಿದೆ ಚಿಂದೋಡಿ ಲೀಲಾ ಅವರ ಬದುಕಿನ ಪ್ರತಿಕ್ಷಣವೂ ಇಂಥ ದಿಟ್ಟತನ, ಛಲವನ್ನು ಬೇಡುವಂಥವಾಗಿದ್ದವು.



ರಾಮಕೃಷ್ಣ ಹೆಗಡೆಯವರು ಭೇಟಿಕೊಟ್ಟರು. ಲೀಲಮ್ಮನ ಸಾಹಸಕ್ಕೆ ತಲೆ ಬಾಗಿದರು. ''ಲೀಲಮ್ಮ ನಿಮಗೆ ೪೦ ವರ್ಷಕ್ಕೆ ಲೀಜ್‌ಗೆ ಜಾಗ ಕೊಡ್ತಿದೀನಿ. ಧೈರ್ಯವಾಗಿ ನಾಟಕ ಮಾಡಿ'' ಅಂತ ಹುರಿದುಂಬಿಸಿದರು. ಲೀಲಮ್ಮನ ಹೋರಾಟ ಕೇವಲ ವೈಯಕ್ತಿಕ ಸಂಗತಿಯಾಗಿ ಉಳಿಯಲಿಲ್ಲ. ಈಗ ಲೀಲಮ್ಮ ಬೆಳಗಾವಿಯ ಕನ್ನಡ ಚಳವಳಿಯ ನಾಯಕಿಯಾಗಿಬಿಟ್ಟರು. ಲೀಲಮ್ಮನ ಸಮಸ್ಯೆ ಕನ್ನಡದ ಸಮಸ್ಯೆಯಾಗಿ ಪರಿವರ್ತಿತವಾಗಿಹೋಗಿತ್ತು. ಬೆಳಗಾವಿಯ ಕನ್ನಡಿಗರಿಗೆ, ಪತ್ರಕರ್ತರಿಗೆ ಲೀಲಮ್ಮನಂಥವರು ಬೇಕಾಗಿತ್ತು. ಕನ್ನಡವನ್ನು ಹತ್ತಿಕ್ಕುವ ಪ್ರವೃತ್ತಿಯನ್ನು ಎದುರಿಸಿ ನಿಲ್ಲುವ ಅವರ ಅಪೇಕ್ಷೆಗೆ ಲೀಲಮ್ಮ ದಾರಿ ತೋರಿದಂತಾಯಿತು. ಪ್ರತಿಯೊಂದು ಹಂತದಲ್ಲೂ ಲೀಲಮ್ಮನ ಜೊತೆಗೆ ಪತ್ರಕರ್ತರು, ಬಹುತೇಕ ಎಲ್ಲ ಮಠಾಧೀಶರು, ನ್ಯಾಯವಾದಿಗಳು ಹೊಯ್ ಕೈಯಾಗಿ ನಿಂತರು. ಹೋರಾಟ ಸಾಗಿತು.

ಲೀಲಮ್ಮ ಈಗ ಬೆಳಗಾವಿಯ ಸದಾಶಿವನಗರದಲ್ಲಿ ಕೆ.ಬಿ.ಆರ್. ಕಲಾಕೇಂದ್ರ ಕಟ್ಟಿದರು. ಎಲ್ಲಕ್ಕೂ ಕಬ್ಬಿಣದ ಸರಳುಗಳ ಬಳಕೆಯಾಗಿತ್ತು. ರಂಗಮಂದಿರಕ್ಕೆ ಬೆಂಕಿ ಹಚ್ಚಿ ಕಾಮನ ಹಬ್ಬ ಮಾಡಿಕೊಳ್ಳುವವರಿಂದ ರಕ್ಷಿಸಿಕೊಳ್ಳಬೇಕಿತ್ತಲ್ಲ!

ಲೀಲಮ್ಮ ಎಂಥ ಜಾಣೆ ಎಂದರೆ, ಈಗ ಹೊಸ ನಾಟಕ ಬರೆಸಿದರು. ಅದು 'ಛತ್ರಪತಿ ಶಿವಾಜಿ' ! ಶಿವಾಜಿಯ ಪಾತ್ರದಲ್ಲೂ ರಂಗದ ಮೇಲೆ ಬಂದರು. ಈಗ ಮರಾಠಿಗರು ಯಾರ ಮೇಲೆ ಕಲ್ಲು ಹೊಡೀತಾರೆ ? ಹೊಡೆದರೆ ಅವರ ಆರಾಧ್ಯದೈವ ಶಿವಾಜಿಯನ್ನೇ ಅಪಮಾನಿಸಿದಂತಲ್ಲವೆ ? ಇದು ಲೀಲಮ್ಮನ ಸಮಯಸ್ಪೂರ್ತಿ, ಜಾಣತನ, ಮುತ್ಸದ್ದಿತನ, ಧೈರ್ಯ ! ಕಥೆ ಅಲ್ಲಿಗೇ ಮುಗಿಯಲಿಲ್ಲ. ಎಂ.ಇ.ಎಸ್. ಪ್ರಾಬಲ್ಯ ಹೆಚ್ಚಿತ್ತು. ನಗರಪಾಲಿಕೆಯನ್ನೇ ಆವರಿಸಿಕೊಳ್ಳುವ ಸಂಭವ ಇತ್ತು. ಹಾಗೇನಾದರೂ ಆದರೆ ಅಧಿಕಾರ ಬಳಸಿ ಲೀಲಮ್ಮನ್ನ ಅಡಗಿಸಿಬಿಡುತ್ತಿದ್ದರು. ಲೀಲಮ್ಮ ಚುನಾವಣೆಗೇ ನಿಂತುಬಿಟ್ಟರು. ಬೆಳಗಾವಿಗೆ ಬೆಳಗಾವಿಯೇ ಹೌಹಾರಿತು. ಲೀಲಮ್ಮ ಮನೆ ಮನೆಗೆ ಹೋದರು. ''ತಾಯಿ, ಕನ್ನಡದ ಮಗಳು ನಿಮ್ಮ ಉಡಿಯಾಗೆ ಹಾಕ್ಕೊಂರಿ'' ಅಂದರು. ಲೀಲಮ್ಮನಿಗಾಗಿ ಬೆಳಗಾವಿಯ ಹೆಣ್ಣುಮಕ್ಕಳೆಲ್ಲ ಒಗ್ಗೂಡಿದರು. ಅದು ಹೇಗೆ ಲೀಲಮ್ಮ ಗೆಲ್ಲೋದಿಲ್ಲ ನಾವೂ ನೋಡ್ತೀವಿ ಅಂತ ಸೆರಗು ಸಿಕ್ಕಿಸಿ ಬೀದಿಗಿಳಿದರು. ಲೀಲಮ್ಮ ಅವರ ಪಾಲಿಗೆ ಕಿತ್ತೂರು ಚೆನ್ನಮ್ಮ, ಹಳ್ಳಿ ಹುಡುಗಿ, ಗುಣಸಾಗರಿ, ಪೊಲೀಸನ ಮಗಳು, ಶಿವಾಜಿಯನ್ನು ಪ್ರತಿರೂಪಿಸಿದ ಛಾತಿವಂತೆ ! ಲೀಲಮ್ಮ ಮಾಡಿದ ತಪ್ಪಾದರೂ ಏನು ? ಅವಳಿಗೇಕೆ ಹಿಂಸೆ ಮಾಡ್ತಾರೆ ? ಬೆಳಗಾವಿ ಕನ್ನಡದ ನೆಲ, ಇಲ್ಲಿ ಕನ್ನಡ ನಾಟಕ, ಕನ್ನಡದ ಹುಡುಗಿ ಬದುಕಬಾರದಾ ಎಂಬ ಪ್ರಶ್ನೆ ಅವರ ಮುಂದಿತ್ತು. ಸಹಸ್ರ ಆನೆಯ ಬಲವಾಯಿತು ಈ ಧ್ಯೇಯ. ಲೀಲಮ್ಮ ಗೆದ್ದುಬಿಟ್ಟರು !

ಲೀಲಮ್ಮನ, ರಂಗಭೂಮಿಯ ಉಳಿವಿಗೆ ಅಧಿಕಾರ ಬೇಕಾಯಿತು, ಆ ಮೂಲಕ ಕನ್ನಡದ ಅಸ್ತಿತ್ವವೂ ಗಟ್ಟಿಯಾಯಿತು. ಲೀಲಮ್ಮನ ಜೊತೆ ಜೊತೆಗೂ ದುಡಿದರು ಸೋದರಳಿಯ ಬಂಗಾರೇಶ್. ಎರಡೆರಡು ಕಡೆ ನಾಟಕ ಪ್ರದರ್ಶನ. ೨೦೦೦ಕ್ಕೂ ಹೆಚ್ಚು ಪ್ರದರ್ಶನ ನೀಡಿ ಜಯಭೇರಿ ಬಾರಿಸಿದರು ಲೀಲಮ್ಮ.

ಈ ಎತ್ತರಕ್ಕೇರಿದ ಲೀಲಮ್ಮನ ಬದುಕೇನೂ ತುಂಬ ಚಂದವಾಗಿರಲಿಲ್ಲ. ಇನ್ನೂ

## ವಿವಾಹಿತ ಹುಡುಗಿಯರ ಸಮಸ್ಯೆ

ಅಬಲಾವಾದವಲ್ಲದೆ
ಬೇರೇನೂ ಬರೆಯಲಾರರು ವಿವಾಹಿತ ಹುಡುಗಿಯರು
ಕಾರಣ ಹೆಣ್ಣಾಗಿ ಉಳಿಯುವುದಿಲ್ಲ ಅವರು
ವಾದಿ ಮತ್ತು ವಿವಾದಿಗಳಾಗುತ್ತಾರೆ.

ಆಗ ವಿವಾಹಿತ ಹುಡುಗಿಯರು -
ಹುಡುಗಿಯರಾಗಿಯೂ ಇರಲಾರರು
ಕಾರಣ ಓರ್ವನ ಹೆಂಡತಿ, ಹೆಂಗಸು ಆಗ ಅವರು
ಅಥವಾ ಕರೆಯಲ್ಪಡುತ್ತಾರೆ ಅತ್ತಿಗೆಯ ಹೆಸರಿನಿಂದ

ಅತಿ ಹೆಚ್ಚು ಕಷ್ಟ ಉದ್ಭವಿಸುವುದು -
ಕವನ ಬರೆಯಲು ಪ್ರಾರಂಭಿಸಿದಾಗ ವಿವಾಹಿತ ಹುಡುಗಿಯರು
ಜನ ಅವರಿಂದ ಶಿಷ್ಟತೆ ಮತ್ತು ಸುಂದರ ಆಚರಣೆ ನಿರೀಕ್ಷಿಸುತ್ತಾರೆ
ಅವರೂ ಸಹ ಸುಂದರ ಗೃಹಸ್ಥ ಜೀವನಕ್ಕೆ ಸಂಬಂಧಿಸಿದ
ಕವಿತೆ ಬರೆಯುತ್ತಾರೆ
ಸಮಾಜ ಪರಿವರ್ತನೆ ಮತ್ತು ಕುಟುಂಬ ವ್ಯವಸ್ಥೆಯ ಬಗ್ಗೆ
ವಾಕ್ಯಗಳಿರುತ್ತವೆ ಎರಡು-ಮೂರು

ಕವನ ಅದೆಷ್ಟು ವಿಷಮ
ಬಹಳಷ್ಟು ಮಂದಿ ಬಲ್ಲರು ಇದನ್ನು
ವಿವಾಹಿತರಿಂದ ಹೀಗಾಗಿ
ಪ್ರೇಮ-ಕವನಗಳನ್ನು ನಿರೀಕ್ಷಿಸುವುದಿಲ್ಲ ಯಾರೂ !

ವಿವಾಹಿತ ಹುಡುಗಿಯರು
ಇಂದು ಕುರಿ ಮತ್ತು ನಾಯಿಗಳ ಬಗ್ಗೆ
ಬರೆಯುತ್ತಿದ್ದಾರೆ ಕವನ
ವಿವಾಹಿತ ಹುಡುಗಿಯರು
ಬಹು ಸುಂದರವಾಗಿ ಬರೆಯಬಲ್ಲರು ಭೂತದ ಕಥೆಗಳನ್ನು
ಅವರ ಬರಹಗಳಲ್ಲಿ ನಡು-ನಡುವೆ
ಕಾಣಿಸಿಕೊಳ್ಳುತ್ತಾರೆ ಪತಿ ದೇವರೂ !



ಮೂಲ : **ಸೇವಂತಿ ಘೋಷ್**
ಕನ್ನಡಕ್ಕೆ : **ಡಿ. ಎಸ್. ಶ್ರೀನಾಥ್**

'ನವನೀತ', ೨ನೇ ಅಡ್ಡರಸ್ತೆ, ಅಣ್ಣಾಜಿರಾವ್ ಲೇಔಟ್, ೧ನೇ ಹಂತ, ವಿನೋಬಾನಗರ, ಶಿವಮೊಗ್ಗ - ೫೭೭ ೨೦೪

ಅಂಗಳದಲ್ಲಾಡುತ್ತಿದ್ದ ಐದರ ಬಾಲೆಗೆ ಬಣ್ಣ ಹಾಕಬೇಕಾಗಿ ಬಂದಿತ್ತು. ಎಲ್ಲವೂ ಹಿತಕರವೇನಲ್ಲ. ಇಡೀ ಕುಟುಂಬ ರಂಗದಲ್ಲಿ ತೊಡಗಿಕೊಂಡಿತ್ತು. ಬಹುತೇಕ ಮನೆಯವರಿಗೆಲ್ಲ ವೀರಮ್ಮ, ವೀರಪ್ಪ ಹೆಸರುಗಳು. ಹಾಗೇ ಈಕೆಯೂ ವೀರಮ್ಮಳಾಗಿ ರಂಗವೇರಿದ್ದಳು. ಮುಂದೆ ಚಿಂದೋಡಿ ಕಂಪನಿಯ ರಂಗನಾಯಕಿ ಚಿಂದೋಡಿ ಲೀಲಾ ಆದರು. ಆ ದಿನಗಳಲ್ಲಿ ಆಡಿದ ನಾಟಕಗಳಿಗೆ ಪ್ರತಿಭಾವಂತ ಕಲಾವಿದ ಅಣ್ಣನೇ ನಾಯಕ. ತಂಗಿಯೇ ನಾಯಕಿ. ಪ್ರಿಯ-ಪ್ರೇಯಸಿ, ಗಂಡ-ಹೆಂಡತಿ ಎಲ್ಲವೂ ಅಣ್ಣ-ತಂಗಿಯೇ ನಿರ್ವಹಿಸುವುದು ಅನಿವಾರ್ಯವಾಯಿತು. ''ಹುಡುಕಿದರೂ ಆ ದಿನಗಳಲ್ಲಿ ಇಂಥ ಸುಲಕ್ಷಣೆ ಅಭಿನಯಿಸಲು ಸಿಗುತ್ತಿರಲಿಲ್ಲ. ವೃತ್ತಿಯೂ ಕುಟುಂಬದ ಒಳಗಿನಿಂದಲೇ ಸಾಗಿ ಬಂದಿತ್ತು. ಹೀಗಾಗಿ ಅಣ್ಣ-ತಂಗಿ ಎಲ್ಲ ಪಾತ್ರಗಳಲ್ಲೂ ಅನೇಕ ವರ್ಷಗಳ ಕಾಲ ಹೀಗೆ ನಾಯಕ-ನಾಯಕಿಯಾಗಬೇಕಾಯಿತು'' ಅನ್ನುತ್ತಾರೆ ಕಲಾವಿದ, ಚಿತ್ರ ನಿರ್ದೇಶಕ ಚಿಂದೋಡಿ ಬಂಗಾರೇಶ್. ಅದು ಕೇವಲ ಪಾತ್ರವೇ ಆದರೂ ಅನೇಕ ಸಂದರ್ಭಗಳು ಇರಸುಮುರಸು ತಂದದ್ದುಂಟು. ಆದರೆ ಆ ದಿನಗಳಲ್ಲಿ ಪ್ರಣಯ ಸನ್ನಿವೇಶಗಳಲ್ಲಿ ಅತಿರೇಕವಿರಲಿಲ್ಲ ಎಂಬುದೊಂದೇ ಸಮಾಧಾನ. ಆದರೂ ಅನೇಕ ಆಕ್ಷೇಪ, ವ್ಯಂಗ್ಯದ ಮಾತು ಕೇಳಿದರು, ಎಲ್ಲವನ್ನೂ ಅವು ಕೆಂಡದುಂಡೆಯಾದರೂ ನುಂಗಿಕೊಂಡರು ಲೀಲಾ. ಲೀಲಾ ಅಭಿನಯಿಸಿದ ಯಾವ ನಾಟಕವೂ ಅಲ್ಪಾಯುಷಿಯಲ್ಲ ಎಲ್ಲವೂ ವರ್ಷ, ೨ ವರ್ಷ ನಡೆದವು. ಗುಣಸಾಗರಿ ಮೊದಲಾದ ನಾಟಕಗಳಿಂದ ಆಧುನಿಕ ರಿವಾಜಿಗೆ ಹೊಂದುವಂತೆ ಸಿದ್ಧಪಡಿಸಿದ 'ಹಳ್ಳಿ ಹುಡುಗಿ'ಯಂತೂ ೧೨-೧೩ ವರ್ಷ ಯಶಸ್ವೀ ಪ್ರದರ್ಶನ ಕಂಡ ದಾಖಲೆಯಿದೆ. ಇಷ್ಟಾದರೂ ಏರಿಳಿತಗಳೂ ಇದ್ದವು. ಪೈಪೋಟಿಯಿತ್ತು. ಸದಾ ಕ್ಯಾಂಪುಗಳು, ಓಡಾಟ, ಭಾರೀ ಕುಟುಂಬ, ನಿಭಾಯಿಸಬೇಕು. ಗಂಡಸರು - ಅವರ ಹೆಂಡತಿಯರು, ಉಪಪತ್ನಿಯರು ಏನೆಲ್ಲ ಸಮಸ್ಯೆಗಳು ಇದ್ದೇ ಇದ್ದವು. ಈ ನಡುವೆ ಲೀಲಮ್ಮನ ಬದುಕಿನಲ್ಲಿ ವಯೋಸಹಜವೆಂಬಂಥ ಕೆಲವು ಘಟನೆಗಳು ಸಂಭವಿಸಿದವು. ಸಂಕ್ಷಿಪ್ತವಾಗಿ ಹೇಳುವುದಾದರೆ, ಕಂಪನಿಗೆ ನೆರವಾಗುತ್ತಿದ್ದ ವ್ಯಾಪಾರಿಯೊಬ್ಬರ ಮೋಹದ ಬಲೆಗೆ ಬಿದ್ದ ಲೀಲಮ್ಮ ಗರ್ಭಿಣಿಯೂ ಆಗಿಬಿಟ್ಟರು. ಆ ಹೊತ್ತಿಗಾಗಲೇ ನಿಶ್ಚಿತಾರ್ಥದ ಹಂತದಲ್ಲಿ ಒಂದು ಸಂಬಂಧ ಮುರಿದುಹೋಗಿತ್ತು. ಈ ಶ್ರೀಮಂತನೋ ವಿವಾಹಬಂಧನ ಒಲ್ಲೆ ಅಂದ! ಅಯ್ಯಾ ಹತ್ತು ಸಮಸ್ತರೆದುರು ಬೇಡವಾದರೆ, ಮನೆಯಲ್ಲೇ ಆಪ್ತರೆದುರು ಮಾಂಗಲ್ಯ ಕಟ್ಟು ಎಂದು ಬೇಡಿದರೂ 'ಒಲ್ಲೆ'ನೆಂದ ಆ ಶೂರನೂ ಬಿಟ್ಟು ಹೊರಟೇಹೋದ. ಮತ್ತೊಮ್ಮೆ ಅವನೇ ಸಿನಿಮಾಗೆ ಸೇರಿಸುತ್ತೇನೆಂದು ಬೆಂಗಳೂರಿಗೆ ಕರೆದೊಯ್ದು ಯಾರ ಮನೆಯಲ್ಲೋ ಇಟ್ಟ. ಸಿನಿಮಾ ಗಿನಿಮಾ ಬರೀ ಸುಳ್ಳೆಂದು ತಿಳಿಯಲು ಹೆಚ್ಚು ಸಮಯ ಬೇಕಾಗಲಿಲ್ಲ. ಮಲ್ಲೇಶ್ವರದ ಮನೆಯಿಂದ ಹೊರಟು ರೈಲುಕಂಬಿಯ ಮೇಲೆ ಮಲಗಿತು ಹುಡುಗಿ. ಹೇಗೋ ಮನೆಯವರಿಗೆ ಗೊತ್ತಾಗಿ ಸಾವು ತಪ್ಪಿಸಿ ಮನೆಗೆ ಕರೆದೊಯ್ದರು. ತವರಿನವರ ಆಸರೆ ಇಲ್ಲ, ಮೋಹಿಸಿದವನಿಗೂ ಬೇಕಿಲ್ಲ, ಎಲ್ಲಿ ಹೋದಾಳು ಬಾಲೆ? ಹಲವು ನಾಟಕದ ಕಂಪನಿಗಳ ಮಾಲೀಕರ ಹತ್ತಿರ ಅವಕಾಶ ಬೇಡಿದಳು. ನೂರೆಂಟು ಮಾತಾಡಿದರು. ಮುಖ್ಯವಾಗಿ 'ನಿನ್ನ ಗರ್ಭದಲ್ಲಿರೊ ಶಿಶುವನ್ನು ತೆಗೆಸಿಹಾಕು' ಎಂದರು. 'ಒಲ್ಲೆ' ಎಂದಿತು ಮನಸ್ಸು. ಬದುಕು ಬರೀ ಸಂಕಟ-ನಿಟ್ಟುಸಿರು, ದಿಕ್ಕುಗಾಣದ ಸ್ಥಿತಿ. ಹೆತ್ತ ಮಗುವನ್ನು ಅಕ್ಕ ಗೌರಮ್ಮನಿಗೆ ಸಾಕಲು ಕೊಟ್ಟು ಮತ್ತೆ ಬಣ್ಣ ಹಚ್ಚಿ ರಂಗವೇರಿದಳು ಹುಡುಗಿ. ಮತ್ತೆಂದೂ ಹಿಂತಿರುಗಿ ನೋಡಲಿಲ್ಲ. ಬದುಕು ಪಾಠ ಕಲಿಸಿತ್ತು. ದಾವಣಗೆರೆಯ ಮಣ್ಣು ಛಲಗಾತಿಯನ್ನು ರೂಪಿಸಿ ನಿಲ್ಲಿಸಿತ್ತು. ಇನ್ನೆಲ್ಲ ಅವಳೇ ಅವಳು... ನಾಯಕಿಯೂ ಅವಳೇ ಮಾಲಕಿಯೂ ಅವಳೇ... ಅವಳೆದುರು ಉಳಿದವರು ಮಣಿದರು. ಮತ್ತೆಲ್ಲ ಏರಿಳಿತದ ನಡುವೆಯೂ ಯಶೋಗಾಥೆಯೇ. ಲೀಲಮ್ಮ ಆ ದಿನಗಳಲ್ಲೇ ದಾವಣಗೆರೆಯಲ್ಲೊಂದು ಹೋಟೆಲು ಪ್ರಾರಂಭಿಸಿದರು. ರಂಗಭೂಮಿಯಲ್ಲಿ ಕೈಕಚ್ಚಿದರೆ ಆಸರೆಗಿರಲಿ ಎಂಬುದು ದೂರಾಲೋಚನೆ. ಅದೊಂದು ಮಾಂಸಾಹಾರಿ ಹೋಟೆಲ್. ತಮಾಷೆ ಎಂದರೆ ಲೀಲಮ್ಮ ಆ ಕಾಲಕ್ಕೇ ಒಂದು ೧೬ ಎಂ.ಎಂ. ಪ್ರೊಜೆಕ್ಟರ್ ತರಿಸಿ, ಸ್ಕ್ರೀನ್ ಹಾಕಿಸಿ ಗ್ರಾಹಕರಿಗೆ ಸಿನಿಮಾ ತೋರಿಸುವ ವ್ಯವಸ್ಥೆ ಮಾಡಿದ್ದು. ಅದೊಂದು ಹೊಸ ಮಾದರಿ, ಪ್ರಾಯಶಃ ಪ್ರಥಮ. ಅದೂ ಎಂಥ ಸಿನಿಮಾ : ಕನಕದಾಸ, ಪುರಂದರದಾಸ, ಕಾಳಿದಾಸ, ಹರಿಭಕ್ತದಂಥವು. ಅಬ್ಬಾ, ಮೂಳೆ ಕಡೀತಾನೇ ಇಂಥ ಸಿನಿಮಾನೂ ನೋಡಲು ಬರುತ್ತಿದ್ದ ರಸಿಕರಿಗೇನು ಹೇಳೋಣ. ವ್ಯಾಪಾರ ಚೆನ್ನಾಗೇ ಇತ್ತು. ಆದರೆ ಒಳಗೊಳಗೇ ಶಿವಶರಣೆಯಾಗಿದ್ದ ಲೀಲಮ್ಮನಿಗೆ ಥಟ್ಟನೆ ಇದು ಸರಿಯಲ್ಲ ಅನಿಸಿತು.

ಬಂಗಾರೇಶರನ್ನು ಕರೆದು ''ತಮಾ ಇದು ಬ್ಯಾಡೊ ಮುಚ್ಚಿಬಿಡಾಣು. ನಮ್ಮದು ಶಿವಶರಣರ ಮನೆತನ. ದಾಸೋಹಕ್ಕೆ ಹೆಸರಾದ್ದು. ಇಲ್ಲ್ಯಾಕೆ ಅನ್ನಾ ಮಾರೊ ದಂಧೆ? ತಪ್ಪಾಗಿ ಹೋತು. ಮೊದ್ಲು ನಿಲ್ಲಿಸಿಬಿಡಪ್ಪಾ'' ಅಂದರು.

ಹಣದ ಹೊಳೆಯೇ ಹರಿದುಬರುತ್ತಿದ್ದರೂ ಹೋಟೆಲ್ ಮುಚ್ಚಿ ಏನೊ ತಪ್ಪು ತಿದ್ದಿಕೊಂಡೆನೆಂದು ಸಮಾಧಾನಗೊಂಡರು ಲೀಲಮ್ಮ. ಲೀಲಮ್ಮ ಬೇಕಾದಷ್ಟು ಆಸ್ತಿ ಮಾಡಿದರು. ಟೆನೆನ್ಸಿ ಆ್ಯಕ್ಟ್ ಬಂದಾಗ ಒಂದಿಷ್ಟು ಕೈಬಿಟ್ಟು ಹೋಯಿತು. ಆದರೂ ಲೀಲಮ್ಮನ ಧಾರಾಳ ಬುದ್ಧಿ ಒಂದಿಷ್ಟೂ ಕಡಿಮೆ ಆಗಲಿಲ್ಲ. ಕಂಡಹಾಗೆ, ಕಾಣದಹಾಗೆ ಆಕೆ ದಾನ ಮಾಡಿದ ಭೂಮಿ, ಹಣಕ್ಕೆ, ಎತ್ತಿ ಹಿಡಿದ ಕುಟುಂಬಗಳಿಗೆ ಲೆಕ್ಕವೇ ಇಲ್ಲ. ಆಕೆಯ ಒಳಗೇ ಇದ್ದ ಈ ದಾನಗುಣ, ದೈವಭಕ್ತಿ, ಗುರುಭಕ್ತಿಯಿಂದಾಗಿ ಎಲ್ಲ ಮಠಾಧೀಶರಿಗೂ ಅತ್ಯಂತ ಪ್ರಿಯಳಾದ ಶಿವಶರಣೆಯಾಗೇ ಉಳಿದರು.

ಒಂದು ಅನಿವಾರ್ಯ ಸಂದರ್ಭದಲ್ಲಿ ಜನಪದ ವಿದ್ವಾಂಸ ಗೊ. ರು. ಚೆನ್ನಬಸಪ್ಪನವರಿಗೂ ಬಣ್ಣ ಹಚ್ಚಿಸಿ ಪಾತ್ರ ಮಾಡಿಸಿದ್ದೊಂದು ಸ್ವಾರಸ್ಯದ ಕತೆ. ಚಿಂದೋಡಿ ಲೀಲಾ ಅವರಿಗೆ ಪದ್ಮಶ್ರೀ ಪ್ರಶಸ್ತಿ ಬಂತು. ಪ್ರಾಯಶಃ ಕನ್ನಡದ ರಂಗ ಕಲಾವಿದೆಗೆ ಬಂದ ಮೊದಲ ಬಹುದೊಡ್ಡ ಪ್ರಶಸ್ತಿ ಇದಾಗಿತ್ತು. ಬೆಂಗಳೂರಿನಲ್ಲಿ ಚಲನಚಿತ್ರ ಪತ್ರಕರ್ತರ ಪರಿಷತ್ತು ಪ್ರೆಸ್ ಕ್ಲಬ್ ಆವರಣದಲ್ಲಿ ಪ್ರೀತಿಯಿಂದ ಆಕೆಯನ್ನು ಕರೆದು ಗೌರವಿಸಿತು. ಕೊನೆತನಕ ಈ ಬಗ್ಗೆ ಕೃತಜ್ಞತೆಯ ಮಾತಾಡುತ್ತಿತ್ತು ಆ ಜೀವ. ಅದೊಂದು ತನ್ನನ್ನು ಬೆಂಗಳೂರಿನ ಪತ್ರಕರ್ತರು ಗುರುತಿಸಿ, ಗೌರವಿಸಿದರೆಂಬ ಸಂಭ್ರಮವಾಗಿತ್ತು.

ಮೈಸೂರಿನ ಲಲಿತಕಲಾ ಕಾಲೇಜಿನಲ್ಲಿ ಗುಬ್ಬಿ ವೀರಣ್ಣ ಪೀಠ ಪ್ರಾರಂಭವಾಯಿತು. ಅದು ಸಿಂಧುವಳ್ಳಿ ಅನಂತಮೂರ್ತಿಯವರ ಪರಿಶ್ರಮದ ಫಲ. ಮೂರು ದಿನಗಳ ಉತ್ಸವ.



ಜಿ. ವಿ. ಅಯ್ಯರ್, ಯೋಗಾನರಸಿಂಹ, ವಾಮನರಾವ್ ಮೊದಲಾದ ವೃತ್ತಿರಂಗಭೂಮಿಯ ಘಟಾನುಘಟಿಗಳು ಬಂದಿದ್ದರು. ಹಾಗೇ ಗೊರೂರು, ಹಾಮಾನಾ, ಶ್ರೀರಂಗರಾದಿಯಾಗಿ ಹಿರಿಯ ಸಾಹಿತಿಗಳನೇಕರು ಇದ್ದ ಸಭೆಯಲ್ಲಿ ಗುಬ್ಬಿ ವೀರಣ್ಣ ಪೀಠದ ಉದ್ಘಾಟನೆ ಮಾಡಿದ್ದು ಚಿಂದೋಡಿ ಲೀಲಾ. ಆ ಸಂಜೆ ಅವರ ಅಭಿನಯದ ನಾಟಕವೂ ಇತ್ತು. ಒಳ್ಳೆಯ ಕೆಲಸಕ್ಕೆ ಎಂದೂ 'ನ'ಕಾರವಿಲ್ಲದ, ಸಡಗರಿಸಿ ಹಾಜರಾಗುತ್ತಿದ್ದ ಸುಗುಣಿ ಚಿಂದೋಡಿ ಲೀಲಾ.

ಮುಂದೆ ಲೀಲಮ್ಮ ಕರ್ನಾಟಕ ನಾಟಕ ಅಕಾಡಮಿಯ ಅಧ್ಯಕ್ಷರಾದರು. ಅಲ್ಲಿಯವರೆಗೆ ವೃತ್ತಿ ರಂಗಭೂಮಿಯ ಯಾರಿಗೂ ಇಂಥ ಅವಕಾಶ ಸಿಕ್ಕಿರಲಿಲ್ಲ. ನಾಟಕ ಅಕಾಡಮಿ ಎಂದರೆ ಆಧುನಿಕ ರಂಗಭೂಮಿ ಮಾತ್ರ ಎಂಬಷ್ಟು ವೃತ್ತಿರಂಗವನ್ನು ಹೊರತುಪಡಿಸಿದ ಚಟುವಟಿಕೆಗಳೇ ಇದ್ದವು. ಲೀಲಮ್ಮ ಬಂದರು. ಏನೇನೂ ಗೊತ್ತಿಲ್ಲದ ಹೆಂಗಸು. ಸರ್ಕಾರೀ ನಿಯಮಗಳೋ ಅತಿ ಜಟಿಲ. ಆದರೆ ಆಕೆಯ ಇಚ್ಛಾಶಕ್ತಿ, ಮಾಡಬೇಕೆನಿಸಿದ್ದನ್ನು ಮಾಡಿಯೇ ತೀರುವೆನೆಂಬ ಛಲ. ಹೊಸದೇನಿದ್ದರೂ ಹೇವರಿಕೆಯಿಲ್ಲದೆ ತಿಳಿದುಕೊಳ್ಳುವ ಮನಸ್ಸು ಆಕೆ ಇಲ್ಲೂ 'ಸೈ' ಅನ್ನುವಂತೆ ಇರಲು ನೆರವಾದವು.

ಕೆಲವೇ ತಿಂಗಳುಗಳಲ್ಲಿ ಲೀಲಮ್ಮ ಪರಿಣತರಾದರು. ವಾರ್ಷಿಕ ಪ್ರಶಸ್ತಿಗಳಲ್ಲಿ ವೃತ್ತಿರಂಗ ಕಲಾವಿದರು ಸೇರ್ಪಡೆಯಾದರು. ಕಲಾಕ್ಷೇತ್ರ, ಅಕಾಡಮಿ ಎಂದರೆ ಮಾರುದೂರವಿದ್ದ ವೃತ್ತಿರಂಗದ ಕಲರವ ಇಲ್ಲಿಯೂ ಕೇಳಿಸತೊಡಗಿತು. ಅವಕಾಶ, ಪ್ರಶಸ್ತಿ, ನೆರವುಗಳಿಂದ ಮರೆಯಾಗಿದ್ದ ಸಾಮಾಜಿಕ ನ್ಯಾಯವನ್ನು ಲೀಲಮ್ಮ ಎಳೆದು ತಂದರು. ಆಗ ರಿಜಿಸ್ಟ್ರಾರ್ ಆಗಿದ್ದ ಕಲಾವಿದ ಶ್ರೀನಿವಾಸ್ ಜಿ. ಕಪ್ಪಣ್ಣ ಆಕೆಯ ಸಾಹಸಗಳನ್ನು ವರ್ಣಿಸಲು ಹಿಗ್ಗುತ್ತಾರೆ. ದಿನವಿಡೀ ಹೇಳಿದರೂ ಸಾಲದು ಎನ್ನುತ್ತಾರೆ.

ಒಂದು ನಾಟಕದ ಉತ್ಸವ ಮಾಡುವ ಯೋಜನೆ. ಅಕಾಡಮಿಯಲ್ಲಿ ಹಣ ಇಲ್ಲ. ನಡೀರಿ ಸರ್ಕಾರಾನೇ ಕೇಳ್ಕೋಣ ಅಂತ ಹೊರಟರು. ಆಗ ಮಂತ್ರಿ ಆಗಿದ್ದವರು ವಿಶ್ವನಾಥ್. ಅವರ ಕಚೇರಿಗೆ ನುಗ್ಗಿದ್ದರು.

''ಏನ್ರೀ ಸರ, ನಾವು ಈ ಉತ್ಸವ ಮಾಡಾಕಬೇಕು. ರೊಕ್ಕ ಇಲ್ಲ, ಕೊಡುಸ್ರಿ.'' ಹೆಚ್ಚಿನ ಹಣ ಕೊಡುವ ನಿಯಮ ಇಲ್ಲ ಅಂದರು ಆಗಿನ ಸೆಕ್ರೆಟರಿ ಚಿರಂಜೀವಿ ಸಿಂಗ್.

''ಲೀಲಮ್ಮ, ನನ್ನ ಜೇಬಿಂದ ಕೊಟ್ಟೇನು ? ನಿಯಮ ಮೀರಾದ್ಹೆಂಗೆ'' ಅಂದರು ಮಂತ್ರಿಗಳು.

''ನಿಯಮದಾಗಿದ್ದಿದ್ರೆ ಗುಮಾಸ್ತನ್ಹಂತೇಕ ಹೊಕ್ಕಿದ್ದೆ. ನೂರೊ ಇನ್ನೂರೊ ರೊಕ್ಕ ಕೊಟ್ಟು ಮಂಜೂರು ಮಾಡಿಸ್ಕಂತಿದ್ದೆ. ಮತ್ತದುಕ್ಕೇ ಅಲ್ಲೇನ್ರಿ ನಿಮ್ಮಹಂತೇಕ ಬಂದೇನಿ. ಸರ್ಕಾರಕ್ಕಾ ನಿಯಮ ಮುರಿಯಾದಾಕ್ಕೇತಿ. ಅದೇನು ಮಾಡ್ತೀರೊ ಮಾಡ್ರಿ, ಒಟ್ಟು ರೊಕ್ಕ ಕೊಡ್ರಿ'' ಅಂತ ಹಟ ಹಿಡಿದರು. ಮಂತ್ರಿಗಳನ್ನು ಪೇಚಿಗಿಟ್ಟು, ಕಡೆಗೂ ಹಣ ವಸೂಲು ಮಾಡಿ ಉತ್ಸವ ನಡೆಸೇಬಿಟ್ಟರು ಲೀಲಮ್ಮ.

ಲೀಲಮ್ಮ ಒಮ್ಮೆ ದೆಹಲಿಗೆ ಹೋದರು. ಪತ್ರಿಕಾಗೋಷ್ಠಿ ಕರೀರಿ ಅಂದ್ರು. ಕಪ್ಪಣ್ಣ ವಾರ್ತಾ ಇಲಾಖೆ ನೆರವು ಪಡೆದು ಗೋಷ್ಠಿ ಏರ್ಪಡಿಸಿದ್ದೂ ಆಯ್ತು. ಕಪ್ಪಣ್ಣಂಗೆ ದುಭಾಷಿ ಕೆಲಸ. ನೀವು ಇಲ್ಲಿಗ್ಯಾಕೆ ಬಂದಿದೀರಿ ? ಇಲ್ಲೇ ಅಕಾಡಮಿ ಇದೆಯಲ್ಲ ಇತ್ಯಾದಿ ಪ್ರಶ್ನೆಗಳಾದಾಗ ''ಇಲ್ಲೇನೊ ಕೇಂದ್ರ ನಾಟಕ ಅಕಾಡೆಮಿ ಅದಂತ. ಅದು ವೃತ್ತಿ ರಂಗಭೂಮಿಗೇನು ಮಾಡ್ಯದ ? ಬರೀ ಪ್ರಶಸ್ತಿ ಕೊಟ್ರಾತ ? ಕಂಪನಿ ಉಳಿಸಿ ಬೆಳೆಸಬಾರ್ದಾ ? ಅದುಕ್ಕೆ ಅವರಿಗೆ ಧಿಕ್ಕಾರ ಹೇಳಾಕ ಬಂದೇನಿ'' ಅಂದುಬಿಟ್ರು. ಅದು ಪೂರ್ವ ಯೋಜಿತವೇನಲ್ಲ, ಆ ಕ್ಷಣಕ್ಕೆ ಅನ್ನಿಸಿದ್ದು. ಮರುದಿನ ಪತ್ರಿಕೆಯಲ್ಲಿ ಅದೇ ಹೆಡ್‌ಲೈನ್ ! ಕೇಂದ್ರ ಸಂಗೀತ ನಾಟಕ ಅಕಾಡೆಮಿಯ ರಿಜಿಸ್ಟ್ರಾರ್ ಒಬ್ಬ ಮಹಿಳೆ. ಓಡೋಡಿ ಬಂದರು ಆಕೆ.

''ವ್ಹಾಟ್ ಕಪ್ಪಣ್ಣ, ವಾಟ್ ಈಸ್ ದಿಸ್ ಪ್ರೊಫೆಷನಲ್ ಥಿಂಗ್ ?'' ಅಂತ ಗಡಿಬಿಡಿ ! ಮುಂದೆ ಕೇಂದ್ರ ವಿಶೇಷ ಆಸಕ್ತಿ ತೋರಿಸಿತು. ಸಾಕ್ಷ್ಯಚಿತ್ರ, ಪ್ರಶಸ್ತಿ ಮಾತ್ರ ಅಲ್ಲ, ಕಂಪನಿಗಳು ಬೆಳೆಯಲು ನೆರವಾಗಬೇಕೆಂಬ ತೀರ್ಮಾನಕ್ಕೆ ಬಂದುದರ ಫಲವೇ ಆಯಸ್ಸು ಮುಗಿದೇ ಹೋಗಿದ್ದ 'ಸುರಭಿ'ಗೆ ನೆರವು ನೀಡಿ ಉಳಿಸಿದರು. ಬಿ. ವಿ. ಕಾರಂತರು ಸುರಭಿಗೆ ಕಾಯಕಲ್ಪ ಮಾಡಿದ್ದು ಇತ್ಯಾದಿ ಆಯಿತು. ಇದು ಲೀಲಮ್ಮನ ಸಾಧನೆಯಲ್ಲವೆ ?

ಏನು ಹೇಳಿದರೂ 'ಅಲ್ಲಿ ವೃತ್ತಿ ನಾಟಕ ಇದೆಯಾ ?' ಅನ್ನುತ್ತಿದ್ದ ಲೀಲಮ್ಮನಿಗೆ ಅವು ಅಶ್ಲೀಲ, ಕಲಾತ್ಮಕ ಅಲ್ಲ ಅಂತೆಲ್ಲ ವಾದಿಸಿದ ರಿಜಿಸ್ಟ್ರಾರ್ ಕಪ್ಪಣ್ಣನವರನ್ನು ಕರೆದೊಯ್ದು ಗುಡಗೇರಿ ಮೊದಲಾದವರ ಒಳ್ಳೆಯ ಕಂಪನಿ ನಾಟಕಗಳನ್ನು ತೋರಿಸಿ ತಮ್ಮ ಅಭಿಪ್ರಾಯ ತಪ್ಪು ಅನ್ನಿಸುವಂತೆ ಮಾಡಿದರು ಲೀಲಮ್ಮ. ಎಲ್ಲ ನಾಟಕೋತ್ಸವಗಳಲ್ಲೂ ವೃತ್ತಿ ನಾಟಕಗಳೂ ಸೇರಿದವು. ಅಕಾಡಮಿ ಸದಸ್ಯರಲ್ಲಿ ವೃತ್ತಿ ನಾಟಕದವರು ಬಂದರು. ಅವರು ಬಂದಮೇಲೆಯೇ ನಿಜವಾದ ಅರ್ಥದಲ್ಲಿ ವೃತ್ತಿ ರಂಗಭೂಮಿ-ಆಧುನಿಕ ರಂಗಭೂಮಿಯ ನಡುವಿನ ಅಂತರ ಕಡಿಮೆಯಾಗಿ ಸೇತುಬಂಧವಾದದ್ದು, ಎಂದೂ ಬೆಂಗಳೂರನ್ನು ಕಲಾಕ್ಷೇತ್ರವನ್ನು ಕಾಣದವರೂ ಇಲ್ಲಿಗೆ ಧೈರ್ಯವಾಗಿ ಬರತೊಡಗಿದ್ದರು. ಅವರ ಸಾಮರ್ಥ್ಯವೇನೆಂದು ಈ ನಗರಿಗರಿಗೆ ಅರ್ಥವಾಗಿದ್ದೂ ಆಗಲೇ.



ಬೆಳಗಾವಿಯಲ್ಲಿ 'ರಂಗಯುಗಾದಿ' ಕಾರ್ಯಕ್ರಮ. ಕಪ್ಪಣ್ಣ ಲೀಲಾ ಅವರ ಥಿಯೇಟರ್‌ನ ಬಣ್ಣ ಬಣ್ಣದ ಪರದೆ, ಪೇಯಿಂಟಿಂಗ್ ಎಲ್ಲ ತೆಗೆಸಿ ಕರಿಪರದೆ ಹಾಕಿಸಿದರು. ಹೊಸ ದೀಪಗಳನ್ನು ತರಿಸಿ ಬೆಳಕು ವಿನ್ಯಾಸ ಮಾಡಿದರು. ನಾಟಕಗಳು ತುಂಬ ಚೆನ್ನಾಗಿ ನಡೆದವು. ಈಗ ಅರ್ಥವಾಗಿತ್ತು ಕರಿ ಪರದೆ, ಲೈಟಿಂಗ್‌ನ ಪ್ರಾಮುಖ್ಯ. ''ಇದೆಲ್ಲ ಇಲ್ಲೇ ಬಿಟ್ಟು ಹೋಗ್ರೀ ಅದರ ಕಿಮ್ಮತ್ತು ತಗೋರಿ'' ಅಂತ ಎಲ್ಲ ಉಳಿಸಿಕೊಂಡು ಮುಂದೆ ಅವರ ನಾಟಕಗಳಿಗೆ ಬಳಸಿದರು ಲೀಲಾ.

ಶಿವರಾಮ ಕಾರಂತರ ಬಗ್ಗೆ ಪುಸ್ತಕ ಬಿಡುಗಡೆ, ಶತಮಾನೋತ್ಸವದಂಥದೇನೊ ಸಮಾರಂಭ. ಲೀಲಮ್ಮನ್ನ ಕರೆದ್ರು. ೩-೪ ಪುಟದ ಭಾಷಣ ಸಾಹಿತಿಮಿತ್ರರ ನೆರವಿನಿಂದ ಕಪ್ಪಣ್ಣ ಸಿದ್ಧ ಮಾಡಿದರು. ಲೀಲಮ್ಮ ಭಾಷಣ ಓದಲು ಪ್ರಾರಂಭಿಸಿದರು. ಒಂದು ಹಾಳೆ ಕೈತಪ್ಪಿತು. ''ಕಪ್ಪಣ್ಣ, ಎಲ್ರೀ ಆ ಕಾಗದ ?'' ಅಂತ ಕೇಳಿ ಎಲ್ಲರೆದುರು ಕಕ್ಕಾಬಿಕ್ಕಿ ಮಾಡಿದ್ರು. ಪೂರ್ತಿ ಓದಿದ ಮೇಲೆ ''ಇದೀಟೂ ಕಪ್ಪಣ್ಣಂದೇ ಬಿಡ್ರೀ, ನೀವೇನ್ ಚಪ್ಪಾಳೆ ಹೊಡೆದೀರಿ ಅದೆಲ್ಲ ಅವ್ರಿಗೇ ಸೇರ್ತಾವು'' ಅಂದುಬಿಟ್ರು. ಅನಂತರ ಅವರ ಬಾಲ್ಯ, ಆಗ ಕೇಳಿದ್ದ ಕಾರಂತರ ಹೆಸರು ಇತ್ಯಾದಿ ತಿಳಿದ ಹಾಗೆ ಹೇಳಿಕೊಂಡರು. ಮರುದಿನ ಪತ್ರಿಕೇಲಿ ಅವರ ಆ ಮುಗ್ಧ ಮಾತುಗಳೇ ಮುಖ್ಯವಾಗಿ ಪ್ರಕಟವಾದವು, ಸಿದ್ಧಪಡಿಸಿದ ಭಾಷಣ ಅಲ್ಲ !

ಬೆಳಗಾವಿಗೆ ಅನಂತಮೂರ್ತಿ ಬರಬೇಕು, ರಾಜಕುಮಾರ್ ಬರಬೇಕು ಎಲ್ಲ ದೊಡ್ಡೋರೂ ಬರಬೇಕು. ಕಡೆಗೆ ಅಬ್ದುಲ್ ಕಲಾಂ ಅವರೂ ತಮ್ಮ ಸಂಸ್ಥೆಗೆ ಬರೋಹಾಗೆ ಮಾಡಿದರು. ರಾಜಕುಮಾರ್ ಬಗ್ಗೆ ಅಪಾರ ಪ್ರೀತಿ. ಅವರಿಗೆ ಪ್ರಶಸ್ತಿ, ಬಿರುದು ಕೊಟ್ಟರು. ಸ್ವಂತ ಖರ್ಚಿಂದ ಚಿನ್ನದ ಕಿರೀಟ ಮಾಡಿಸಿ ತೊಡಿಸಿದ್ದರು.

ಸಂಜೆ ಸಮಾರಂಭ, ಎಲ್ಲ ಬಂದಿದ್ದಾರೆ. ವಿಪರೀತ ಮಳೆ. ಕೊನೇ ನಿಮಿಷದಲ್ಲಿ ಸಮಾರಂಭಕ್ಕೆ ಬಂದಿದ್ದ ಮುಖ್ಯಮಂತ್ರಿ ಮೊಯಿಲಿ ಅವರನ್ನು ಒಳಗೊಂಡಂತೆ ರಾಜಕುಮಾರ್ ಅವರವರೆಗೆ ಎಲ್ಲರನ್ನೂ ಒಪ್ಪಿಸಿ ಅಂದು ಅಲ್ಲೇ ಉಳಿಸಿಕೊಂಡು ಮರುದಿನ ಬೆಳಿಗ್ಗೆ ಬೇರೆ ರಂಗಸ್ಥಳದಲ್ಲಿ ಕಾರ್ಯಕ್ರಮ ಮಾಡಿದರು. ಅಸಾಧ್ಯ ಅನ್ನೋದು ಇರಲೇಇಲ್ಲ ಆಕೆಗೆ.

ನಾಟಕ ಅಕಾಡೆಮಿಯಲ್ಲಿ ಸದಸ್ಯರೊಬ್ಬರು ವಿಪರೀತ ತಕರಾರು ಮಾಡ್ತಿದ್ದರು. ಆಕೆ ಕುರ್ಚಿಯಲ್ಲಿ ಕೂರುತ್ತಿದ್ದುದೇ ವಿಚಿತ್ರ ಭಂಗಿ. ಅದನ್ನು ಭೈರವಿಯ ಭಂಗಿ ಅನ್ನಬಹುದೇನೋ ! ಹಾಗೆ ಕಾಲು ಮೇಲೆ ಕಾಲು ಹಾಕಿ ಅರೆ ಪದ್ಮಾಸನದಲ್ಲಿ ಕೂತು, ಆತನ ಎಲ್ಲ ಕೀಟಲೆ ಬಗ್ಗೆ ವಿಚಾರಿಸಿ, ''ಆಂ... ಬರಾಕ್ಹೇಳ್ರೀ ಆಯಪ್ಪನ್ನ. ನೋಡೇಬಿಡ್ತೀನಿ. ಅದೇನಾಕ್ಕತೋ ಆಗೇಬಿಡ್ಲಿ, ಇವನಾ... ನಾ'' ಅಂತ ಸಿದ್ಧವಾಗೇ ಬಿಟ್ಟರು. ಅದು ಬಂದದ್ದನ್ನೆಲ್ಲ ಎದುರಿಸುವ ತಾಖತ್ತಿನ ಒಂದು ಝಲಕ್ ಅಷ್ಟೇ. ಎಷ್ಟು ಶಾಂತವೋ ಅಷ್ಟೇ ಸಿಟ್ಟಿನ ಹೆಂಗಸು !

ಗುಬ್ಬಿ ವೀರಣ್ಣ ಶತಮಾನೋತ್ಸವ ಸಮಿತಿಗೆ ಕೆಲಸ ಮಾಡಿದರು. ಆ ದಿನಗಳಲ್ಲೇ ಮುಖ್ಯಮಂತ್ರಿ ಬಂಗಾರಪ್ಪನವರ ಮುಖೇನ ಗುಬ್ಬಿ ವೀರಣ್ಣ ಪ್ರಶಸ್ತಿಯ ಸ್ಥಾಪನೆಗೆ ಪ್ರಯತ್ನಪಟ್ಟ ಕೆಲವರಲ್ಲಿ ಚಿಂದೋಡಿ ಲೀಲಾನೂ ಒಬ್ಬರು. ಅವರೆಗೆ ಇದ್ದಿರದ ಪಂಪ ಪ್ರಶಸ್ತಿ ಮಾದರಿಯ ಪ್ರಶಸ್ತಿ ರಂಗಭೂಮಿಗೂ ಬಂದದ್ದು ಆಗಲೇ. ಗುಬ್ಬಿ ವೀರಣ್ಣ ಹೆಸರಿನಲ್ಲಿ ಪ್ರಶಸ್ತಿಗಳು ಚಲನಚಿತ್ರ-ರಂಗಭೂಮಿ ಎರಡೂ ಕ್ಷೇತ್ರಕ್ಕೆಂದು ಗೊತ್ತಾಗಿತ್ತು. ರಾಜಕುಮಾರ್ ಅವರಿಗೆ ಆ ಪ್ರಶಸ್ತಿಯೂ ಲಭಿಸಿತು. ಅನಂತರ ಚಲನಚಿತ್ರದ ಪ್ರಶಸ್ತಿಗೆ ರಾಜಕುಮಾರ್ ಅವರ ಹೆಸರಿಡಲಾಯಿತು. ಗುಬ್ಬಿ ವೀರಣ್ಣ ಪ್ರಶಸ್ತಿ ರಂಗಕಲಾವಿದರಿಗೆ ಮಾತ್ರ ಮೀಸಲಾಯಿತು. ಈ ಬದಲಾವಣೆಯ ಹಿಂದೆ ಚಿಂದೋಡಿ ಲೀಲಾ ಅವರ ಹಟಮಾರಿತನವಿತ್ತು.

ಬೆಂಗಳೂರಿನ ಗಾಂಧಿನಗರದಲ್ಲಿ ಗುಬ್ಬಿ ವೀರಣ್ಣ ರಂಗಮಂದಿರ ಕಟ್ಟಿತು ಮಹಾನಗರ ಪಾಲಿಕೆ. ಅಲ್ಲಿ ನಾಟಕ ಆಡುವ ಧೈರ್ಯ ಮಾಡಲಿಲ್ಲ ಯಾರೂ. ಚಿಂದೋಡಿ ಲೀಲಾ ಆರು ತಿಂಗಳಿಗೆ ಗುತ್ತಿಗೆ ಪಡೆದರು. ಯಶಸ್ವಿಯಾದರು. ಮುಂದೆ ವರ್ಷಗಟ್ಟಲೆ ವೃತ್ತಿರಂಗ ನಾಟಕಗಳನ್ನಾಡುತ್ತ ಮುನ್ನಡೆದರು. ಅದೆಲ್ಲದರ ಹಿಂದೆ ಎದುರಾದ ಹಲವು ಅಡೆತಡೆಗಳನ್ನು ಮೀರಿ ನಿಲ್ಲುವ ಆಕೆಯ ಸಾಹಸ ಪ್ರವೃತ್ತಿಯಿತ್ತು. ಅರುವತ್ತು ಎಪ್ಪತ್ತು ವಸಂತಗಳಾದರೂ ಆಕೆ ರಂಗನಾಯಕಿಯೇ. ಆಕೆಯ ಪಾತ್ರಕ್ಕಾಗಿಯೇ ರಂಗಮಂದಿರ ತುಂಬುತ್ತಿತ್ತು !

ಚಿಂದೋಡಿಲೀಲಾ ಚಲನಚಿತ್ರರಂಗದಲ್ಲೂ ಶ್ರಮಿಸಿದರು. ಆದರೆ ಅವರಿಗದು ಅಂಥ ತೃಪ್ತಿಕೊಟ್ಟ ಕಾಯಕವಾಗಲಿಲ್ಲ. ಕಿತ್ತೂರು ಚೆನ್ನಮ್ಮದಿಂದಾರಂಭಿಸಿ ಹಲವು ಚಿತ್ರಗಳಲ್ಲಿ ಅಭಿನಯಿಸಿದರು. ಮಾಡಿದ ಕೆಲಸಕ್ಕೆ ನ್ಯಾಯ ಸಲ್ಲಿಸಿದರು. ಅವರ ಬದುಕಿನ ಕಥೆಯ ಒಂದು ಭಾಗ ಮುಂದೆ ಕುಟುಂಬದ ಆಪ್ತರಾದ ಕಣಗಾಲ್ ಪುಟ್ಟಣ್ಣನವರ 'ರಂಗನಾಯಕಿ' ಚಿತ್ರಕ್ಕೆ ವಸ್ತುವೂ ಆಯಿತು !

ಆಕೆ ಚಲನಚಿತ್ರ ನಿರ್ಮಾಣಕ್ಕೂ ಕೈ ಹಾಕಿದರು. ಚಿಂದೋಡಿ ಬಂಗಾರೇಶ್ ನಿರ್ದೇಶಿಸಿದ, ರಾಷ್ಟ್ರಪ್ರಶಸ್ತಿ ಪಡೆದ ಚಿತ್ರ 'ಪಂಚಾಕ್ಷರ ಗವಾಯಿ', ದಾನಮ್ಮ, ಮೊದಲಾದ ಚಿತ್ರಗಳನ್ನು ನಿರ್ಮಿಸಿದ್ದರು. ಮತ್ತು ಈಚೆಗೆ ಸಿದ್ಧವಾಗುತ್ತಿದ್ದ ಅತ್ತಿಮಬ್ಬೆ ಕುರಿತ ಚಿತ್ರಕ್ಕೂ ಅವರು ನಿರ್ಮಾಣ ಸಿದ್ಧತೆ ನಡೆಸಿದ್ದರು. ತಾನು ಏನು ಮಾಡಿದರೂ ಗೆದ್ದುಕೊಂಡೇ ಬರುತ್ತಿದ್ದ ಸಾಹಸಿ ಲೀಲಾ ಇಂದು ದಾವಣಗೆರೆ ಬಳಿಯ ಶಂಕರಲೀಲಾ ವನದಲ್ಲಿ ಚಿರನಿದ್ರೆಯಲ್ಲಿದ್ದಾರೆ. ಅವರಿಗೆ ಕನ್ನಡನಾಡು, ರಂಗಭೂಮಿ, ಮಾತ್ರವಲ್ಲ ಸ್ತ್ರೀಸಮುದಾಯವೇ ಋಣಿಯಾಗಿರುತ್ತದೆ.


**ಡಾ|| ವಿಜಯಾ**

ಇಳಾ ಪ್ರಿಂಟರ್ಸ್, ನಂ. ೩೬, ೪೦ ಅಡಿ ರಸ್ತೆ, ರಾಘವನಗರ,
ನ್ಯೂ ಟಿಂಬರ್‌ಯಾರ್ಡ್ ಬಡಾವಣೆ, ಬೆಂಗಳೂರು - ೫೬೦ ೦೨೬

# ಗಾಂಧಿ ಹತ್ಯೆಯ ಕರಾಳ ನೆರಳು



ಡಾ|| ಮಹಾಬಲೇಶ್ವರ ರಾವ್

ಬಿಜೆಪಿ ಸರಕಾರ ೨೦೦೨ರಲ್ಲಿ ತರಾತುರಿಯಲ್ಲಿ ರಚನೆಯಾದ ಕುಪ್ರಸಿದ್ಧ ಎನ್‌ಸಿಇಆರ್‌ಟಿ ಪಠ್ಯಪುಸ್ತಕಗಳನ್ನು ಅಷ್ಟೇ ತರಾತುರಿಯಲ್ಲಿ ಅಮಾಯಕ, ಮುಗ್ಧ ಮಕ್ಕಳ ಮೇಲೆ ಹೇರಿತು. ೧೯೪೮, ಜನವರಿ ೩೦ರಂದು ನಡೆದ ಗಾಂಧೀಜಿಯವರ ಹತ್ಯೆಯ ವಿಚಾರವನ್ನು ಈ ಪುಸ್ತಕಗಳಲ್ಲಿ ಕೈಬಿಡಲಾಗಿತ್ತು. ಇದನ್ನು ಸಂಬಂಧಪಟ್ಟವರ ಗಮನಕ್ಕೆ ತಂದಾಗ ಕನಿಷ್ಠತಮ ವಿವರಗಳನ್ನೊಳಗೊಂಡ ಒಂದು ವಾಕ್ಯವನ್ನು ಸೇರಿಸಲಾಯಿತು. ನೂತನ ಸ್ವತಂತ್ರ ಮತನಿರಪೇಕ್ಷ ಪ್ರಭುತ್ವವು ತನ್ನ ಅಸ್ತಿತ್ವಕ್ಕಾಗಿ ಹೋರಾಡುತ್ತಿರುವ ಸಂದರ್ಭದಲ್ಲಿ ಆದ ಈ ಅಪರಾಧದ ಅಗಾಧತೆ, ಅದರ ತೀವ್ರ ಪರಿಣಾಮ ಮತ್ತು ನಮ್ಮ ಮತನಿರಪೇಕ್ಷ ವ್ಯವಸ್ಥೆಯ ಮೇಲೆ ಅದು ಬೀರಬಹುದಾದ ದುಷ್ಪರಿಣಾಮ – ಈ ಯಾವುದರ ಬಗೆಗೂ ಆ ವಾಕ್ಯದಲ್ಲಿ ಪ್ರಸ್ತಾಪವನ್ನೇ ಮಾಡಲಿಲ್ಲ. ನೆಹ್ರೂ ಅವರು ಒತ್ತಿ ಹೇಳಿದಂತೆ ಕೋಮುವಾದವು ನಮ್ಮ ರಾಜಕೀಯ ವ್ಯವಸ್ಥೆಯ ಮೇಲೆ ಎರಡು ಭಾರಿ ಹೊಡೆತಗಳನ್ನು ನೀಡಿತು. ದೇಶ ವಿಭಜನೆ ಹಾಗೂ ಗಾಂಧೀಜಿಯವರ ಹತ್ಯೆಯ ನಡುವೆ ಕೊಂಡಿ ಬೆಸೆಯಿತು.

ಗಾಂಧೀಜಿ ಅವರ ಬದುಕು ಹೀಗೆ ಅಕಾಲಿಕವಾಗಿ ಕೊನೆಗೊಂಡಿರದಿದ್ದರೆ ಭಾರತದ ರಾಜಕೀಯ ಯಾವ ದೆಸೆಯಲ್ಲಿ ಸಾಗಬಹುದಿತ್ತು, ಎಂದು ಊಹಿಸಬಹುದಷ್ಟೆ. ದೇಶದ ಹಾಗೂ ಸ್ವತಃ ಗಾಂಧಿಯವರ ಜೀವನದ ನಿರ್ಣಾಯಕ ಘಟ್ಟದಲ್ಲಿ ಈ ಘಟನೆ ನಡೆದದ್ದರಿಂದ ಪರಿಸ್ಥಿತಿ ಬಿಗಡಾಯಿಸಿತು. ಗಾಂಧೀಜಿ ಅವರು ಬದುಕಿರುತ್ತಿದ್ದರೆ ಹಿಂದೂ ಮುಸ್ಲಿಂ ಐಕ್ಯ ಹೆಚ್ಚುತ್ತಿತ್ತೆ? ಭಾರತ-ಪಾಕಿಸ್ತಾನದ ನಡುವಿನ ಸಂಬಂಧಗಳು ಸುಧಾರಿಸುತ್ತಿದ್ದವೆ? ವಿಕೇಂದ್ರೀಕೃತ ವ್ಯವಸ್ಥೆ ಜಾರಿಗೆ ಬರುತ್ತಿತ್ತೆ? ತೃಣಮೂಲದ ಪ್ರಜಾಪ್ರಭುತ್ವ ಜಾರಿಗೆ ಬರುತ್ತಿತ್ತೆ? ಗಾಂಧೀಜಿಗೆ ಮೌಂಟ್‌ಬ್ಯಾಟನ್ ಸಲ್ಲಿಸಿದ ಶ್ರದ್ಧಾಂಜಲಿಯಲ್ಲಿ ಅವರ ಕೊಡುಗೆಯನ್ನು ಬಣ್ಣಿಸಲಾಗಿದೆ : ''ಏಕವ್ಯಕ್ತಿ ಗಡಿಶಕ್ತಿ''. - ಇಷ್ಟೇ ಸಮರ್ಥವಾಗಿ ನೆಹ್ರೂ ಅವರು ತಮ್ಮ ಶ್ರದ್ಧಾಂಜಲಿಯಲ್ಲಿ ''ಉದ್ದೇಶದ ಹೆಬ್ಬಂಡೆ ಮತ್ತು ಸತ್ಯದ ದೀಪಸ್ತಂಭ'' ಎಂದು ವರ್ಣಿಸಿದ್ದಾರೆ.

ಹಾಗಿದ್ದರೆ ಯಾಕೆ ಈ ಉದ್ದೇಶಪೂರ್ವಕ ಮೌನ ? ಪೂರ್ವ ನಿಯೋಜಿತ ಕೊನೆಯ ಹೇಯಕೃತ್ಯದ ಬಗ್ಗೆ ಐತಿಹಾಸಿಕ ದಾಖಲೆಯನ್ನು ನಾಶಮಾಡುವ ಪ್ರಯತ್ನವೇಕೆ ? ಈ ಕೃತ್ಯ ನಡೆದು ಅರ್ಧ ಶತಮಾನ ಕಳೆದ ಬಳಿಕವೂ, ಕೊಲೆಗಡುಕರನ್ನು ನೇಣಿಗೇರಿಸಿದರೂ, ವಿಚಾರಣಾ ಆಯೋಗಗಳು ತಮ್ಮ ವರದಿಗಳನ್ನು ಸಲ್ಲಿಸಿಯಾಗಿದ್ದರೂ ಏನನ್ನು ಮುಚ್ಚಿಡುವ ಪ್ರಯತ್ನ ನಡೆದಿದೆ ? ಗಾಂಧೀಜಿ ಅವರ ಹತ್ಯೆಯ ಹಿಂದಿರುವ ಸತ್ಯದ ಬಗ್ಗೆ ಭಯ ಪಡುತ್ತಿರುವವರು ಯಾರು ? ನಿಜವಾದ ಸಂಚುಕೋರರರು ಮತ್ತು ಲಾಭಕೋರರು ಬೆಳಕಿಗೆ ಬರುವರೆ ?

ಹತ್ಯೆಯ ಜೊತೆಗಿನ ತಮ್ಮ ಸಂಬಂಧವನ್ನು ಹೇಗಾದರೂ ಸರಿ ಮರೆಮಾಚುವ, ಕರಗಿಸುವ, ನಿರಾಕರಿಸುವ, ಪುನರ್‌ವ್ಯಾಖ್ಯಾನಿಸುವ ಪ್ರಯತ್ನಗಳನ್ನು ಎಲ್ಲ ಹಿಂದೂ ಕೋಮುವಾದಿ ಪಕ್ಷಗಳು ಮಾಡುತ್ತಿರುವುದೇ ಐತಿಹಾಸಿಕ ದಾಖಲೆಯಲ್ಲಿನ ಈ ಮೌನಕ್ಕೆ ಕಾರಣ. ಗಾಂಧಿ ಹತ್ಯೆ ಮಾಡಿ ನೇಣಿಗೇರಿದ ನಾಥುರಾಮ್ ಗೋಡ್ಸೆ ಮತ್ತು ನಾರಾಯಣ ರಾವ್ ಆಪ್ಟೆ 'ಸಾವರ್ಕರ್ ಹಿಂಬಾಲಕರು' ಎಂಬುದು ಎಲ್ಲರಿಗೂ ತಿಳಿದ ವಿಷಯವೇ; ಆದರೂ ವಿಚಾರಣೆಯ ಕಾಲಕ್ಕೆ ಸಾವರ್ಕರ್ ಇದನ್ನು ನಿರಾಕರಿಸಿದರು ಮತ್ತು ಸಾವರ್ಕರ್ ಯಾವುದೇ ರೀತಿಯಲ್ಲೂ ಒಳಸಂಚಿನ ಭಾಗವಾಗಿರಲಿಲ್ಲ ಎಂದು ಗೋಡ್ಸೆ ಹೇಳಿದ. ತನ್ನ ಮೇಲೆ ನಿಷೇಧ ಹೇರುವ ಸಂದರ್ಭ ಬಂದಾಗ ಹಿಂದೂ ಮಹಾಸಭಾ ವಿಸರ್ಜನೆಯಾಯಿತು. ತನ್ನ ಮೇಲಿನ ನಿಷೇಧವನ್ನು ಹಿಂತೆಗೆಸಲಿಕ್ಕಾಗಿ ಆರ್.ಎಸ್.ಎಸ್. ಯಾವುದೇ ಬಗೆಯ ನಿಬಂಧನೆಯನ್ನು ಒಪ್ಪಿಕೊಳ್ಳಲು ಮತ್ತು ತನ್ನ ಕಾರ್ಯಾಚರಣೆಯನ್ನು ನಿಯಂತ್ರಿಸಲು ಸಿದ್ಧವಾಯಿತು. ಅದು ಲಿಖಿತ ಸಂವಿಧಾನವನ್ನು ಸ್ವೀಕರಿಸಿ ಇನ್ನು ಮುಂದೆ ತಾನು ಕೇವಲ ಸಾಂಸ್ಕೃತಿಕ ಸಂಘಟನೆಯಾಗಿ ಉಳಿಯುವೆ ಎಂಬ ಮುಚ್ಚಳಿಕೆಯನ್ನು ಬರೆದು ಕೊಟ್ಟಿತು. ಗಾಂಧೀಜಿ ಹತ್ಯೆಯ ಸಂಬಂಧದಲ್ಲಿ ಕಳಂಕಿತಗೊಂಡ ಹಿಂದೂ ಮಹಾಸಭಾ ಜಾಣತನದಿಂದ ಹೆಜ್ಜೆ ಹಿಂದಿಟ್ಟರೆ ಆರ್.ಎಸ್.ಎಸ್.ನ ಸಹಕಾರದೊಂದಿಗೆ ಶ್ಯಾಮಪ್ರಸಾದ್ ಮುಖರ್ಜಿ ೧೯೫೧ರಲ್ಲಿ ಭಾರತೀಯ ಜನಸಂಘವನ್ನು ಸ್ಥಾಪಿಸಿದರು. ಇದು ಹಿಂದೂ ಕೋಮುವಾದಿ ಅಭಿವ್ಯಕ್ತಿಯ ಮುಖ್ಯ ರಾಜಕೀಯ ವಾಹಕವಾಗಿ, ಅದರ ಮುಖ್ಯ ರಾಜಕೀಯ ಪಕ್ಷವಾಗಿ ಹೊರಹೊಮ್ಮಿತು.

**ಗಾಂಧೀಜಿ ಹತ್ಯೆಯ ಒಳಸಂಚು**

ಗಾಂಧೀಜಿ ಅವರ ಕೊಲೆ ಹುಚ್ಚು ಭಾವಾವೇಶದ ಕೃತ್ಯವಲ್ಲ; ಅದು ಪೂರ್ವಯೋಜಿತ ಒಳಸಂಚು. ೧೯೪೭ರ ನವೆಂಬರ್‌ನಲ್ಲಿ ಬಿಹಾರದ ಸಿಪಿಐ ಕಿಸಾನ್ ಧುರೀಣ ಕಾರ್ಯಾನಂದ ಶರ್ಮ 'ಹಿಂದೂ ರಾಜ್' ಸ್ಥಾಪನೆಯ ಬೇಡಿಕೆ ತುಂಬ ಕೆಟ್ಟದ್ದು ಮತ್ತು ಗಾಂಧೀಜಿ ಹಾಗೂ ಪಂಡಿತ್‌ಜೀ ಅವರನ್ನು ಕೊಲ್ಲುವ ಒಳಸಂಚು ಇದರ ಹಿಂದೆ ಇದೆ ಎಂದು ಅಂದೇ ಎಚ್ಚರಿಸಿದ್ದರು. ೧೯೪೮ ಜನವರಿ ೨೦ರಂದು ಗಾಂಧೀಜಿ ಅವರನ್ನು ಕೊಲ್ಲುವ ಒಂದು ಯತ್ನ ವಿಫಲವಾದಾಗ ಕಾರ್ಯಕರ್ತನೋರ್ವ ಬಾಂಬ್‌ಸ್ಫೋಟ ಆಕಸ್ಮಿಕವಾದುದು ಎಂದ. ಗಾಂಧೀಜಿ ಅದಕ್ಕೆ ಹೀಗೆ ಮಾರ್ನುಡಿದರು : ''ಮೂರ್ಖ, ಇದರ ಹಿಂದೆ ಭಾರಿ ಒಳಸಂಚು ಇದೆ ಎಂಬುದು ನಿನಗೆ ತಿಳಿಯುವುದಿಲ್ಲವೆ ?'' ಗಾಂಧೀಜಿ ಅವರ ಹತ್ಯೆಯ ಹಿಂದೆ ಸಾವರ್ಕರ್ ನೇತೃತ್ವದ

ಹಿಂದೂ ಮಹಾಸಭಾದ ತೀವ್ರಗಾಮಿ ಗುಂಪಿನ ಕೈವಾಡವಿತ್ತು ಎಂಬುದು ಸರ್ವಸಮ್ಮತ ವಿಚಾರ. ಹಾಗಿದ್ದರೆ ಸಾವರ್ಕರ್ ಅವರನ್ನು ದೋಷಮುಕ್ತಗೊಳಿಸಿದ್ದು ಏಕೆ? ಈ ಪಿತೂರಿಯಲ್ಲಿ ಅವರ ಪಾತ್ರವೇನು?

೧೯೪೮ರ ಜನವರಿಯಲ್ಲಿ ಗಾಂಧೀಜಿ ಅವರ ಹತ್ಯೆಯ ಅನಂತರ, ಒಳಸಂಚಿನ ಪ್ರಧಾನ ಸೂತ್ರಧಾರನೆಂಬ ಗುಮಾನಿಯ ಮೇಲೆ ಸಾವರ್ಕರ್ ಅವರನ್ನು ಬಂಧಿಸಲಾಯಿತು. ಮಾಫಿಸಾಕ್ಷಿ ಹೇಳಿದ ವಿಚಾರಗಳಿಗೆ ತಕ್ಕ ಸಾಕ್ಷ್ಯಾಧಾರಗಳಿಲ್ಲ ಎಂಬ ಕಾರಣಕ್ಕೆ ಮುಂದೆ ಈ ಪ್ರಕರಣದಲ್ಲಿ ಅವರನ್ನು ದೋಷಮುಕ್ತಗೊಳಿಸಲಾಯಿತು. ಅತ್ಯುತ್ತಮ ಕ್ರಿಮಿನಲ್ ವಕೀಲರಾಗಿದ್ದ ಸರ್ದಾರ್ ಪಟೇಲ್ ಅವರಿಗೆ ಸಾವರ್ಕರ್ ಅಪರಾಧಿ ಎಂಬುದು ಮನವರಿಕೆಯಾಗಿತ್ತು; ಇಲ್ಲದಿದ್ದರೆ ಅವರನ್ನು ವಿಚಾರಣೆಗೆ ಒಳಪಡಿಸುತ್ತಿರಲಿಲ್ಲ. ಅವರು ಬಹಳ ಸ್ಪಷ್ಟವಾದ ಮಾತುಗಳಲ್ಲಿ ನೆಹ್ರೂ ಅವರಿಗೆ ಹೇಳಿದರು: ''ಸಾವರ್ಕರ್ ಅವರ ನೇತೃತ್ವದ ಹಿಂದೂ ಮಹಾಸಭಾದ ಮತಾಂಧ ಗುಂಪು ಒಳಸಂಚು ರೂಪಿಸಿ ಕೆಲಸ ಮುಗಿಸಿತು.''

ಸುಪ್ರೀಂ ಕೋರ್ಟಿನ ಭೂತಪೂರ್ವ ನ್ಯಾಯಮೂರ್ತಿ ಜೀವನ್‌ಲಾಲ್ ಕಪೂರ್ ಅವರ ನೇತೃತ್ವದಲ್ಲಿ ೧೯೬೫ರಲ್ಲಿ ವಿಚಾರಣಾ ಆಯೋಗವನ್ನು ನೇಮಿಸಲಾಯಿತು. ''ಈ ಎಲ್ಲ ವಿವರಗಳನ್ನು ಪರಿಶೀಲಿಸಿದಾಗ ಸಾವರ್ಕರ್ ಮತ್ತು ಅವರ ಗುಂಪು ಹತ್ಯೆಯ ಒಳಸಂಚು ರೂಪಿಸಿರುವುದು ಸ್ಪಷ್ಟ'' ಎಂಬ ತೀರ್ಮಾನಕ್ಕೆ ಆಯೋಗ ಬಂದಿತು. ವಿಚಾರಣಾ ನ್ಯಾಯಾಧೀಶರಿಗೆ ಲಭ್ಯವಿರದ ಅನೇಕಾನೇಕ ಸಾಕ್ಷಿಗಳು ಕಪೂರ್ ಆಯೋಗಕ್ಕೆ ಲಭಿಸಿದ್ದವು. ಸಾವರ್ಕರ್ ಅವರ ನಿಕಟವರ್ತಿಗಳಾಗಿದ್ದ ಎ. ಪಿ. ಕಸರ್ ಮತ್ತು ಜಿ. ವಿ. ದಾಮ್ಲೆ ಅವರು ತನಿಖೆ ನಡೆಯುವಾಗ ಸಾಕ್ಷಿಗಳಾಗಿರಲಿಲ್ಲ. ಆದರೆ ಅವರು ಕಪೂರ್ ಆಯೋಗದ ಮುಂದೆ ಮಾತನಾಡಿ ಮಾಫಿ ಸಾಕ್ಷಿಯ ಹೇಳಿಕೆಗಳನ್ನು ಅನುಮೋದಿಸಿದರು. ಅಷ್ಟು ಹೊತ್ತಿಗಾಗಲೆ ಸಾವರ್ಕರ್ ನಿಧನರಾಗಿದ್ದರು. ಇವರು ಕೊಲೆಯ ತನಿಖೆ ನಡೆಯುತ್ತಿದ್ದಾಗ ಸಾಕ್ಷಿ ನುಡಿದಿದ್ದರೆ ಸಾರ್ವಕರ್ ಅಪರಾಧಿ ಎಂಬುದು ಬಹುತೇಕ ಸಾಬೀತಾಗುತ್ತಿತ್ತು. ಇಂಥ ಹಿನ್ನೆಲೆಯಲ್ಲಿ, ವ್ಯಾಪಕ ಆಕ್ರೋಶ, ವಿರೋಧಗಳ ನಡುವೆಯೂ ಅದನ್ನು ಲೆಕ್ಕಿಸದೆ ಸಾವರ್ಕರ್ ಅವರ ಭಾವಚಿತ್ರವನ್ನು ಪಾರ್ಲಿಮೆಂಟಿನಲ್ಲಿ ಇರಿಸಿದ್ದು ಆಘಾತಕರವಾಗಿದೆ. ಸಾವರ್ಕರ್ ಅವರ ಪಾತ್ರದ ಬಗ್ಗೆ ರವಷ್ಟು ಸಂಶಯವಿದ್ದರೂ ಇದಾಗಬಾರದಿತ್ತು. ಸೂಕ್ಷ್ಮವಾದ ಕಾನೂನಿನ ಸಬೂಬುಗಳ ದೆಸೆಯಿಂದಾಗಿ ಗೋಡ್ಸೆ ಹಾಗೂ ಆಪ್ಟೆಯ ರಾಜಕೀಯ ಗುರು ಖುಲಾಸೆಗೊಂಡರು; ಆದರೆ ಗಾಂಧಿ ಹತ್ಯೆಗೆ ರಾಜಕೀಯವಾಗಿ, ವೈಯಕ್ತಿಕವಾಗಿ ಹಾಗೂ ನೈತಿಕವಾಗಿ ಇವರೇ ಹೊಣೆಗಾರರು ಎಂದು ಸಾರ್ವಜನಿಕರ ಕಣ್ಣಲ್ಲಿ ಆರೋಪಿ ಸ್ಥಾನದಲ್ಲಿ ನಿಂತರು ಸಾವರ್ಕರ್.

ಗಾಂಧೀಜಿಯವರ ದುರ್ಬಲ ದೇಹದ ಮೇಲೆ ಗುಂಡಿನ ಮಳೆಗರೆದ ಗೋಡ್ಸೆಯ ಪಾತ್ರವೇನು? ಒಳಸಂಚಿನಲ್ಲಿ ತಾನು ಮತ್ತು ಆಪ್ಟೆ ಮಾತ್ರ ಭಾಗೀದಾರರು, ಆರ್.ಎಸ್.ಎಸ್. ಇರಲಿ, ಹಿಂದೂ ಮಹಾಸಭಾಗೂ ಈ ಹತ್ಯೆಗೂ ಸಂಬಂಧವಿಲ್ಲ ಎಂದು ಆತ ವಿಚಾರಣೆಯ ವೇಳೆ ಹೇಳಿದ. ಇದು ಅಪ್ಪಟ ಸುಳ್ಳು. ಆರ್.ಎಸ್.ಎಸ್. ಮತ್ತು ಹಿಂದೂ ಮಹಾಸಭಾಗೂ ಗೋಡ್ಸೆಗೂ ಸಂಬಂಧವಿತ್ತು. ಸಾವರ್ಕರ್ ಜೊತೆಗಿನ ಸಂಪರ್ಕದ ಬಗ್ಗೆ ಹೇಳುವುದಾದರೆ ಆಪ್ಟೆ ಮತ್ತು ಗೋಡ್ಸೆ ಅವರ ಹಿಂಬಾಲಕರಾಗಿದ್ದರು. ಮುಂದೆ 'ಹಿಂದೂರಾಷ್ಟ್ರ' ಎಂದು ನಾಮಕರಣಗೊಂಡ 'ಅಗ್ರಣಿ' ಎಂಬ ಅವರ ಪತ್ರಿಕೆಗೆ ಸಾವರ್ಕರ್ ಆರ್ಥಿಕ ನೆರವು ನೀಡುತ್ತಿದ್ದರು. ಸಾವರ್ಕರ್ ಅವರ ರಾಜಕೀಯ ಪ್ರವಾಸಗಳಲ್ಲಿ ಇವರೂ ಜೊತೆಗಿರುತ್ತಿದ್ದರು. 'ಸಾವರ್ಕರ್ ವಾದಿ' ಗುಂಪಿನ ಅಂದರೆ ಮಹಾಸಭಾದ ಗುಪ್ತಕಾರ್ಯಗಳನ್ನು ನಡೆಸಲು ಪೂನಾದಲ್ಲಿ ೧೯೪೨ರಲ್ಲಿ ಸ್ಥಾಪಿಸಲಾದ ಸ್ವಯಂಸೇವಾ ಸಂಘಟನೆ 'ಹಿಂದೂ ರಾಷ್ಟ್ರದಳ'ದ ಮುಖ್ಯ ಸಂಘಟಕ ಗೋಡ್ಸೆಯಾದರೆ ಆಪ್ಟೆ ಕಾರ್ಯದರ್ಶಿಯಾಗಿದ್ದ. ಗಾಂಧೀಜಿ ಹತ್ಯೆಯ ಒಳಸಂಚಿನ ಪ್ರಧಾನ ಸೂತ್ರಧಾರ ಸಾವರ್ಕರ್ ಆದರೆ ಇವರಿಬ್ಬರು ಪಾತ್ರಧಾರಿಗಳು.

ಆರ್.ಎಸ್.ಎಸ್. ಜೊತೆ ಗೋಡ್ಸೆ ಸಂಬಂಧ ಏನಿತ್ತು? ತಮಗೂ ಗೋಡ್ಸೆಗೂ ಯಾವ ಸಂಬಂಧವೂ ಇಲ್ಲವೆಂದು ಆರ್.ಎಸ್.ಎಸ್. ಒತ್ತಿ ಹೇಳಿದೆ. ''ನಾಥುರಾಮ್ ಗೋಡ್ಸೆ ರಾಷ್ಟ್ರೀಯ ಸ್ವಯಂ ಸೇವಕ ಸಂಘದ ಕಟು ವಿಮರ್ಶಕ. ಹಿಂದೂಗಳನ್ನು ಆರ್.ಎಸ್.ಎಸ್. ಷಂಡರನ್ನಾಗಿ ಮಾಡಿದೆ ಎಂಬುದು ಆತನ ಟೀಕೆ. ನಮಗೂ ಗೋಡ್ಸೆಗೂ ಯಾವ ಸಂಬಂಧವೂ ಇಲ್ಲ. ಬೇರೇನೂ ಆಪಾದನೆ ಹೊರಿಸಲು ಇಲ್ಲದಿರುವಾಗ ಕಾಂಗ್ರೆಸ್ ಮತ್ತೆ ಮತ್ತೆ ಈ ಆಪಾದನೆಯನ್ನು ಹೊರಿಸುವ ಚಾಳಿಯನ್ನು ಮುಂದುವರಿಸುತ್ತಿದೆ'' ಎಂದು ಅದ್ವಾನಿ ಹೇಳಿದ್ದುಂಟು.

ನಾಥುರಾಮ್‌ನ ಸೋದರ ಹಾಗೂ ಸಹ ಒಳಸಂಚುಗಾರ ಗೋಪಾಲ್ ಗೋಡ್ಸೆ ಅದ್ವಾನಿಯವರ ಈ ವಾದವನ್ನು ತೀವ್ರವಾಗಿ ವಿರೋಧಿಸಿದ್ದು ಮಾತ್ರವಲ್ಲದೆ ನಾಥುರಾಮ್ ಎಂದೂ ಆರ್.ಎಸ್.ಎಸ್.ಅನ್ನು ತ್ಯಜಿಸಿದ್ದಿಲ್ಲ; ಆದರೆ ವಿಚಾರಣೆಯ ವೇಳೆ ಗೋಲ್ವಾಲ್ಕರ್ ಮತ್ತು ಆರ್.ಎಸ್.ಎಸ್.ಅನ್ನು ರಕ್ಷಿಸಲು ಹಾಗೆ ಹೇಳಿದ್ದ ಎಂದೂ ನುಡಿದ.

ನೇಣುಗಂಬಕ್ಕೆ ಏರುವ ಮೊದಲು ನಾಥುರಾಮ್ ೧೯೪೦ರಲ್ಲಿ ಆರ್.ಎಸ್.ಎಸ್. ಅಳವಡಿಸಿದ ಹೊಸ ಸಂಸ್ಕೃತ ಪ್ರಾರ್ಥನಾ ಶ್ಲೋಕವನ್ನು ಪಠಿಸಿದ್ದ ಎಂಬುದು ಇಲ್ಲಿ ಉಲ್ಲೇಖನೀಯ. ೧೯೪೦ರಲ್ಲಿ ಅದುವರೆಗೆ ಇದ್ದ ಹಿಂದಿ ಹಾಗೂ ಮರಾಠಿ ಪ್ರಾರ್ಥನೆಯ ಬದಲಿಗೆ ಸಂಸ್ಕೃತ ಪ್ರಾರ್ಥನೆಯನ್ನು ಅಳವಡಿಸಲಾಯಿತು. ಆತ ಆರ್.ಎಸ್.ಎಸ್. ಜೊತೆ ಸಂಬಂಧ ಇಟ್ಟುಕೊಂಡಿಲ್ಲ ಎಂದಾದರೆ ಈ ಹೊಸ ಪ್ರಾರ್ಥನೆ ಅವನಿಗೆ ಹೇಗೆ ತಿಳಿಯಿತು? ಜೀವನದ ಅತ್ಯಂತ ದುರ್ಭರ ಗಳಿಗೆಯಲ್ಲಿ ಏಕೆ ಆತ ಈ ಪ್ರಾರ್ಥನೆಯನ್ನು ಪಠಿಸಿದ?

ಆರ್.ಎಸ್.ಎಸ್. ಹಾಗೂ ಹಿಂದೂ ಮಹಾಸಭಾ ನಡುವೆ ಪರಸ್ಪರ ಸಂಬಂಧವಿಲ್ಲ, ಗಾಂಧಿ ಹತ್ಯೆಯ ಒಳಸಂಚಿನಲ್ಲಿ ತಮ್ಮ ಪಾತ್ರವಿಲ್ಲ ಮತ್ತು ರಾಜಕೀಯದಲ್ಲಿ ಪರಸ್ಪರ ಸಂಬಂಧವಿಲ್ಲ ಎಂದು ಮನಗಾಣಿಸಲು ಇವು ಪ್ರಯತ್ನಿಸಿವೆ. ಈ ಎರಡು ಸಂಘಟನೆಗಳಿಗೆ ಪ್ರತ್ಯೇಕ ಅಸ್ತಿತ್ವ ಇದೆ. ಗುರಿಸಾಧನೆಯ ವಿಷಯದಲ್ಲಿ ಕೆಲಸ ಹಂಚಿಕೊಳ್ಳುವಿಕೆ ನಡೆದಿದೆ ಎಂಬುದು ಎಲ್ಲರಿಗೂ ತಿಳಿದ ವಿಚಾರ. ಆರ್.ಎಸ್.ಎಸ್. ಹಾಗೂ ಹಿಂದೂ ಮಹಾಸಭಾದ ಕಾರ್ಯಕರ್ತರು ಒಟ್ಟಿಗೇ ದುಡಿದವರು; ಮೊದಲನೆಯದು ಸೈದ್ಧಾಂತಿಕ ತಳಹದಿಗಳನ್ನು ರೂಪಿಸಿದರೆ ಎರಡನೆಯದು ಔಪಚಾರಿಕ ರಾಜಕೀಯ ಪಕ್ಷವಾಗಿ ಕೆಲಸ ಮಾಡಿತು.



ಆರ್.ಎಸ್.ಎಸ್.ನ ಹಲವು ಕಾರ್ಯಕರ್ತರು ಹಿಂದೂ ಮಹಾಸಭಾದ ಸದಸ್ಯರೂ ಹೌದು ಎಂಬುದಕ್ಕೆ ಪುರಾವೆಗಳಿವೆ ಎಂದು ಕಪೂರ್ ಆಯೋಗ ಹೇಳಿದೆ. ತಮ್ಮ ನಡುವೆ ಯಾವ ಸಂಬಂಧವೂ ಇಲ್ಲ ಎಂಬ ಅವುಗಳ ಸುಳ್ಳುವಾದವನ್ನು ಸ್ಫೋಟಿಸುವಂಥ ಸಂಶೋಧನೆಗಳು ಈಚೆಗೆ ನಡೆದಿದ್ದು ಅವುಗಳ ಪ್ರಕಾರ ಈ ಎರಡೂ ಸಂಘಟನೆಗಳ ನಡುವೆ ನಿಕಟ ಸಂಬಂಧವಿದೆ ಎಂಬುದು ಸಾಬೀತಾಗಿದೆ.

ಗಾಂಧಿ ಹತ್ಯೆಯ ಜೊತೆಗಿನ ನಂಟನ್ನು ನಿರಾಕರಿಸುವ ಆರ್.ಎಸ್.ಎಸ್.ನ ಹೇಳಿಕೆಗಳು ನೆಹ್ರೂ ಅವರಿಗೆ ಸಮಾಧಾನ ಉಂಟುಮಾಡಲಿಲ್ಲ. ''ಮಹಾತ್ಮಾ ಗಾಂಧಿಯವರ ನೆತ್ತರು ಈ ಜನರ ಕೈಗಳಿಗೆ ಅಂಟಿಕೊಂಡಿದೆ. ಹೀಗಾಗಿ ತಮಗೂ ಈ ಕೊಲೆಗೂ ಸಂಬಂಧವಿಲ್ಲ ಎಂಬ ಮುಗ್ಧ ಹೇಳಿಕೆಗಳಿಗೆ ಈಗ ಯಾವ ಅರ್ಥವೂ ಇಲ್ಲ'' ಎಂದು ಅವರು ನುಡಿದರು. ''ಹಿಂದೂ ರಾಷ್ಟ್ರದ ಪ್ರತಿಪಾದಕರು ಈ ಮಹಾನ್ ಜೀವಂತ ಹಿಂದೂವನ್ನು ಕೊಂದರು'' ಎಂದು ಅವರು ೧೯೪೮ರ ಫೆಬ್ರವರಿ ೨ರಂದು ನವದೆಹಲಿಯಲ್ಲಿ ಮಾಡಿದ ಭಾಷಣದಲ್ಲಿ ನುಡಿದರು.

ಹಿಂದೂ ಮಹಾಸಭಾ ನೀಡಿದ ನಿರಾಕರಣಾ ಹೇಳಿಕೆಯ ಬಗ್ಗೆ ಪಟೇಲರು ಶ್ಯಾಮಪ್ರಸಾದ ಮುಖರ್ಜಿ ಅವರಿಗೆ ಬರೆದ ಮೇ ೧೬, ೧೯೪೮ರ ಪತ್ರದಲ್ಲಿ ಹೀಗೆ ಅಭಿಪ್ರಾಯಪಡುತ್ತಾರೆ: ''ಮಹಾಸಭಾದ ಅನೇಕ ಸದಸ್ಯರು ಈ ದುರಂತದ ಬಗ್ಗೆ ಸಂತಸಗೊಂಡು ಸಿಹಿ ಹಂಚಿದ ಘಟನೆಗಳ ಬಗ್ಗೆ ನಾವು ಕಣ್ಣುಮುಚ್ಚಿ ಕೂರುವಂತಿಲ್ಲ. ಈ ವಿಷಯದ ಬಗ್ಗೆ ದೇಶದ ವಿವಿಧ ಭಾಗಗಳಿಂದ ನಮಗೆ ವಿಶ್ವಾಸಾರ್ಹ ವರದಿಗಳು ಬಂದಿವೆ. ಮಹಾಸಭಾದ ವಕ್ತಾರರು ತೀರ ಈಚಿನವರೆಗೂ ಪ್ರತಿಪಾದಿಸಿದ ಭಯೋತ್ಪಾದಕ ಕೋಮುವಾದವು ಸಾರ್ವಜನಿಕ ಭದ್ರತೆಗೆ ಅಪಾಯಕಾರಿಯಾಗಿದೆ. ಮಹಂತ ದಿಗ್ವಿಜಯನಾಥ, ಪ್ರೊ|| ರಾಮಸಿಂಗ್ ಮತ್ತು ದೇಶಪಾಂಡೆ ಮುಂತಾದವರು ಈ ಬಗೆಯ ಕೋಮುವಾದವನ್ನು ಪ್ರತಿಪಾದಿಸಿದ್ದಾರೆ. ಈ ಮಾತು ಆರ್.ಎಸ್.ಎಸ್.ಗೂ ಅನ್ವಯಿಸುತ್ತದೆ. ಮಿಲಿಟರಿ ಹಾಗೂ ಅರೆ ಮಿಲಿಟರಿ ನೆಲೆಯಲ್ಲಿ ರಹಸ್ಯವಾಗಿ ಕಾರ್ಯಾಚರಣೆ ಮಾಡುವ ಈ ಸಂಘಟನೆಯಿಂದ ಒಳಗೊಳಗೇ ಅಪಾಯವಿದೆ.''

ಆರ್.ಎಸ್.ಎಸ್. ಮತ್ತು ಹಿಂದೂ ಮಹಾಸಭಾದ

ರಾಜಕೀಯ ಶೈಲಿಯಲ್ಲಿ ಎದ್ದುಕಾಣುವ ಅಂಶವೆಂದರೆ ಅದರ ನಕಲಿತನ, ಹಸಿ ಸುಳ್ಳುಗಳು ಮತ್ತು ಸಂದರ್ಭ ಒದಗಿದರೆ ತಮ್ಮವರನ್ನೇ ನಿರಾಕರಿಸುವ ಗುಣ. ಸಾವರ್ಕರ್ ಹಾಗೂ ಅವರ ಹಿಂಬಾಲಕರು ಮತ್ತು ಕ್ರಾಂತಿಕಾರಿಗಳಾದ ಭಗತ್ ಸಿಂಗ್‌ರಂಥವರ ನಡುವಿನ ವ್ಯತ್ಯಾಸ ಬಲು ಸ್ಪಷ್ಟ. ಈ ಕ್ರಾಂತಿಕಾರಿಗಳು ಆತ್ಮಾಭಿಮಾನದಿಂದ ದಯಾಭಿಕ್ಷೆಯನ್ನು ಬೇಡಲಿಲ್ಲ, ಮರಣದಂಡನೆಯಂಥ ಕಡು ಕಷ್ಟವನ್ನು ಸಹಿಸಿಕೊಂಡರು. ಆರಂಭದಿಂದಲೂ ಭಾರತೀಯ ರಾಷ್ಟ್ರೀಯವಾದಿಗಳು ಬ್ರಿಟಿಷ್ ವಿರೋಧಿ ಕೃತ್ಯಗಳನ್ನು ಕೈಗೊಂಡಾಗ, ವಿಚಾರಣೆಗಳನ್ನು ಎದುರಿಸುವಾಗ ಹಾಗೂ ಈ ವಿಚಾರಣೆಗಳನ್ನು ರಾಷ್ಟ್ರೀಯ ಗುರಿಗಳನ್ನು ಪ್ರಚುರಪಡಿಸಲು ಬಳಸುವಾಗ ತಮ್ಮ ಕೃತ್ಯಗಳನ್ನು ವೀರೋಚಿತವಾಗಿ ಒಪ್ಪಿಕೊಳ್ಳುತ್ತಿದ್ದರು. ಸೆರೆಮನೆವಾಸ, ದೇಶಾಂತರ ಅಥವಾ ಮರಣದಂಡನೆಯನ್ನು ಮನಃಪೂರ್ವಕವಾಗಿ ಸ್ವೀಕರಿಸುತ್ತಿದ್ದರು.

ಇದಕ್ಕೆ ವ್ಯತಿರಿಕ್ತವಾಗಿ ಹಿಂದೂ ಕೋಮುವಾದಿಗಳ ವರ್ತನೆ ಹೇಗಿತ್ತು ಎಂಬುದಕ್ಕೆ ಗಾಂಧಿ ಹತ್ಯೆ ವಿಚಾರಣೆಯ ಸಂದರ್ಭದಲ್ಲಿನ ಸಾವರ್ಕರ್ ಅವರ ನಡವಳಿಕೆ ಒಂದು ಉತ್ತಮ ನಿದರ್ಶನ. ಒಳಸಂಚಿಗೂ ತನಗೂ ಸಂಬಂಧವಿಲ್ಲ ಎಂಬ ಅಭಿಪ್ರಾಯ ಮೂಡಿಸಲಿಕ್ಕಾಗಿ ಅವರು ಸಾರ್ವಜನಿಕವಾಗಿ ನ್ಯಾಯಾಲಯದಲ್ಲಿ ಮತ್ತು ಖಾಸಗಿಯಾಗಿ ಸೆರೆಮನೆಯಲ್ಲಿ ನಾಥುರಾಮ್ ಗೋಡ್ಸೆ ಹಾಗೂ ಇತರ ಆಪಾದಿತರ ಜೊತೆ ಮಾತನಾಡಲು ನಿರಾಕರಿಸಿದರು. ಇದಲ್ಲದೆ ತಮಗೆ 'ಮಹಾತ್ಮ' ಬಗ್ಗೆ ಎಂಥ ಅಭಿಮಾನವಿದೆ ಎಂದೂ ನ್ಯಾಯಾಲಯದಲ್ಲಿ ಪ್ರದರ್ಶನ ಪ್ರವೃತ್ತಿ ಮೆರೆದರು.

ಹಿಂದೂ ಮಹಾಸಭಾದ ಅಧ್ಯಕ್ಷರಾದ ಮೇಲೆ ಸಾವರ್ಕರ್ ಗಾಂಧೀಜಿ ಅವರನ್ನು ಎಷ್ಟು ಕಟುವಾಗಿ ಟೀಕಿಸುತ್ತಿದ್ದರು ಎಂಬುದು ಎಲ್ಲರಿಗೂ ಗೊತ್ತು. ಹಾಗಿದ್ದರೂ ತಾವು ಗಾಂಧೀಜಿ ಅವರ ಅಭಿಮಾನಿ ಎಂದು ಸೋಗಲಾಡಿತನ ಮೆರೆದದ್ದು ಗಮನಾರ್ಹವಾಗಿದೆ. ಆದರೆ ತಾವು ತಮ್ಮ ವರ್ತನೆಯನ್ನು ಸುಧಾರಿಸಿಕೊಳ್ಳುತ್ತೇವೆ ಎಂದು ಅವರು ಈ ಹಿಂದೆ ನೀಡಿದ ಭರವಸೆಗಳು, ಬರೆದುಕೊಟ್ಟ ಕ್ಷಮಾಪಣಾ ಪತ್ರಗಳು ಹಾಗೂ ಮುಚ್ಚಳಿಕೆಗಳ ಸಾಕ್ಷ್ಯಗಳನ್ನು ಗಮನಿಸುವಾಗ ಇದೇನೂ ಆಶ್ಚರ್ಯದ ಸಂಗತಿ ಎಂದೆನಿಸುವುದಿಲ್ಲ. ಗಾಂಧೀಜಿ ಅವರ ಹತ್ಯೆಯ ಸಂಬಂಧದಲ್ಲಿ ಅವರ ದಸ್ತಗಿರಿಯಾದ ಮೂರು ವಾರಗಳೊಳಗೆ ಆರ್ಥರ್ ಬೀದಿ ಸೆರೆಮನೆಯಿಂದ ಪೊಲೀಸ್ ಕಮಿಷನರ್ ಅವರಿಗೆ ಅವರು ಒಂದು ಮನವಿ ಮಾಡಿಕೊಂಡರು. "ತಾವು ಇನ್ನು ಮುಂದೆ ಯಾವುದೇ ಕೋಮುವಾದಿ ಅಥವಾ ರಾಜಕೀಯ ಚಟುವಟಿಕೆಗಳಲ್ಲಿ ಸರಕಾರ ಬಯಸುವಷ್ಟು ಕಾಲ ಭಾಗವಹಿಸುವುದಿಲ್ಲವೆಂದು ಮುಚ್ಚಳಿಕೆ ಬರೆದುಕೊಡಲು ಸಿದ್ಧನಿದ್ದೇನೆ. ಆದರೆ ಈ ತರ್ಕದ ಆಧಾರದ ಮೇಲೆ ಸರಕಾರ ತಮ್ಮನ್ನು ಬಿಡುಗಡೆಗೊಳಿಸಬೇಕು" ಎಂದು ಅವರು ಮನವಿ ಪತ್ರದಲ್ಲಿ ವಿನಂತಿಸಿಕೊಂಡಿದ್ದರು.

**ಗಾಂಧೀಜಿ ಹತ್ಯೆಯ ಸಂದರ್ಭ**

ಸಾವರ್ಕರ್ ಅವರ ನೇರ ನಿಯಂತ್ರಣಕ್ಕೆ ಒಳಪಟ್ಟ ಒಂದು ಸಣ್ಣ ಗುಂಪು ಒಳಸಂಚು ರೂಪಿಸಿದ್ದಿರಬಹುದು; ಆದರೆ ೧೯೪೭ರ ವಿಭಜನೆಯ ದಿನಗಳಲ್ಲಿ ಕಂಡುಬಂದ ಮನಃಕ್ಷೋಭೆ ಹಾಗೂ ದ್ವೇಷದ ವಾತಾವರಣದಿಂದಾಗಿ ಇಂಥ ಹೇಯಕೃತ್ಯ ಸಾಧ್ಯವಾಯಿತೆನ್ನಬೇಕು. ಹಲವು ವರ್ಷಗಳ ಕಾಲ ಕಾಂಗ್ರೆಸ್ ಮತ್ತು ಗಾಂಧೀಜಿ ಅವರ ಬಗೆಗಿನ ವೈರತ್ವದ ಭಾವನೆಗಳನ್ನು ಪೋಷಿಸುತ್ತ ಬರಲಾಯಿತಾದರೂ ೧೯೪೭ರಲ್ಲಿ ದ್ವೇಷರೋಷಗಳ ಭಾಷೆಯ ವಿಷ ಗಮನಾರ್ಹವಾಗಿ ಏರಿತು.

ದೇಶ ವಿಭಜನೆಯ ಬೆನ್ನಲ್ಲಿ ಮೈ ತಳೆದ ದೊಂಬಿಗಳು, ವಲಸೆ ಹಾಗೂ ಕಗ್ಗೊಲೆಗಳಿಂದಾಗಿ ಕೋಮುವಾದಿ ವಾತಾವರಣ ಸೃಷ್ಟಿಯಾಯಿತು ಎಂಬುದು ನಿರ್ವಿವಾದದ ಸಂಗತಿ. ಇಂಥ ವಾತಾವರಣ ಹಿಂದೂ ಕೋಮುವಾದದ ಬೆಳವಣಿಗೆಗೆ ಪೂರಕವಾಯಿತು. ತೀವ್ರ ಸ್ವರೂಪದ ಮುಸ್ಲಿಂ ವಿರೋಧಿ ಪ್ರಚಾರ, ಗಲಭೆಗಳಿಗೆ ಪ್ರಚೋದನೆ, ದೊಂಬಿಗಳು, ಹಿಂದೂ ರಾಷ್ಟ್ರದ ಬೇಡಿಕೆ, ಸರಕಾರವನ್ನು ಬುಡಮೇಲು ಮಾಡುವುದು ಮತ್ತು ರಾಷ್ಟ್ರೀಯ ಧುರೀಣರನ್ನು ಗಲ್ಲಿಗೇರಿಸಬೇಕೆಂಬ ಕೂಗು – ಇವೆಲ್ಲ ೧೯೪೮ರ ಜನವರಿ ತಿಂಗಳಿನಲ್ಲಿ ಗಾಂಧೀಜಿ ಅವರ ಹತ್ಯೆಗೆ ಮುನ್ನ ಪರಾಕಾಷ್ಠ ಸ್ಥಿತಿ ಮುಟ್ಟಿದವು.

ಹಿಂದೂ ಮಹಾಸಭಾ ಸ್ವಾತಂತ್ರ್ಯ ದಿನವನ್ನು ಆಚರಿಸಲಿಲ್ಲ; ಬದಲಾಗಿ ೧೯೪೭ರ ಆಗಸ್ಟ್ ೧೫ಅನ್ನು 'ಶೋಕದಿನ'ವೆಂದು ಘೋಷಿಸಿತು. ಅದು ರಾಷ್ಟ್ರಧ್ವಜವನ್ನು ಒಪ್ಪಿಕೊಳ್ಳಲಿಲ್ಲ. ಗೌರವಕ್ಕೆ ಪಾತ್ರವಾಗುವ ಏಕೈಕ ಧ್ವಜವೆಂದರೆ ಭಗವಾಧ್ವಜ ಎಂದೂ ಹೇಳಿತು. ಈ ದೇಶವನ್ನು 'ಹಿಂದೂ ರಾಷ್ಟ್ರ'ವೆಂದು ಘೋಷಿಸಬೇಕೆಂದು ಆಡಳಿತ ಪಕ್ಷವಾದ ಕಾಂಗ್ರೆಸ್‌ನ ಮೇಲೆ ಪದೇ ಪದೇ ಒತ್ತಡ ಹೇರಲಾಯಿತು. ಇಂಥ ಒಂದು ಬೇಡಿಕೆಯ ಮಂಡನೆಯೇ ಈ ಹೊತ್ತಿನಲ್ಲಿ ಹಿಂದೂ ಕೋಮುವಾದಿಗಳ ಶಕ್ತಿ ಸಾಮರ್ಥ್ಯವೇನು ಎಂಬುದಕ್ಕೆ ಸಾಕ್ಷಿಯಾಗಿತ್ತು.

ಕಾಂಗ್ರೆಸ್ ನೇತಾರರು ಹಿಂದೂ ರಾಷ್ಟ್ರದ ಕಲ್ಪನೆಯನ್ನು ಅಸಂಬದ್ಧವೆಂದು ನಿರಾಕರಿಸಿದರು ಎಂಬುದನ್ನು ಹೇಳಬೇಕಾಗಿಲ್ಲ. ಭಾರತೀಯ ರಾಜಕಾರಣದ ಈ ತಿರುವು ಮತನಿರಪೇಕ್ಷ ಹಾಗೂ ಕೋಮುವಾದಿ ಶಕ್ತಿಗಳು ಎಂಬ ವಿಭಜನೆಗೆ ಹೇತುವಾಯಿತು. ರಾಷ್ಟ್ರೀಯತೆಯ ಮಜಲಿನ ಮೇಲೆ ನಡೆದ ಈ ಸ್ಪರ್ಧೆಯೇ 'ಹತ್ಯೆಯ ರಾಜಕಾರಣ'ವಾಯಿತು.

ಸ್ವಾತಂತ್ರ್ಯಾನಂತರ, ಹಿಂದೂ ಕೋಮುವಾದಿ ಗುಂಪುಗಳು ಕಾಂಗ್ರೆಸ್‌ನ ಮೇಲೆ ಪ್ರಭಾವ ಬೀರುವ ಪ್ರಯತ್ನಗಳನ್ನು ಕೈಬಿಟ್ಟು 'ವ್ಯವಸ್ಥಿತವಾದ ಕೋಮು ಹಿಂಸೆ'ಗೆ ಪ್ರತ್ಯಕ್ಷವಾಗಿ ಪ್ರಚೋದನೆ ನೀಡುವ ಮಟ್ಟ ಮುಟ್ಟಿದವು. ರಾಜಧಾನಿ ದೆಹಲಿ ಇವರ ಕಾರ್ಯಾಚರಣೆಗಳ ಮುಖ್ಯ ಕೇಂದ್ರವಾಯಿತು. ೧೯೪೭ರ ಸೆಪ್ಟೆಂಬರ್ ಗಲಭೆಗಳ ಹಿಂದೆಯೂ ಅವರ ಕೈವಾಡವಿತ್ತು. ಆರ್.ಎಸ್.ಎಸ್.ನ ಅನೇಕ ಸದಸ್ಯರು ಸ್ವಾತಂತ್ರ್ಯ ಬಂದ ಬಳಿಕ ನಡೆದ ದೊಂಬಿಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದರು. ದೊಂಬಿಗಳಲ್ಲಿ ಭಾಗವಹಿಸುವುದು ಮಾತ್ರವಲ್ಲದೆ ಸರಕಾರವನ್ನು ಅತ್ಯಂತ ಕುತ್ಸಿತ ರೀತಿಯಲ್ಲಿ ವಿರೋಧಿಸುವ ಪ್ರವೃತ್ತಿಯೂ ಕಂಡುಬಂದಿತು; ಮಾತ್ರವಲ್ಲದೆ ಕಾಂಗ್ರೆಸ್ ನೇತಾರರು ಮತ್ತು ಗಾಂಧೀಜಿ ಮುಸ್ಲಿಮರನ್ನು ತುಷ್ಟೀಕರಿಸುತ್ತಿದ್ದಾರೆ ಎಂಬ ಅಪಪ್ರಚಾರ ಸತ್ರವನ್ನು ಕೈಗೊಂಡರು.

ತುಷ್ಟೀಕರಣದ ಈ ಕೂಗು ತೀರ ಹಳೆಯದು. ಮುಸ್ಲಿಮರನ್ನು ಗಾಂಧಿ ತುಷ್ಟೀಕರಿಸುತ್ತಿದ್ದಾರೆ ಎಂದು ೧೯೨೭ರಲ್ಲಿ ಸಾವರ್ಕರ್ ದ್ವೇಷರೋಷದ ಮಾತುಗಳನ್ನಾಡಿದ್ದರು. ೧೯೪೪ರ ಗಾಂಧಿ-ಜಿನ್ನಾ ಮಾತುಕತೆಗಳನ್ನು ಸಾವರ್ಕರ್ ವಿರೋಧಿಸಿದರು. ಈ ಮಾತುಕತೆಗಳ ಮೂಲಕ ಗಾಂಧೀಜಿ ತನ್ನ ಈ 'ಅಪವಿತ್ರ ಅಭಿಯಾನ'ದಲ್ಲಿ ಜಿನ್ನಾ ಅವರ ಜೊತೆ ಏನಾದರೂ ಒಪ್ಪಂದ ಮಾಡಿಕೊಳ್ಳಬಹುದೆಂಬುದನ್ನು ಮುಂದಾಗಿ ಊಹಿಸಿ ಅದನ್ನು ವಿರೋಧಿಸಲೆಂದು ಅಖಂಡ ಹಿಂದೂ ನೇತಾರರ ಸಮಾವೇಶವನ್ನು ಸಂಯೋಜಿಸುವ ಮುಂದಾಳತ್ವ ವಹಿಸಿದರು.

ಗಾಂಧಿ ಅವರ ಧೋರಣೆಗಳು ಹಿಂದೂ ವಿರೋಧಿ

---

ರಾಷ್ಟ್ರೀಯ ಸ್ವಯಂಸೇವಕ ಸಂಘ ದೇಶದ ವಿವಿಧ ಕಡೆಗಳಲ್ಲಿ ತನ್ನದೇ ಆದ ಶಾಲೆಗಳನ್ನು ಆರಂಭಿಸಿ, ಕೋಮುವಾದಿ ಪಠ್ಯಪುಸ್ತಕಗಳನ್ನು ರೂಪಿಸಿ ಕೋಮುವಾದಿ ಸಿದ್ಧಾಂತದ ವಿಷಬೀಜವನ್ನು ಎಳೆಯ ಮಕ್ಕಳ ಮನದಲ್ಲಿ ಹೇಗೆ ಬಿತ್ತುತ್ತಿದೆ? ಗಾಂಧೀಜಿ ಅವರ ಹತ್ಯೆ ಏಕಾಯಿತು? ಈ ಹತ್ಯೆಯ ಒಳಸಂಚಿನಲ್ಲಿ ಆರ್.ಎಸ್.ಎಸ್., ಹಿಂದೂ ಮಹಾಸಭಾ, ಸಾವರ್ಕರ್ ಮೊದಲಾದವರ ಪಾತ್ರವೇನು? ಹಿಂದೂ ಕೋಮುವಾದಿ ಸಿದ್ಧಾಂತದ ಮೂಲಾಂಶಗಳೇನು? ಎಂಬುದನ್ನು 'ಆರ್.ಎಸ್.ಎಸ್., ಸ್ಕೂಲ್ ಟೆಕ್ಸ್ಟ್ಸ್ ಆ್ಯಂಡ್ ದ ಮರ್ಡರ್ ಆಫ್ ಮಹಾತ್ಮಾ ಗಾಂಧಿ' ಎಂಬ ಗ್ರಂಥದಲ್ಲಿ ಆದಿತ್ಯ ಮುಖರ್ಜಿ, ಮೃದುಲಾ ಮುಖರ್ಜಿ ಹಾಗೂ ಸುಚೇತ ಮಹಾಜನ್ ತಿಳಿಯಾದ ಖಚಿತವಾದ ಭಾಷೆಯಲ್ಲಿ ಮಾರ್ಮಿಕವಾಗಿ ನಿರೂಪಿಸಿದ್ದಾರೆ. ವ್ಯಾಪಕ ಮತ್ತು ತಲಸ್ಪರ್ಶಿ ಅಧ್ಯಯನ ಹಾಗೂ ಸಂಶೋಧನೆ ಮೂಲಕ ಹೊರಹೊಮ್ಮಿದ ಈ ಕೃತಿ ವಿಶ್ವವಿದ್ಯಾನಿಲಯಗಳ ಇತಿಹಾಸ ವಿಭಾಗಗಳಲ್ಲಿ ವಿದ್ಯಾರ್ಥಿಗಳು ಅವಶ್ಯವಾಗಿ ಪಠ್ಯವಾಗಿ ಓದಬೇಕಾದ ಕೃತಿ. ಈ ಗ್ರಂಥದ ಎರಡನೆಯ ಅಧ್ಯಾಯದಲ್ಲಿ ಗಾಂಧೀಜಿ ಹತ್ಯೆಯ ಹಿನ್ನೆಲೆ, ಉದ್ದೇಶ, ಒಳಸಂಚು ಇತ್ಯಾದಿಗಳನ್ನು ವಸ್ತುನಿಷ್ಠ ಶೈಲಿಯಲ್ಲಿ ನಿರೂಪಿಸಲಾಗಿದೆ. ಪ್ರಸ್ತುತ ಲೇಖನವು ಈ ಅಧ್ಯಾಯದ ಸಾರ ಸಂಗ್ರಹವೆನ್ನಬಹುದು.

ಎಂದು ತಪ್ಪಾಗಿ ಭಾವಿಸಿ, ಅದರಿಂದ ಕ್ರುದ್ಧರಾದ ಹಿಂದೂ ಕೋಮುವಾದಿ ಗುಂಪುಗಳಿಂದ ಗಾಂಧೀಜಿ ಆಗಾಗ್ಗೆ ತೀವ್ರ ವಿರೋಧವನ್ನು ಎದುರಿಸಬೇಕಾಯಿತು. ೧೯೪೪ರಲ್ಲಿ ಹಿಂದೂ ಮಹಾಸಭಾದ ಪ್ರದರ್ಶನಕಾರರು ಸೇವಾಗ್ರಾಮಕ್ಕೆ ತೆರಳಿ ಜಿನ್ನಾ ಅವರನ್ನು ಭೇಟಿ ಮಾಡಲು ಮುಂಬೈಗೆ ಹೊರಟಿದ್ದ ಗಾಂಧೀಜಿ ಅವರನ್ನು ಅಕ್ಷರಶಃ ತಡೆಯಲು ಯತ್ನಿಸಿದ್ದರು. ಇವರಲ್ಲಿ ಒಬ್ಬರಿಂದ ಚೂರಿಯನ್ನು ವಶಪಡಿಸಿಕೊಳ್ಳಲಾಯಿತು. ೧೯೪೪ರ ಜುಲೈ ೨೨ರಂದು ನಾರಾಯಣ ಆಪ್ಟೆ ಮತ್ತು ಇತರ ಇಪ್ಪತ್ತೈದು ತರುಣರು ಪಂಚಗಣಿಯಲ್ಲಿ ಗಾಂಧೀಜಿ ವಿರುದ್ಧ ಪ್ರತಿಭಟನೆ ಮಾಡಿದರು; ಮತ್ತೆ ಇವರೇ ನವದೆಹಲಿಯ ಭಂಗಿ ಕಾಲನಿಯಲ್ಲೂ ಪ್ರತಿಭಟಿಸಿದರು. ಹಿಂದೂಗಳ ತ್ಯಾಗದ ಬೆಲೆ ತೆತ್ತು ಮುಸ್ಲಿಮರನ್ನು ತುಷ್ಟೀಕರಿಸಬೇಡಿ ಎಂಬುದೇ ಪ್ರತಿಭಟನೆಯ ಸಾರಾಂಶ. ಕಲ್ಯಾಣ ಮತ್ತು ಪೂನಾ ವಲಯಕ್ಕೆ ಸೇರಿದ ಕರ್ಜತ್ ಎಂಬಲ್ಲಿ ಗಾಂಧೀಜಿ ಅವರು ಪ್ರಯಾಣಿಸುತ್ತಿದ್ದ ವಿಶೇಷ ಟ್ರೈನನ್ನು ಹಳಿ ತಪ್ಪಿಸುವ ಪ್ರಯತ್ನವೂ ನಡೆಯಿತು.

೧೯೪೭ರ ಆಗಸ್ಟ್ ತಿಂಗಳಿನಲ್ಲಿ ಮುಸ್ಲಿಮರ ರಕ್ಷಣೆಯ ದೃಷ್ಟಿಯಿಂದ ಸುಹ್ರವರ್ದಿ ಅವರ ಕೋರಿಕೆ ಮೇರೆಗೆ ಗಾಂಧೀಜಿ ಅವರು ಕಲ್ಕತ್ತೆಯಲ್ಲಿ ತಂಗಿದರು. ಎಲ್ಲಿ ಹಿಂದೂಗಳು ತಮ್ಮ ಮನೆ ಬಿಟ್ಟು ಓಡಿಹೋಗುವಂತೆ ಬಲಾತ್ಕಾರ ಮಾಡಲಾಗುತ್ತಿದೆಯೋ ಅಲ್ಲಿಗೆ ಗಾಂಧೀಜಿ ತೆರಳಬೇಕು ಎಂದು ಹಿಂದೂ ಯುವಕರು ಆಗ್ರಹಿಸಿದರು. ಮತ್ತೊಂದು ದಿನ ಮಹಾಸಭಾದ ಯುವಕರು ಮುಸ್ಲಿಮನ ಇರಿತಕ್ಕೆ ಒಳಗಾದ ಎನ್ನಲಾದ ಒಬ್ಬನನ್ನು ಗಾಂಧೀಜಿ ಬಳಿಗೆ ಕರೆತಂದರು.

ಮುಸ್ಲಿಮರು ದೇಶದ್ರೋಹಿಗಳು ಅಥವಾ ಪಾಕಿಸ್ತಾನಕ್ಕೆ ನಿಷ್ಠರು ಎಂದು ಅನೇಕರು ಗಾಂಧೀಜಿಗೆ ಪತ್ರ ಬರೆದರು. ಗಾಂಧೀಜಿ ಅವರು ಈ ಪತ್ರಗಳನ್ನು ಪ್ರಾರ್ಥನಾ ಸಭೆಗಳಲ್ಲಿ ಓದಿ ಹೇಳಿ ಆರೋಪಗಳನ್ನು ಅಲ್ಲಗಳೆಯುತ್ತಿದ್ದರು. ೧೯೪೭ರ ಡಿಸೆಂಬರ್ ೩ರಂದು ನಡೆದ ಪ್ರಾರ್ಥನಾ ಸಭೆಯಲ್ಲಿ ೨೦,೦೦೦ ಮಂದಿ ಪಾಲ್ಗೊಂಡಿದ್ದರು. ಜನ ಕೋಪಗ್ರಸ್ತರಾಗಿದ್ದರು; ಮುಸ್ಲಿಮರನ್ನು ಒದ್ದೋಡಿಸಿ, 'ಮರ್ನಾ ಹೈತೊ ಮರ್ನೆ ದೊ' (ಸಾಯುವುದಾದರೆ ಸಾಯಲಿ ಬಿಡಿ) 'ಖೂನ್ ಕಾ ಬದಲಾ ಖೂನ್ ಸೆ ಲೇಂಗೆ' (ನೆತ್ತರಿಗೆ ನೆತ್ತರಿನ ಸೇಡು ತೀರಿಸಿಕೊಳ್ಳುವೆವು) ಎಂಬ ಘೋಷಣೆಗಳು ಕೇಳಿಬಂದವು.

ಒಳಸಂಚುಕೋರರು ಹಿಂದೂತ್ವದ ಪ್ರತಿಪಾದಕರು ಮತ್ತು ಗಾಂಧೀಜಿ ಅವರ ಹಳೆಯ ವಿರೋಧಿಗಳು. 'ಹಿಂದೂ ರಾಷ್ಟ್ರ' ಎಂದು ಮತ್ತೆ ಹೆಸರು ಬದಲಿಸಿಕೊಂಡ ಗೋಡ್ಸೆಯ ಪತ್ರಿಕೆ 'ಅಗ್ರಣಿ' ಗಾಂಧೀಜಿ ವಿರುದ್ಧ ಪ್ರತಿರೋಧಕ್ಕೆ ಕರೆ ನೀಡಿತು. ನೌಖಾಲಿ ಮತ್ತು ಪಂಜಾಬ್‌ನಲ್ಲಿ ಹಿಂದೂಗಳ ಮೇಲೆ ನಡೆದ ಹಲ್ಲೆ ಹಾಗೂ ಹಿಂಸೆಯ ವರದಿಗಳನ್ನು ಅದು ಪ್ರಕಟಿಸಿತು.

ತುಷ್ಟೀಕರಣದ ಬಗೆಗಿನ ಹತಾಶೆ ಕೆಲವೊಮ್ಮೆ ಹಿಂಸಾತ್ಮಕ ರೂಪವನ್ನು ತಳೆಯಿತು. ಕಾಂಗ್ರೆಸ್ ಧುರೀಣ ರಾವ್ ಸಾಹೇಬ್ ಪಟವರ್ಧನ್ ಅವರು ಹಿಂದೂ ಮುಸ್ಲಿಂ ಏಕತೆ ಕುರಿತು ಭಾಷಣ ಮಾಡುತ್ತಿದ್ದಾಗ ಮದನ್‌ಲಾಲ್ ಪಹ್ವಾ ಎಂಬುವನು ಅವರ ಮೇಲೆ ಹಲ್ಲೆ ಮಾಡಿದ. (ಈತ ೧೯೪೮ರ ಜನವರಿ ೨೦ರಂದು ಗಾಂಧೀಜಿ ಅವರನ್ನು ಕೊಲ್ಲಲು ಯತ್ನಿಸಿ ವಿಫಲನಾದ). ಗಾಂಧೀಜಿ ಅವರ ಹತ್ಯೆಯಲ್ಲಿ ಗೋಡ್ಸೆಯ ಅನುಚರನಾಗಿದ್ದ ನಾರಾಯಣ ಆಪ್ಟೆ ಪಾಕಿಸ್ತಾನಿ ನಾಯಕರ ಹತ್ಯೆ, ಪಾಕಿಸ್ತಾನಕ್ಕೆ ಮದ್ದುಗುಂಡು ಸಾಗಿಸುತ್ತಿದ್ದ ಸರಣಿ ಸ್ಫೋಟ ಮತ್ತು ಪಾಕಿಸ್ತಾನದ ಅಸೆಂಬ್ಲಿಯ ಸ್ಫೋಟ ಮುಂತಾದ ಯೋಜನೆಗಳನ್ನು ರೂಪಿಸಿದ್ದ. ವಿಚಾರಣೆಯ ಸಮಯದಲ್ಲಿ ಗೋಡ್ಸೆ, ಗಾಂಧೀಜಿ ಅವರ ಹತ್ಯೆಯ ತನ್ನ ನಿರ್ಧಾರವನ್ನು ಹೀಗೆ ವಿವರಿಸಿದ: ''ಗಾಂಧೀಜಿ ತುಷ್ಟೀಕರಣದ ನೀತಿಯನ್ನೇ ಮುಂದುವರಿಸಿದರು. ನನ್ನ ರಕ್ತ ಕುದಿಯಿತು. ನನಗೆ ಇದನ್ನು ಎಷ್ಟು ಮಾತ್ರಕ್ಕೂ ಸಹಿಸಿಕೊಳ್ಳಲಿಕ್ಕೆ ಆಗಲಿಲ್ಲ. ಹಿಂದೂಗಳ ಮೇಲೆ ಮುಸ್ಲಿಮರು ಮಾಡುತ್ತಿದ್ದ ಅತ್ಯಾಚಾರಗಳಿಂದ ಪಾರಾಗಲು ಇದ್ದ ಏಕೈಕ ಪರಿಹಾರವೆಂದರೆ, ನನ್ನ ದೃಷ್ಟಿಯಲ್ಲಿ ಗಾಂಧೀಜಿ ಅವರನ್ನು ಮುಗಿಸಿಬಿಡುವುದು.''

ಭಾರತಮಾತೆಯ ಪುತ್ರನಾಗಿ ರಾಷ್ಟ್ರಪಿತನ ಪ್ರಾಣಹರಣ ಮಾಡುವುದೇ ತನ್ನ ಧರ್ಮಕ್ಕೆ ತಾನು ಸಲ್ಲಿಸುವ ಸೇವೆ ಎಂದು ಗೋಡ್ಸೆ ಭಾವಿಸಿದ್ದ. ಅವನು ಹೇಳಿದ :

''ಗಾಂಧೀಜಿ ಅವರ 'ಅಹಿಂಸಾ'ತತ್ತ್ವದ ಬೋಧನೆಯಿಂದ ಹಿಂದೂ ಸಮುದಾಯ ನಿರ್ವೀರ್ಯವಾಗುತ್ತಿದೆ. ಇದರಿಂದಾಗಿ ಇತರ ಸಮುದಾಯಗಳು, ಮುಖ್ಯವಾಗಿ ಮುಸ್ಲಿಮರು, ನಡೆಸುವ ದಾಳಿಗಳನ್ನು ಎದುರಿಸಲು ಸಾಧ್ಯವಾಗುವುದಿಲ್ಲ ಎಂದು ನಾನು ದೃಢವಾಗಿ ನಂಬಿದ್ದೆ.''

ನೇಣುಗಂಬ ಏರುವಾಗ ಗೋಡ್ಸೆ ಮತ್ತು ಆಪ್ಟೆ ಅವರ ಬಳಿಯಲ್ಲಿ ಅಖಂಡ ಭಾರತದ ನಕ್ಷೆ, ಭಗವಾಧ್ವಜ ಮತ್ತು ಭಗವದ್ಗೀತೆಯ ಪ್ರತಿ ಇದ್ದಿತು.

೧೯೪೯ರ ಮೇ ೬ರಂದು ಶಿಮ್ಲಾದಲ್ಲಿ ಪಂಜಾಬ್ ಉಚ್ಚ ನ್ಯಾಯಾಲಯದ ಮುಂದೆ ಮಾಡಿಕೊಂಡ ಮನವಿಯಲ್ಲಿ ಗೋಡ್ಸೆ ವ್ಯಕ್ತಪಡಿಸಿದ ಅಭಿಪ್ರಾಯ ಹೀಗಿದೆ : ''ಹಲವು

## ನನ್ನ ನಿನ್ನ ಪ್ರೀತಿ

ರೇಶಿಮೆಯ ಹುಳುವಿನಂತೆ ನನ್ನ ಪ್ರೀತಿ
ನನ್ನ ಸುತ್ತ ನಾನೇ
ಕನಸಿನ ನೂಲ ಹೆಣೆದು
ಸುಡು ಸುಡು ನೀರಿನಲಿ ಬಿದ್ದು
ಹೆಣವಾಗಿ ಎದ್ದು
ನಿನಗೆ ಪತ್ತಲು ಉಡುಸಿ
ಸಂತೋಷಪಡುವುದಷ್ಟೇ ಗೊತ್ತು.

ಹೊಳೆವ ಬಂಗಾರ ನನ್ನ ಪ್ರೀತಿ
ಆಳ ಎದೆಯಾಳದದಿರ ಕುಟ್ಟಿ
ಪುಡಿಗಟ್ಟಿ
ಕೆಂಡ ಕುಲುಮೆಯಲಿ ಕುದ್ದು
ಸೋಸಿ
ಮನಸೆಳೆವ ಆಕಾರ ತಳೆದು
ನಿನ್ನ ಕಿವಿ ಕೊರಳು
ಮುಂಗೈಗಳ ವರಿಸಿ
ಸಿಂಗಾರ ನೋಡುವುದಷ್ಟೇ ಗೊತ್ತು.

ಜಾಜಿ ಮಲ್ಲಿಗೆ ಸಂಪಿಗೆ
ಕೆಂಗುಲಾಬಿಯಂತೆ ನನ್ನ ಪ್ರೀತಿ
ಎಲೆಗೆ ಎಲೆಯಿಟ್ಟು
ಭುವಿಯಾಳಕೆ ಬೇರುಬಿಟ್ಟು
ದಳ ದಳವು ಬಿರಿದು
ಸೌಗಂಧ ಪೊರೆದು
ನಿನ್ನ ಮುಡಿಯ ಅಲಂಕರಿಸಿ
ಮುಗುಳ್ನಗುವದಷ್ಟೇ ಗೊತ್ತು.

ನಿನಗೆ ?
ನನ್ನೆಲ್ಲ ಪ್ರೀತಿ
ಕ್ಷಣಿಕ ಸುಖದ್ದು
ಹೀಗೆ ಉಟ್ಟು
ಹಾಗೆ ಬಿಚ್ಚಿ ಎಸೆವ
ಷೋಕಿಯದು.



ಎ. ಹರಿನಾಥ ಬಾಬು ಸಿರುಗುಪ್ಪ
ಸದಾಶಿವನಗರ, ಸಿರುಗುಪ್ಪ - ೫೮೩ ೧೨೧, ಬಳ್ಳಾರಿ ಜಿಲ್ಲೆ

ವರ್ಷಗಳಿಂದ ನನ್ನಲ್ಲಿ ಉಕ್ಕಿಬರುತ್ತಿದ್ದ ಪ್ರಚೋದನೆ ಗಾಂಧೀಜಿ ಅವರ ಕೊನೆಯ ಮುಸ್ಲಿಂ ಪರ ನಿರಶನ ವ್ರತದಲ್ಲಿ ಪರಾಕಾಷ್ಠೆ ಮುಟ್ಟಿತು; ಕೂಡಲೆ ಗಾಂಧೀಜಿ ಅವರನ್ನು ಮುಗಿಸಿಬಿಡಬೇಕೆಂಬ ತೀರ್ಮಾನಕ್ಕೆ ಬರುವಂತೆ ಮಾಡಿತು. ನಮಗೆ ಆದರಣೀಯವಾದ ದೇಶವನ್ನು ಗಾಂಧೀಜಿ ಅವರ ಅನುಮೋದನೆಯ ಮೇರೆಗೆ ಕಾಂಗ್ರೆಸ್‌ನ ಉನ್ನತಮಟ್ಟದ ನಾಯಕರು ಹರಿದು ಹಂಚಿದ್ದನ್ನು ಕಂಡಾಗ ನಮ್ಮ ಮನಸ್ಸಿನ ತುಂಬ ಕೋಪಾವೇಶದ ಭಾವನೆಗಳು ಮುತ್ತಿಕೊಂಡವು. ಗಾಂಧೀಜಿ ಅವರ ಗೈರುಹಾಜರಿಯಲ್ಲಿ ಭಾರತದ ರಾಜಕಾರಣ ಖಂಡಿತಕ್ಕೂ ವ್ಯಾವಹಾರಿಕವಾಗಲಿದೆ; ಪ್ರತಿರೋಧ ಒಡ್ಡಲು ಸಾಧ್ಯವಿದೆ ಮತ್ತು ಸಶಸ್ತ್ರಪಡೆಗಳ ಬಲದಿಂದ ಶಕ್ತಿಶಾಲಿಯಾಗಲಿದೆ ಎಂದು ನಾನು ಭಾವಿಸಿದೆ. ಮನುಕುಲದ ಒಳಿತಿಗಾಗಿ ನಾನು ಈ ಕೃತ್ಯ ಮಾಡಿದ್ದೇನೆ. ಲಕ್ಷಾಂತರ ಹಿಂದೂಗಳ ಅವನತಿ ಹಾಗೂ ವಿನಾಶಕ್ಕೆ ಕಾರಣವಾದ ಯೋಜನೆ ಹಾಗೂ ಕೃತ್ಯಗಳನ್ನು ನಡೆಸಿದ ವ್ಯಕ್ತಿಯ ಮೇಲೆ ಗುಂಡೆಸೆದೆ ಎಂದು ನಾನು ಹೇಳುತ್ತಿದ್ದೇನೆ.''

ಹಿಂದೂ ಕೋಮುವಾದಿಗಳು ಗಾಂಧೀಜಿ ಅವರನ್ನೇ ಏಕೆ ತಮ್ಮ ಗುರಿಯಾಗಿಸಿಕೊಂಡರು ? ಅವರ ಬಗ್ಗೆಯೇ ಏಕೆ ಭಯ, ಕೋಪ, ದ್ವೇಷರೋಷಗಳು ಮಡುಗಟ್ಟಿದವು ? ಒಂದು ಉತ್ತರವೆಂದರೆ ಅವರು ಮುಸ್ಲಿಂರ ಪರ ಎಂಬ ಭಾವನೆ. ಇನ್ನೊಂದು ಉತ್ತರವೆಂದರೆ - 'ರಾಮರಾಜ್ಯ'ವೆಂದು ಭಾವಿಸಲಾದ ಗಾಂಧೀಜಿ ಅವರ 'ಸ್ವರಾಜ್ಯ'ದ ಪರಿಕಲ್ಪನೆಯು ಹಿಂದೂ ರಾಜ್ಯದ ಗುರಿಸಾಧನೆಗೆ ದೊಡ್ಡ ತೊಡರಾಗಲಿದೆ ಎಂಬ ಭಯ. ಮುಸ್ಲಿಂ ರಾಜ್ ಕೂಗಿಗೆ ಪ್ರತಿಯಾಗಿ ಹಿಂದೂ ರಾಜ್, ಪಾಕಿಸ್ತಾನವೂ ಸೇರಿದಂತೆ ಅಖಂಡ ಹಿಂದೂಸ್ತಾನದ ಕೂಗು ಹಾಕಬಹುದು. ಆದರೆ 'ರಾಮರಾಜ್ಯ'ಕ್ಕೆ ಉತ್ತರ ಏನು ? ಆದರ್ಶ 'ರಾಮರಾಜ್ಯ'ದ ಕಲ್ಪನೆ ಎದುರಿಗಿರುವಾಗ ಹಿಂದೂಗಳು 'ಹಿಂದೂರಾಜ್ಯ'ದ ಪರಿಕಲ್ಪನೆಗೆ ಬೆಂಬಲ ನೀಡುವರೇಕೆ ? ಹೀಗಾಗಿ, ಅತ್ಯಂತ ವ್ಯಂಗ್ಯದ ಸಂಗತಿ ಎಂದರೆ ಮಹಾನ್ ಜೀವಂತ ಹಿಂದೂವನ್ನು ಹಿಂದೂತ್ವವಾದಿಗಳು ತಮ್ಮ ಗುರಿ ಮಾಡಿಕೊಂಡರು !

ಹಿಂದೂ ಹಿತಾಸಕ್ತಿಗಳಿಗೆ ರಾಷ್ಟ್ರೀಯ ಧುರೀಣರು ದ್ರೋಹ ಬಗೆಯುತ್ತಿದ್ದಾರೆಂದು ಹಿಂದೂ ಮಹಾಸಭಾದ ಕಾರ್ಯಕರ್ತರು ಬಹಿರಂಗವಾಗಿ ಆಕ್ಷೇಪ ವ್ಯಕ್ತಪಡಿಸಿದರು. ನೆಹ್ರೂ, ಪಟೇಲ್ ಮತ್ತು ಆಜ಼ಾದ್ ಅವರನ್ನು ನೇಣಿಗೇರಿಸಲಾಗುವುದು ಎಂದು ಅವರು ಬೆದರಿಕೆ ಹಾಕಿದರು. ಮಹಾಸಭಾದ ಸಭೆಗಳಲ್ಲಿ ''ಗಾಂಧಿ ಮುರ್ದಾಬಾದ್'' ಎಂಬ ಸಾಮಾನ್ಯ ಘೋಷಣೆ ಮೊಳಗಿತು.

ಗಾಂಧೀಜಿ ಅವರಲ್ಲಿ ಆತ್ಮಾಭಿಮಾನ ಇನ್ನೂ ಉಳಿದಿದ್ದರೆ ಅವರು ಆತ್ಮಹತ್ಯೆ ಮಾಡಿಕೊಳ್ಳಲಿ ಇಲ್ಲವೆ ಭಾರತದ ರಾಜಕಾರಣಕ್ಕೆ ಶಾಶ್ವತವಾಗಿ ವಿದಾಯ ಹೇಳಲಿ ಎಂದು ಗೋಡ್ಸೆಯ ಪತ್ರಿಕೆ 'ಅಗ್ರಣಿ' ಗಾಂಧೀಜಿ ಅವರಿಗೆ ಉಪದೇಶ ನೀಡಿತು.

ಭಾಷಣಗಳ ಧ್ವನಿಯಲ್ಲಿ ಅಣಕ, ವ್ಯಂಗ್ಯ ತುಂಬಿ ತುಳುಕುತ್ತಿದ್ದವು. 'ಹಿಂದೂರಾಷ್ಟ್ರ' ಪತ್ರಿಕೆಯು ರಾಷ್ಟ್ರೀಯ ನೇತಾರರ ಬಗ್ಗೆ ಬರೆಯುತ್ತಾ ''ಈ ಅಡೆತಡೆಗಳನ್ನು ಕಿತ್ತೊಗೆಯಿರಿ. ಭಾರತೀಯ ಸಾಹಸದ ಪ್ರವಾಹದಿಂದ ಅರೆಕ್ಷಣದಲ್ಲಿ ಅಖಂಡ ಭಾರತದ ನಿರ್ಮಾಣ ಸಾಧ್ಯ'' ಎಂದಿತು. ಗಾಂಧೀಜಿ ಅವರ ಹತ್ಯೆಗೆ ಆರು ದಿನಗಳ ಮೊದಲು ಇದೇ ಪತ್ರಿಕೆ ಹೀಗೆ ಬರೆಯಿತು : ''ಎಲ್ಲಿಯತನಕ ಗಾಂಧೀಜಿ ರಾಷ್ಟ್ರವಿರೋಧಿ ಭಾಷಣಗಳನ್ನು ಮಾಡುತ್ತಾರೋ ಮತ್ತು ಎಲ್ಲಿಯತನಕ ವಿಪರೀತ ಹೇಳಿಕೆಗಳನ್ನು ನೀಡುತ್ತಾರೋ ಅಲ್ಲಿಯ ತನಕ ಅವರಿಗೆ ಭಾರತ ಸರಕಾರ ಸಶಸ್ತ್ರ ಸೈನಿಕರ ಮೂಲಕ ರಕ್ಷಣೆ ಒದಗಿಸಬೇಕು.''

೧೯೪೮ರ ಜನವರಿ ೨೮ರಂದು ನೆಹ್ರೂ ಅವರು ''ಮಹಾಸಭಾ ನಾಯಕರುಗಳ ಭಾಷಣಗಳಲ್ಲಿ ಅಸಾಧಾರಣ ಆವೇಶವಿದೆ. ಸಹನೆಯ ಮಿತಿಮೀರುವ ಸ್ಥಿತಿ ಒದಗಿದೆ'' ಎಂದು ಎಸ್. ಪಿ. ಮುಖರ್ಜಿ ಅವರಲ್ಲಿ ದೂರಿದರು. ಅದೇ ಸಮಯದಲ್ಲಿ ಪಟೇಲ್ ಅವರಿಗೆ ಬರೆದ ಪತ್ರದಲ್ಲಿ ''ಹಿಂದೂ ಮಹಾಸಭಾ ಮತ್ತು ಆರ್.ಎಸ್.ಎಸ್.ನ ಮನೋಭಾವಗಳ ಹಿನ್ನೆಲೆಯಲ್ಲಿ ಅವರ ಬಗ್ಗೆ ತಟಸ್ಥವಾಗಿರಲು ಸಾಧ್ಯವಿಲ್ಲ'' ಎಂದು ಅಭಿಪ್ರಾಯಪಟ್ಟರು. ''ಹಿಂದೂ ಮಹಾಸಭಾದವರ ಭಾಷಣಗಳು ದಿನೇ ದಿನೇ ಅಸಹನೀಯವೂ ಆಕ್ಷೇಪಾರ್ಹವೂ ಆಗುತ್ತಿವೆ. ಈ ಅನಿಷ್ಟವನ್ನು ತಡೆಗಟ್ಟಲು ಏನಾದರೂ ಮಾಡಬೇಕು'' ಎಂದು ನೆಹ್ರೂ ಅವರು ಅಂದಿನ ಬಿಹಾರ ಮುಖ್ಯಮಂತ್ರಿಗಳಲ್ಲಿ ನಿವೇದಿಸಿಕೊಂಡರು.

ಹಿಂದೂ ಕೋಮುವಾದಿ ಗುಂಪುಗಳ ಅಪಪ್ರಚಾರದ ಪ್ರಕಾರ ಭಾರತ ಸರಕಾರದ ದ್ರೋಹಕ್ಕೆ ಸಾಕ್ಷಿ ಎಂದರೆ ಪಾಕಿಸ್ತಾನಕ್ಕೆ ೫೫ ಕೋಟಿ ರೂ.ಗಳನ್ನು ಅದು ತೆರಬೇಕಾಗಿರುವುದು. ಭಾರತೀಯ ಪ್ರಾಂತ್ಯದಲ್ಲಿರುವ ಪಾಕಿಸ್ತಾನದ ಸ್ಥಿರ ಆಸ್ತಿಯ ಬದಲಿಗೆ ಆರ್ಥಿಕ ಪರಿಹಾರವಾಗಿ ಭಾರತ ಸರಕಾರ ಅದಕ್ಕೆ ೫೫ ಕೋಟಿ ರೂ.ಗಳನ್ನು ನೀಡಲು ಒಪ್ಪಿಕೊಂಡಿತ್ತು. ಭಾರತ ಸರಕಾರ ಆಗ ಇಕ್ಕಟ್ಟಿನ ಸ್ಥಿತಿಯಲ್ಲಿತ್ತು. ಏಕೆಂದರೆ ಕಾಶ್ಮೀರದಲ್ಲಿ ಭಾರತ ಮತ್ತು ಪಾಕಿಸ್ತಾನ ಒಂದು ಸಣ್ಣ ಕದನದಲ್ಲಿ ನಿರತವಾಗಿದ್ದವು. ಈ ಹಂತದಲ್ಲಿ ಪಾಕಿಸ್ತಾನಕ್ಕೆ ಆರ್ಥಿಕ ಪರಿಹಾರ ನೀಡಿದರೆ ಅದು ಭಾರತದ ವಿರುದ್ಧದ ಹೋರಾಟದಲ್ಲಿ ಪಾಕಿಸ್ತಾನಕ್ಕೆ ಬೆಂಬಲ ನೀಡಿದ ಹಾಗೆ ಆಗುತ್ತಿತ್ತು. ಭಾರತ ಸರಕಾರ 'ವಚನದ್ರೋಹ' ಬಗೆಯುತ್ತಿದೆ ಎಂದು ಪಾಕಿಸ್ತಾನ ಸಾರ್ವಜನಿಕವಾಗಿ ನಿಂದಿಸಿದ್ದು ಮಾತ್ರವಲ್ಲದೆ ಕೂಡಲೆ ಹಣ ಬಿಡುಗಡೆಗೊಳಿಸಬೇಕೆಂದು ಒತ್ತಡ ಹೇರಿತು.

ಭಾರತ ಸರಕಾರ ಕೊಟ್ಟ ಮಾತಿಗೆ ತಕ್ಕಂತೆ ನಡೆದುಕೊಳ್ಳಬೇಕು ಮತ್ತು ಹಿಂದೂಗಳು ಹಾಗೂ ಮುಸಲ್ಮಾನರು ಒಂದಾಗಿ ಬಾಳಬೇಕು ಎಂದು ಒತ್ತಾಯಿಸಿ ಗಾಂಧೀಜಿ ಅವರು ೧೯೪೮ರ ಜನವರಿ ೧೩ರಿಂದ ನಿರಶನ ವ್ರತ ಕೈಗೊಳ್ಳಲು ನಿರ್ಧರಿಸಿದರು.

ಗಾಂಧೀಜಿ ಅವರ ಅನುಯಾಯಿಗಳು ಮತ್ತು ಶಿಷ್ಯರು, ನೆಹ್ರೂ ಹಾಗೂ ಪಟೇಲ ನೇತೃತ್ವದ ಭಾರತ ಸರಕಾರ ಬೇರೇನೂ ಮಾಡಲಾಗಲಿಲ್ಲ; ನಿಗದಿತ ಮೊಬಲಗನ್ನು ಪಾಕಿಸ್ತಾನಕ್ಕೆ ಒಪ್ಪಿಸಲಾಯಿತು.

ರಾಷ್ಟ್ರೀಯ ನಾಯಕತ್ವವು ರಾಷ್ಟ್ರವಿರೋಧಿಯಾಗಿದೆ ಎಂದು ಕೂಗೆಬ್ಬಿಸಲು ಹಿಂದೂ ಕೋಮುವಾದಿಗಳಿಗೆ ಇದಕ್ಕಿಂತ ಉತ್ತಮ ಅವಕಾಶ ಬೇರೊಂದು ಇದ್ದಿರಲಾರದು. ದೆಹಲಿಯ ಹಿಂದೂಗಳು ತಮ್ಮ ನೆರೆಕೆರೆಯ ಮುಸಲ್ಮಾನರ ಜೊತೆ ಶಾಂತಿಯುತವಾಗಿ ಬಾಳುತ್ತೇವೆ ಎಂದು ಏಳು ಅಂಶದ ಪ್ರತಿಜ್ಞೆ ಕೈಗೊಂಡಮೇಲೆ ಗಾಂಧೀಜಿ ತಮ್ಮ ನಿರಶನ ವ್ರತವನ್ನು ಹಿಂತೆಗೆದುಕೊಂಡರು. ಇದರ ಮರುದಿನ ಹಿಂದೂ ಮಹಾಸಭಾದ ಮಹಾಕಾರ್ಯದರ್ಶಿ ಸಾರ್ವಜನಿಕ ಹೇಳಿಕೆ ನೀಡಿ ಪಾಕಿಸ್ತಾನಕ್ಕೆ ೫೫ ಕೋಟಿ ರೂಪಾಯಿ ನೆರವು ನೀಡುವ ಸರಕಾರದ ನಿರ್ಧಾರದಿಂದ ದೇಶಾದ್ಯಂತ ಆಳವಾದ ಅಸಮಾಧಾನದ ಅಲೆಗಳೆದ್ದಿವೆ ಎಂದರು. ಮುಸ್ಲಿಮರನ್ನು ತುಷ್ಟೀಕರಿಸುವುದೇ ಗಾಂಧೀಜಿ ಅವರ ನೀತಿ ಎಂಬುದು ಅವರು ಕೈಗೊಂಡ ಉಪವಾಸ ವ್ರತದಿಂದ ಮದನ್‌ಲಾಲ್ ಪಹ್ವಾನಿಗೆ ಖಾತ್ರಿಯಾಯಿತು. ದೆಹಲಿಯ ಹಿಂದೂಗಳು ಮಾಡಿದ ಪ್ರತಿಜ್ಞೆಯಿಂದ ಆತ ಸಿಟ್ಟಿಗೆದ್ದ ಮತ್ತು ಸಬ್ಜಿ ಮಂಡಿಯಲ್ಲಿ ಸಾರ್ವಜನಿಕ ಸಭೆಯಲ್ಲಿ ನೆಹ್ರೂ ಹಾಗೂ ಜಯಪ್ರಕಾಶ್ ನಾರಾಯಣ್ ಭಾಷಣ ಮಾಡುತ್ತಿದ್ದಾಗ ಗದ್ದಲವೆಬ್ಬಿಸಿದ. ಪೊಲೀಸರು ಅವನನ್ನು ಅಲ್ಲಿಂದ ಎಳೆದೊಯ್ದರು. ''ಗಾಂಧೀಜಿ ಅವರ ಉಪವಾಸ ಕೊನೆಯ ಎಚ್ಚರಿಕೆ. ನನ್ನ ಭಾವನೆಗಳ ಮೇಲೆ ನಾನು ನಿಯಂತ್ರಣ ಕಳೆದುಕೊಂಡೆ'' ಎಂದು ಗೋಡ್ಸೆ ವಿಚಾರಣೆಯ ವೇಳೆ ಹೇಳಿದ.

ಗಾಂಧೀಜಿ ಹಲ್ಲೆಯ ಕೇಂದ್ರವಾದರು. ನವದೆಹಲಿಯ ಅವರ ನಿವಾಸ ಬಿರ್ಲಾ ಭವನದ ಮುಂದೆ ಪ್ರತಿಭಟನೆ ನಡೆಯಿತು. ೧೯೪೮ರ ಜನವರಿ ೨೦ರಂದು ಗಾಂಧೀಜಿ ಅವರ ಹತ್ಯೆಗೆ ವಿಫಲ ಯತ್ನ ನಡೆಯಿತು. ಜನವರಿ ೩೦ರಂದು ಹಂತಕ ಗುರಿ ತಪ್ಪಲಿಲ್ಲ. ಗಾಂಧೀಜಿಯನ್ನು ಗುಂಡಿಟ್ಟು ಕೊಂದ.



**ಗಾಂಧೀಜಿ ಹತ್ಯೆಯ ಬಗ್ಗೆ ವಿಷಾದರಹಿತ ಸ್ಥಿತಿ**

ಹಿಂದೂ ಕೋಮುವಾದಿ ಚಿಂತನೆಯ ಬಗ್ಗೆ ಸಹಾನುಭೂತಿ ಹೊಂದಿದ್ದವರು ಗಾಂಧೀಜಿ ಅವರ ಹತ್ಯೆಯಿಂದ ದಿಙ್ಮೂಢರಾದರು. ಗಾಂಧೀಜಿ ಅವರ ನಿಕಟವರ್ತಿಗಳಲ್ಲೊಬ್ಬರು ಹೀಗೆ ಬರೆದರು : ''ಹಲವು ತಿಂಗಳುಗಳ ಕಾಲ ಭಾರತದಾದ್ಯಂತ ಮುಸ್ಲಿಂ ಅಲ್ಪಸಂಖ್ಯಾತ ಗುಂಪು ಆಕ್ರಮಣಕ್ಕೆ ಒಳಗಾಗದೆ ಸುರಕ್ಷಿತವಾಗಿತ್ತು. ಮಹಾತ್ಮಾರನ್ನು ಕೊಂದ ಆರ್.ಎಸ್.ಎಸ್. ದೇಶಕ್ಕೆ ಆಘಾತ ನೀಡಿತು. ಗಾಂಧೀಜಿ ಅವರನ್ನು ಕೋಪಾವೇಶದಿಂದ ಟೀಕಿಸುತ್ತಿದ್ದವರು ಈಗ ತಮ್ಮ ಅವಿವೇಕದ ಕೋಪದ ದುರಂತ ಪರಿಣಾಮಗಳಿಗೆ ಸಾಕ್ಷಿಯಾದರು. ಗಾಂಧೀಜಿ ಅವರ ಧೋರಣೆ ಸರಿ ಎಂಬುದು ಅವರಿಗೆ ತಿಳಿಯಿತು.'' ಆದರೆ ಆರ್.ಎಸ್.ಎಸ್. ಮತ್ತು ಹಿಂದೂ ಮಹಾಸಭಾ ಹೀಗೆ ಭಾವಿಸಲಿಲ್ಲ. ಹಳೆಯ ಚಾರಿತ್ರಿಕ ತಪ್ಪುಗಳನ್ನು ಸರಿಪಡಿಸಲು ಹೊರಡುವವರು ಎರಡು ತಪ್ಪುಗಳಿಂದ ಒಂದು ಸರಿಯಾಗಲಾರದು ಎಂಬುದನ್ನು ಮರೆಯುತ್ತಾರೆ. ಆರ್.ಎಸ್.ಎಸ್. ಮತ್ತು ಹಿಂದೂ ಮಹಾಸಭಾ ಈ ಕರಾಳ ಕೃತ್ಯದ ಬಗ್ಗೆ ಪಶ್ಚಾತ್ತಾಪ ಪಡುವುದಿರಲಿ, ವಿಷಾದವನ್ನು ಸಹ ವ್ಯಕ್ತಪಡಿಸಲಿಲ್ಲ. ಆರ್.ಎಸ್.ಎಸ್. ಕಡೆಯಿಂದ ಗಾಂಧೀಜಿ ಅವರ ಹತ್ಯೆಯನ್ನು ಖಂಡಿಸುವ ಒಂದೇ ಒಂದು ಸರಳ ಹೇಳಿಕೆಯೂ ಬರಲಿಲ್ಲ. ಪ್ರತಿವಾದಿಗಳ ವಾದದಲ್ಲಿನ ದೋಷಗಳನ್ನು

ಎತ್ತಿಕೊಂಡು ಅವರು ಇಂದಿಗೂ ಈ ಕೃತ್ಯವನ್ನು ಸಮರ್ಥಿಸುತ್ತಲೇ ಇದ್ದಾರೆ.

ಗೋಡ್ಸೆಯನ್ನು ಇಂದಿಗೂ ವೈಭವೀಕರಿಸಲಾಗುತ್ತಿದೆ. ಗಾಂಧೀಜಿ ಅವರನ್ನು ಮೂಲೆಗೆ ಸರಿಸಿ ಸಾವರ್ಕರ್ ಅವರನ್ನು ಆಗೊಮ್ಮೆ ಈಗೊಮ್ಮೆ ಕ್ರಾಂತಿಕಾರಿ ಎಂದು ಸ್ಮರಿಸಿಕೊಳ್ಳಲಾಗುತ್ತದೆ.

೧೯೯೩ರ ನವೆಂಬರ್ ೧೯ರಂದು ಮುಂಬೈನ ದಾದರ್‌ನಲ್ಲಿ ಪಾಟೀಲ್ ಮಾರುತಿ ದೇವಳದಲ್ಲಿ ಒಂದು ಸಭೆ ನಡೆಯಿತು. ಗಾಂಧೀಜಿ ಅವರ ಹಂತಕ ನಾಥುರಾಮ್ ಗೋಡ್ಸೆ ಸ್ಮರಣಾರ್ಥ ನಡೆದ ಕಾರ್ಯಕ್ರಮವದು. ಗೋಡ್ಸೆಯ ತಮ್ಮ ಗೋಪಾಲ ಗೋಡ್ಸೆ ಗಾಂಧಿ ಹತ್ಯೆ ಒಳಸಂಚಿನ ಪ್ರಕರಣದ ಓರ್ವ ಆರೋಪಿ. ಈ ಸಭೆಯಲ್ಲಿ ಆತ ನಾಥುರಾಮ್ 'ಅಖಂಡ ಭಾರತ ನಿರ್ಮಾಣ'ಕ್ಕೆ ನೀಡಿದ್ದ ಕರೆಯನ್ನು ಓದಿ ಹೇಳಿದ. ಈ ಅಖಂಡ ಭಾರತವೆಂದರೆ ಪಾಕಿಸ್ತಾನವನ್ನು ಒಳಗೊಂಡ ಹಿಂದೂ ರಾಷ್ಟ್ರ. ಸಂಸ್ಕೃತದಲ್ಲಿದ್ದ ಸಾಲುಗಳನ್ನು ಒಂದು ಪ್ರತಿಜ್ಞಾವಿಧಿ ಎಂಬಂತೆ ಸಭಾಸದರು ಪುನರುಚ್ಚರಿಸಿದರು.

ಭಾಷಣಗಳಲ್ಲಿ ದ್ವೇಷ, ಮತಾಂಧತೆ ಹಾಗೂ ವೈಭವೀಕರಣ ತುಂಬಿ ತುಳುಕುತ್ತಿತ್ತು. ಗಾಂಧೀಜಿ ಬಗ್ಗೆ ದ್ವೇಷ, ನಾಥುರಾಮ್ ಗೋಡ್ಸೆ ಬಗ್ಗೆ ಆದರಾಭಿಮಾನ ಹಾಗೂ ಶಿವಸೇನೆಯ ನೇತಾರ ಬಾಳ ಠಾಕ್ರೆಯ ಮಾತುಗಳನ್ನು ಮೀರಿಸುವಂಥ ಕೋಮುದ್ವೇಷ ತುಂಬಿದ ಭಾಷಣಗಳು ಕೇಳಿಬಂದವು. 'ಪಾಕಿಸ್ತಾನವನ್ನು ಹಿಂದೂರಾಷ್ಟ್ರದ ಅಧೀನಕ್ಕೆ ತಂದು ಸಿಂಧೂ ನದಿಯನ್ನು ಮುಕ್ತಗೊಳಿಸುವ' ಕಾರ್ಯಕ್ಕೆ ಉದಾರ ದೇಣಿಗೆ ನೀಡಿರೆಂದು ಗೋಪಾಲ ಗೋಡ್ಸೆ ವಿನಂತಿ ಮಾಡಿಕೊಂಡ. ಸಿಂಧೂ ನದಿಯ ದಂಡೆಯ ಮೇಲೆ ವೇದಗಳು ಹಾಗೂ ಇತರ ಪವಿತ್ರ ಗ್ರಂಥಗಳ ರಚನೆಯಾಯಿತು; ಆದುದರಿಂದ ಅದು ಹಿಂದೂಗಳಿಗೆ ಪವಿತ್ರ ನದಿ ಎಂದು ಆತ ವಿವರಿಸಿದ. ಮೇಲಾಗಿ ತನ್ನ ಚಿತಾಭಸ್ಮವನ್ನು ಸಿಂಧೂ ನದಿಯಲ್ಲೇ ಲೀನಗೊಳಿಸಬೇಕು ಎಂದು ನಾಥುರಾಮ್ ಗೋಡ್ಸೆ ಬಯಸಿದ್ದ. ಏಕೆಂದರೆ ಗಾಂಧೀಜಿ ಅವರ ಚಿತಾಭಸ್ಮದಿಂದ ಎಲ್ಲ ನದಿಗಳೂ ಕಲುಷಿತಗೊಂಡಿವೆ ಎಂದು ಆತ ಸೆರೆಮನೆಯಲ್ಲಿ ಹೇಳಿದ್ದನಂತೆ.

ಈ ಸಭೆಯಲ್ಲಿ ಗಾಂಧೀಜಿಯನ್ನು ಭಾರತದ ರಾಷ್ಟ್ರಪಿತ ಎಂದು ಸಂಬೋಧಿಸದೆ ಪಾಕಿಸ್ತಾನದ ರಾಷ್ಟ್ರಪಿತನೆಂದು ಕರೆಯಲಾಯಿತು. ಅವರ ಹತ್ಯೆಯ ದಿನವನ್ನು ಪರ್ವ ದಿನವೆಂದು ಬಣ್ಣಿಸಲಾಯಿತು. ಗಾಂಧೀಜಿಯ ಹತ್ಯೆಯನ್ನು 'ವಧೆ' ಎಂದು ಎಲ್ಲ ಭಾಷಣಕಾರರೂ ವರ್ಣಿಸಿದರು. ಗಾಂಧೀಜಿ ರಾಷ್ಟ್ರದ್ರೋಹಿಯಾದರೆ ಗಾಂಧಿಯನ್ನು ಕೊಂದು ಭಾರತದ ಇನ್ನೊಂದು ವಿಭಜನೆಯನ್ನು ತಪ್ಪಿಸಿದ ನಾಥುರಾಮ್ ಗೋಡ್ಸೆಯನ್ನು 'ರಾಷ್ಟ್ರವೀರ'ನೆಂದು ಸಂಬೋಧಿಸಲಾಯಿತು. ಗಾಂಧೀಜಿಯವರನ್ನು ಓರ್ವ 'ಮತಾಂಧ'ನೆಂದೂ ಮುಗ್ಧ ಹಿಂದೂಗಳ ರಕ್ತದಿಂದ ಕೈತೊಳೆದುಕೊಂಡ 'ರಕ್ತಪಿಪಾಸು' ವೆಂದೂ ಬಣ್ಣಿಸಿದರು. ಮುಗ್ಧ ಹಿಂದೂಗಳ ದಾರುಣ ಹತ್ಯೆಯನ್ನು ತಡೆಯುವ ಒಂದೇ ಒಂದು ಉಪಾಯವೆಂದರೆ ಮುಗ್ಧ ಮುಸ್ಲಿಮರನ್ನು ಕೊಲ್ಲುವುದು ಎಂದು ಓರ್ವ ಭಾಷಣಕಾರರು ಅಪ್ಪಣೆ ಕೊಡಿಸಿದರು.

ಇದೇ ಬಗೆಯ ಅಭಿಪ್ರಾಯಗಳನ್ನು ಇತರ ನೇತಾರರೂ ವ್ಯಕ್ತಪಡಿಸಿದ್ದಾರೆ. ೧೯೯೧ರ ಮೇ ೧೬ರಂದು ಬಾಳ ಠಾಕ್ರೆ ಪುಣೆಯಲ್ಲಿ ಹೇಳಿದರು : ''ನಮಗೆ ನಾಥುರಾಮ್ ಬಗ್ಗೆ ಹೆಮ್ಮೆಯಿದೆ. ಎರಡನೆಯ ವಿಭಜನೆಯಿಂದ ಆತ ದೇಶವನ್ನು ಪಾರು ಮಾಡಿದ.''

ಇತ್ತೀಚಿನ ವರ್ಷಗಳಲ್ಲಿ ಗೋಡ್ಸೆಯ ವೈಭವೀಕರಣದ ಒಂದು ಪ್ರಯತ್ನವೆಂದರೆ ಪ್ರದೀಪ್ ದಳ್ವಿ ಅವರ ಮರಾಠಿ ನಾಟಕದಲ್ಲಿ ಗೋಡ್ಸೆಯ ಸಹಾನುಭೂತಿ ಪರ ಚಿತ್ರಣ. ಕಾಂಗ್ರೆಸ್ ಸರಕಾರ ಈ ನಾಟಕದ ಪ್ರದರ್ಶನಕ್ಕೆ ಅನುಮತಿ ನಿರಾಕರಿಸಿದರೆ ಮಹಾರಾಷ್ಟ್ರದಲ್ಲಿ ಶಿವಸೇನಾ-ಬಿಜೆಪಿ ಸರಕಾರ ಅನುಮತಿ ನೀಡಿತು.

ಪರಾಕಾಷ್ಠೆಯ ಸಂಗತಿ ಎಂದರೆ ೨೦೦೩ರಲ್ಲಿ ಬಿಜೆಪಿ ಸರಕಾರದ ಆದೇಶದ ಮೇರೆಗೆ ಪಾರ್ಲಿಮೆಂಟ್ ಭವನದಲ್ಲಿ, ವ್ಯಾಪಕ ಪ್ರತಿಭಟನೆಯ ನಡುವೆಯೂ ಸಾವರ್ಕರ್ ಅವರ ಭಾವಚಿತ್ರವನ್ನು ಸ್ಥಾಪಿಸಿ ನಮ್ಮ ಯುಗದ ಅತ್ಯಂತ ದೊಡ್ಡ ಮನುಷ್ಯನ ಸ್ಮೃತಿಗೆ ಅವಮಾನ ಮಾಡಿದ್ದು. ಉರಿಯುವ ಗಾಯಕ್ಕೆ ಉಪ್ಪೆರಚುವಂತೆ ಈ ಭಾವಚಿತ್ರವನ್ನು ಗಾಂಧೀಜಿ ಅವರ ಭಾವಚಿತ್ರದ ಎದುರಿಗೇ ಇಡಲಾಗಿದೆ.

ಗಾಂಧೀಜಿ ಅವರ ಹತ್ಯೆಯಾಗಿ ನಲ್ವತ್ತು ವರ್ಷಗಳು ಕಳೆದಮೇಲೂ ಆರ್.ಎಸ್.ಎಸ್. ಮತ್ತು ಜನಸಂಘ-ಬಿಜೆಪಿ ವಲಯದಲ್ಲಿ ಸಾವರ್ಕರ್ ಬಗ್ಗೆ ಯಾಕೆ ಮೌನ ನೆಲೆಸಿತ್ತು, ಎಂದು ಪ್ರಶ್ನಿಸುವುದು ನ್ಯಾಯೋಚಿತವಾಗಿದೆ. ಗಾಂಧೀಜಿ ಹತ್ಯೆಯ ಜೊತೆ ಅವರ ಹೆಸರು ತಳುಕು ಹಾಕಿಕೊಂಡದ್ದರಿಂದ ಸಾವರ್ಕರ್ ಅವರ ಹೆಸರನ್ನು ಉಲ್ಲೇಖಿಸುವುದು ರಾಜಕೀಯವಾಗಿ ಆತ್ಮಹನನಕಾರಿಯೇ ?

ಈಗ ಸಾಕಷ್ಟು ಸಮಯ ಸರಿದ ಮೇಲೆ, ಸಾರ್ವಜನಿಕರ ನೆನಪು ಮಾಸಿದ ಮೇಲೆ ಮತ್ತೆ ಅವರನ್ನು ಪುನರ್ ಸ್ಥಾಪಿಸುವುದು ಯೋಗ್ಯವೆಂಬ ನಂಬಿಕೆಯೇ ? ಅಥವಾ ಹೊಸ ಆಕ್ರಮಣಕಾರಿ ಕಾಲಘಟ್ಟದ ಭಾಗವಾಗಿ 'ಹಿಂದೂತ್ವ'ಕ್ಕೆ ಸಾರ್ವಜನಿಕ ಬೆಂಬಲ ದೊರೆಯುತ್ತಿರುವುದರಿಂದಾಗಿ ಮೂಲ ಕಲ್ಪನೆಯ ಕರ್ತೃವನ್ನು ಕಡೆಗಣಿಸುವುದು ಕಷ್ಟವೆಂದೇ ? 'ರಾಷ್ಟ್ರೀಯವಾದಿ' ಪಕ್ಷವೆಂದು ಸ್ವಯಂ ಘೋಷಿಸುತ್ತಿರುವ ಪಕ್ಷದಲ್ಲಿ ಜನರಿಗೆ ತೋರಿಸಲಿಕ್ಕೆ ಕೆಲವೇ ಕೆಲವು ಸ್ವಾತಂತ್ರ್ಯ ಹೋರಾಟಗಾರರು ಇರುವುದು ಕಸಿವಿಸಿಯ ಸಂಗತಿಯೇ ? ಹೀಗಾಗಿ, ರಾಷ್ಟ್ರೀಯವಾದಿ ಮಾದರಿ ವ್ಯಕ್ತಿಗಳನ್ನು ಗುರುತಿಸುವ ಹತಾಶ ಯತ್ನದಲ್ಲಿ ಸಾವರ್ಕರ್ ಅವರನ್ನು ಆ ಪಡಿಯಚ್ಚಿಗೆ ತುರುಕುವ ಪ್ರಯತ್ನಗಳು ನಡೆದಿವೆ.

ಮಹಾತ್ಮಾ ಗಾಂಧಿ ಅವರ ಕೊಲೆಯಿಂದ ರಕ್ತಸಿಕ್ತವಾದ ಕೈಗಳುಳ್ಳ ವ್ಯಕ್ತಿಗಳಲ್ಲಿ ಓರ್ವರು ಎಂಬುದಾಗಿ ಬಣ್ಣಿಸದೆ, ಅವರ ಕೋಮುವಾದಕ್ಕೆ ಪರದೆ ಎಳೆದು ಸಾವರ್ಕರ್ ಅವರನ್ನು ಕ್ರಾಂತಿವೀರ, ಅಂಡಮಾನ್ ಕ್ರಾಂತಿಕಾರಿ ಎಂದೆಲ್ಲ ಸ್ಮರಿಸಿಕೊಳ್ಳಲಾಗುತ್ತಿದೆ. ಅಂಡಮಾನ್‌ನಲ್ಲಿದ್ದಾಗ ಕ್ಷಮಿಸಿರೆಂದು ಪದೇ ಪದೇ ಬೇಡಿಕೊಂಡ ಸಾವರ್ಕರ್, ಕ್ರಾಂತಿಕಾರಿಗಳು ನಾಚಿ ತಲೆತಗ್ಗಿಸುವಂತೆ ಮಾಡಿದ್ದಾರೆ; ಸೆರೆಮನೆಯಿಂದ ಬಿಡುಗಡೆಗೊಂಡ ಬಳಿಕ ಅವರೆಂದೂ ಯಾವುದೇ ರಾಷ್ಟ್ರೀಯ ಚಟುವಟಿಕೆಯಲ್ಲಿ ಭಾಗವಹಿಸಲಿಲ್ಲ ಎಂಬುದು ಮರೆತೇಹೋಗಿದೆ.



ಕೋಮುವಾದಿ ಸಿದ್ಧಾಂತ ಮತ್ತು ಆಚರಣೆಗೆ ಸರಿಹೊಂದುವ ದೇಶದ ಗತಕಾಲದ ಹಲವು ಅಂಶಗಳನ್ನು ಪುನರುಜ್ಜೀವಿಸಲಾಗುತ್ತಿದೆ, ತಿರುಚಲಾಗುತ್ತಿದೆ ಮತ್ತು ಪುನರ್ ವಿನ್ಯಾಸಗೊಳಿಸಲಾಗುತ್ತಿದೆ. ಇದು ನಮ್ಮ ಮುಂದಿರುವ ವಾಸ್ತವ. ಗಾಂಧೀಜಿ 'ದೇಶದ್ರೋಹಿ' ಯಾಗುತ್ತಾರೆ; ಗೋಡ್ಸೆ 'ರಾಷ್ಟ್ರವೀರ'ನಾಗುತ್ತಾನೆ. ಗಾಂಧೀಜಿ ಅವರ 'ಶಹಾದತ್' (ಹುತಾತ್ಮಗಿರಿ) ನಮ್ಮ ಇತಿಹಾಸದ ಕೋಮುವಾದಿ ಮರು ಬರವಣಿಗೆಯಲ್ಲಿ 'ಅಸುರವಧೆ' ಯಾಗಿ ಮಾರ್ಪಡುತ್ತದೆ. ಗಾಂಧೀಜಿ ಅವರ 'ಸ್ವದೇಶಿ' ರಾಷ್ಟ್ರೀಯ ವಾದವನ್ನು ಮತ್ತು 'ರಾಮರಾಜ್ಯ'ದ ದರ್ಶನವನ್ನು ತಮಗೆ ಸೂಕ್ತಕಂಡಂತೆ ಹೊಂದಿಸಿಕೊಳ್ಳುವ ಮತ್ತು ತನ್ಮೂಲಕ ಅವನ್ನು ಅಪಹಾಸ್ಯಮಾಡುವ ಸಂದರ್ಭದಲ್ಲಿ ಇದನ್ನೆಲ್ಲ ಮಾಡಲಾಗುತ್ತಿದೆ.

ತಲೆಕೆಳಗುಮಾಡುವ ಪ್ರಕ್ರಿಯೆ ಪೂರ್ಣಗೊಂಡಿದೆ. ಅದನ್ನು ಪ್ರಶ್ನಿಸಬೇಕಾಗಿದೆ.

* * *

ಅಡಿ ಟಿಪ್ಪಣಿಗಳನ್ನು ಮತ್ತು ಕೆಲವೊಂದು ಉದ್ಧೃತಗಳನ್ನು ಕೈಬಿಡಲಾಗಿದೆ.

– ಅನುವಾದಕ.

ಆಧಾರ : *"The Long Shadow of Gandhiji's Assassination" – (P. 47-75) – from the book "RSS, School Texts and the Murder of Mahatma Gandhi - The Hindu Communal Project"*
*by Aditya Mukherjee*
*Mridula Mukherjee*
*Sucheta Mahajan*
*Sage Publications Pvt. Ltd. 2008, New Delhi*

**ಡಾ|| ಮಹಾಬಲೇಶ್ವರ ರಾವ್**
ಪ್ರಾಚಾರ್ಯರು, ಡಾ|| ಟಿ.ಎಂ.ಎ. ಪೈ ಶಿಕ್ಷಣ ಕಾಲೇಜು, ಉಡುಪಿ - ೫೭೬ ೧೦೨

"...ವರ್ಷಕ್ಕೊಮ್ಮೆ ತಪ್ಪದೆ ಅಂಬೇಡ್ಕರ್ ಜಯಂತಿ ಆಚರಿಸ್ತೇವೆ. ಸಮಾಜ ಸುಧಾರಣೆಗಾಗಿ ಬಡಬಡಿಸ್ತೇವೆ. ಆದರೂ ಏನು ಪ್ರಯೋಜನ! ಅಸ್ಪೃಶ್ಯತೆ-ಶೋಷಣೆಗಳಂತೂ ಕಡಿಮೆಯಾಗುವುದಿಲ್ಲ. ಮುಖ್ಯವಾಗಿ ರಾಜಕಾರಣಿಗಳೂ ಮಠಾಧಿಪತಿಗಳೂ ಗ್ರಾಮೀಣ ಪ್ರಮುಖರೂ ಮೊದಲು ಪ್ರಜ್ಞಾವಂತರಾಗಬೇಕು. ಹಾಗೆಯೇ ಸನಾತನ-ಸಂಪ್ರದಾಯಗಳಿಗೆ ಸಂಬಂಧಿಸಿದ ಆಚಾರ-ವಿಚಾರಗಳೂ ಬದಲಾಗಬೇಕು. ಸುಧಾರಣೆಯೆಂಬುದು ಕೇವಲ ಬಾಯಿಮಾತಿನ ಆದರ್ಶವಾಗಬಾರದು; ಆಕರ್ಷಣೀಯ ಬೂಟಾಟಿಕೆಯೂ ಆಗಬಾರದು. ಮೊದಲು ಇಂಥ ಗ್ರಾಮೀಣ ಪ್ರದೇಶಗಳಲ್ಲಿ ಅರಿವಿನ ಬೆಳಕು ಮೂಡಬೇಕು. ಒಟ್ಟಾರೆ ಅಂಬೇಡ್ಕರ್ ಅವರ ಆಶಯ ಈಡೇರುವವರೆಗೂ ಸಮಾನತೆ ಎಂಬುದು ಸಾಧ್ಯವಾಗುವುದಿಲ್ಲ..." ಮುಖ್ಯ ಅತಿಥಿ ಸ್ಥಾನದ ನನ್ನ ಮಾತುಗಳನ್ನು ಮುಗಿಸಿದೆ.

ಅಧ್ಯಕ್ಷೀಯ ಭಾಷಣ ಮಾನ್ಯ ಶಂಕರೇಗೌಡರಿಂದ: "...ಮುಖ್ಯ ಅತಿಥಿಗಳ ಅಭಿಪ್ರಾಯ ಸರಿಯಾಗಿದೆ. ಅದು ಅವರ ವೈಯಕ್ತಿಕ ಅನುಭವದ ಪ್ರತಿಧ್ವನಿಯೂ ಹೌದು! ಸನಾತನ-ಸಂಪ್ರದಾಯದ ಸ್ವರೂಪಗಳೂ ಬದಲಾಗಬೇಕು. ಸಾಮಾಜಿಕ ಸುಧಾರಣೆಯೆಂಬುದು ಕೇವಲ ಬಾಯಿಮಾತಿಗೇ ಸೀಮಿತವಾಗಬಾರದು. ತಾವು ಮೇಲು ಜಾತಿ ಅಂದುಕೊಳ್ಳುವವರು ಆತ್ಮವಿಮರ್ಶೆ ಮಾಡಿಕೊಳ್ಳಬೇಕು; ಕಾಲಕ್ಕೆ ತಕ್ಕಂತೆ ನಡೆ ನುಡಿಯಲ್ಲೂ ಬದಲಾಗಬೇಕು. ಹಾಗೆಯೇ ಶೋಷಿತರೂ ಕೂಡ ಕೀಳರಿಮೆಯನ್ನು ತೊರೆದು ಮುಖ್ಯವಾಹಿನಿಯೊಂದಿಗೆ ಹೆಜ್ಜೆ ಹಾಕಬೇಕು..."

ಸಭಿಕರಲ್ಲಿ ಪ್ರಚಂಡ ಕರತಾಡನ!

ಅಂಬೇಡ್ಕರ್ ಜಯಂತಿ ಕಾರ್ಯಕ್ರಮ ಮುಗಿಯಿತು. ಪಂಚಾಯಿತಿ ಸಭಾಂಗಣದಲ್ಲಿ ಕಿಕ್ಕಿರಿದಿದ್ದ ಜನ ಚದುರಲಾರಂಭಿಸಿದರು. ಕಾರ್ಯಕ್ರಮವನ್ನು ಅಚ್ಚುಕಟ್ಟಾಗಿ ನಿರ್ವಹಿಸಿದ ದಲಿತ ಸಂಘದ ದುರುಗೇಶಿ ನನ್ನ ಬಳಿಗೆ ಬಂದು ದನಿಯೆತ್ತಿದ: "ಸಾರ್, ಎಲ್ಲರೂ ಸಮಯ ಸಂದರ್ಭಕ್ಕೆ ತಕ್ಕಂತೆ ವೇದಿಕೆಯ ಮೇಲೆ ಮುತ್ತು ಸುರಿಸಿ ಚಪ್ಪಾಳೆ ಗಿಟ್ಟಿಸುವವರೆ. ಅಸ್ಪೃಶ್ಯತೆ ಜಾತಿಭೇದದ ವಿರುದ್ಧ ಹೋರಾಡುವ ಪ್ರಾಮಾಣಿಕ ಕಾಳಜಿ ಯಾರಿಗಿದೆ ಸಾರ್! ಶಂಕ್ರೇಗೌಡ್ರೂ ದೊಡ್ಡದಾಗಿ ಭಾಷಣ ಬಿಗಿತಾರಲ್ಲ... ತಮ್ಮ ಬದುಕಿನಲ್ಲಿ ಪ್ರಾಕ್ಟಿಕಲ್ಲಾಗಿ ಏನಾದ್ರೂ ಸಾಧಿಸಿ ತೋರ್ಸೋದು ಅವರಿಂದ ಸಾಧ್ಯಾನಾ ಸಾರ್! ಎಲ್ಲಾ ಬೂಟಾಟಿಕೆ; ಸೋಗಲಾಡಿತನ; ಸ್ಟಂಟ್...!" ಮನದಲ್ಲಿದ್ದುದೆಲ್ಲಾ ನುಡಿ ರೂಪದಲ್ಲಿ ಹೊರಬಿದ್ದಿತು! ಇದೆಲ್ಲಾ ಸನಿಹದಲ್ಲೇ ಯಾರೊಂದಿಗೋ ಮಾತನಾಡುತ್ತಿದ್ದ ಶಂಕರೇಗೌಡರಿಗೆ ಸ್ಪಷ್ಟವಾಗಿ ಕೇಳಿಸಿರಬಹುದು. ಅವರು ತೀಕ್ಷ್ಣವಾಗಿ ನಮ್ಮನ್ನು

ಈ ಊರಿನಲ್ಲಿ ಕಾರ-ಮಂಡಕ್ಕಿ-ಕಾಫಿ-ಟೀ ಹೋಟಲ್ ಮನೆಗಳಿವೆಯೇ ವಿನಾ ಸ್ವಲ್ಪ ಪರವಾಯಿಲ್ಲ ಎಂಬಂಥ ಊಟ-ಉಪಾಹಾರದ ಹೋಟಲ್ ಕಾಣಲಿಲ್ಲ. ಆದ್ದರಿಂದ ದಿನದ ಎರಡು-ಮೂರು ಹೊತ್ತುಗಳ ಊಟ-ಉಪಾಹಾರಕ್ಕೆ ಅಕ್ಕಿ, ಅವಲಕ್ಕಿ ಹಾಗೂ ರವೆಯನ್ನೇ ಅವಲಂಬಿಸಬೇಕಾಯಿತು. ಒಮ್ಮೊಮ್ಮೆ ಗೌಡರ ಮನೆಯಿಂದ ಬೇಡ ಬೇಡವೆಂದರೂ ಊಟ-ತಿಂಡಿ-ತಿನಿಸುಗಳು ಹಾಗೂ ಸಾಂಬಾರ್-ಮೊಸರು-ಮಜ್ಜಿಗೆ ಇತ್ಯಾದಿ ಬರಲಾರಂಭಿಸಿದವು! ಹೀಗಾಗಿ ಹಬ್ಬ ಹಾಗೂ ವಿಶೇಷ ದಿನಗಳಲ್ಲಿ ನನಗೂ ಹಬ್ಬದ ವಿಶೇಷ ಔತಣವೇ! ಎಂದಿನಂತೆ ಒಮ್ಮೆ ತುಂಬಿದ ತಟ್ಟೆ-ಬಟ್ಟಲುಗಳನ್ನು ತಂದ ಆಳಿನ ಎದುರು 'ಗೌಡರ ಮನೆಯ ಈ ಋಣಾನ ತೀರ್ಸೋದು ಯಾವಾಗ?!' ಅಂದುಕೊಂಡೆ. ತಕ್ಷಣವೇ ಅವನು "ಇಷ್ಟರಲ್ಲೇ ತೀರಿದರೂ ತೀರಬೌದು ಬಿಡ್ರಿ ಸಾ!" ಎನ್ನುವುದೆ!

ಎಸ್. ಆರ್. ಗುರುನಾಥ್

# ಎಂಟನೆಯ ಅದ್ಭುತ!



ನೋಡಿ, ಅರ್ಥಪೂರ್ಣವಾಗಿ ಮುಗುಳ್ನಕ್ಕರು! ದುರುಗೇಶಿ ಸಿಕ್ಕಿಬಿದ್ದ ಕಳ್ಳನಂತಾದ! 'ಛೆ ಛೆ! ಹಿಂದೂ ಮುಂದೂ ನೋಡಲಿಲ್ಲವಲ್ಲ!' ಎಂಬಂತೆ ಕೈ ಕೈ ಹಿಸುಕಿಕೊಂಡ. ನನ್ನದೂ ಅದೇ ಸ್ಥಿತಿಯೇ!

ಶಂಕರೇಗೌಡರು ಆಗರ್ಭ ಶ್ರೀಮಂತರಾದರೂ ಯಾವುದೇ ಬಗೆಯ ಹಮ್ಮುಬಿಮ್ಮು ಇಲ್ಲದವರು! ಬಿ.ಎ. ಪದವೀಧರರೂ ಹೌದು. ವಂಶಪಾರಂಪರ್ಯವಾಗಿ ಬಂದ ಗೌಡಿಕೆ ಹಾಗೂ ಬಹುಮತದಿಂದ ದೊರಕಿದ ಗ್ರಾಮಪಂಚಾಯಿತಿ ಚೇರ್‌ಮನ್ ಸ್ಥಾನ. ಸಹಜವಾಗಿಯೇ ಇವರ ಆದೇಶ-ಆಶಯಗಳಿಲ್ಲದೆ ಊರಿನಲ್ಲಿ ಯಾವುದೇ ಸಾಮಾಜಿಕ-ಸಾಂಪ್ರದಾಯಿಕ-ಆಡಳಿತಾತ್ಮಕ ಕಾರ್ಯಗಳು ನಡೆಯುವುದಿಲ್ಲ. ಅಂದಹಾಗೆ ಇವರ ದರ್ಬಾರಿನಲ್ಲಿ ಕುರಿ ಕೋಣಗಳ ಬಲಿ, ಗಾವು, ಸರಗ ಮುಂತಾದವುಗಳು ನಿಂತುಹೋದವು! ಕೆಳಗೇರಿಯ ಜನರಿಗೆ ಊರಿನ ಎಲ್ಲಾ ದೇವಾಲಯಗಳಿಗೂ ಪ್ರವೇಶಾವಕಾಶ ದೊರಕಿತು! ಚಹಾದ ಅಂಗಡಿಗಳಲ್ಲಿದ್ದ ಪ್ರತ್ಯೇಕ ಕಪ್ಪುಗಳೂ ಕ್ಷೌರಿಕರ ಬಳಿಯ ನಿಷೇಧವೂ ತೆಗೆದು ಹಾಕಲ್ಪಟ್ಟಿತು! ಸರ್ಕಾರಿ ಯೋಜನೆಗಳ ಪ್ರಕಾರ ಕೆಳಗೇರಿಯಲ್ಲೂ ಸರಿಯಾದ ರಸ್ತೆ, ಚರಂಡಿ, ಶೌಚಾಲಯ, ನೀರಿನ ವ್ಯವಸ್ಥೆ, ವಿದ್ಯುದ್ದೀಪಗಳ ಸಂಪರ್ಕ ಮುಂತಾದ ಅಭಿವೃದ್ಧಿ ಕಾರ್ಯಗಳು ಪೂರ್ಣಗೊಂಡವು. ಜಾತಿ-ಜಾತಿಗಳ ನಡುವೆ ಯಾವುದೇ ಬಗೆಯ ವೈಷಮ್ಯಗಳು ತಲೆದೋರಲಿಲ್ಲ. ಚಮ್ಮಾರ ಮಾರಯ್ಯನಂಥವರಿಗೂ ಕೂಡ ಊರಿನ ಸಾಮೂಹಿಕ ಕೆಲಸ-ಕಾರ್ಯಗಳಲ್ಲಿ ದನಿಯೆತ್ತುವ ಹಾಗೂ ಅಭಿಪ್ರಾಯ ವ್ಯಕ್ತಪಡಿಸುವ ಅವಕಾಶ ದೊರಕಿತು! ದುರುಗೇಶಿಯಂಥ ಯುವಕರಿಗೂ ಉತ್ತಮರ ಪಡಸಾಲೆಯ ಕುರ್ಚಿಗಳಲ್ಲಿ ಕುಳಿತು ಕಾಲು ಅಲ್ಲಾಡಿಸುವಂಥ ಧೈರ್ಯ ಮೂಡಿತು! ಇತ್ತೀಚೆಗೆ ಪಂಚಾಯಿತಿ ಸಭಾಂಗಣದಲ್ಲಿ ದಲಿತ ಸಂಘಗಳ ಸಭೆ ಸಮಾರಂಭಗಳು ನಿರಾತಂಕವಾಗಿ ನಡೆಯುವಂತಾಯಿತು! ಇತ್ತೀಚೆಗೆ ಶಂಕರೇಗೌಡರ ಮುಂದಾಳತ್ವದಲ್ಲಿ ಅಂಬೇಡ್ಕರ್ ಹಾಗೂ ಜಗಜೀವನರಾಮ್ ಅವರಿಗೆ ಸಂಬಂಧಿಸಿದ ಕಾರ್ಯಕ್ರಮಗಳು ಅರ್ಥಪೂರ್ಣವಾಗಿ ಆಚರಿಸಲ್ಪಡುತ್ತಿವೆ! ನಾನು ಈ ಊರಿಗೆ ಬಂದ ಸುಮಾರು ಆರು ತಿಂಗಳಲ್ಲಿ ಇಂಥ ಮೂರ್ನಾಲ್ಕು ಸಮಾರಂಭಗಳಲ್ಲಿ ಭಾಗವಹಿಸಿದ್ದುಂಟು! ಅಂದಹಾಗೆ ಶಂಕರೇಗೌಡರೆಂದರೆ ಸುತ್ತಮುತ್ತಲಿಗೇ ಗೌರವ-ಅಭಿಮಾನ. ಆದರೂ ಗ್ರಾಮಸ್ಥರಲ್ಲಿ ಕೆಲವರಿಗೆ ಇವರ ಬಗ್ಗೆ ಒಂದು ಬಗೆಯ ಅಸಮಾಧಾನ! ಏಕೆಂದರೆ ತಮ್ಮ ಹೊಲ-ತೋಟಗಳಲ್ಲಿ ಕೆಲಸ ಮಾಡುವ ಕೂಲಿಕಾರರಿಗೆ ಸುತ್ತಮುತ್ತಲಿಗೇ ಅತಿಹೆಚ್ಚು ಎಂಬಷ್ಟು ಕೂಲಿಹಣ ನೀಡುವುದು! ಹಾಗೂ ಕೆಲಸದ ವೇಳೆಯಲ್ಲಿ ಅವರಿಗೆಲ್ಲಾ ಹೊಟ್ಟೆ ತುಂಬ ಊಟ ಹಾಕುವುದು! ಒಟ್ಟಾರೆ ಹಲವರ ದೃಷ್ಟಿಯಲ್ಲಿ ಶಂಕರೇಗೌಡರೆಂದರೆ ದೇವರ ಸಮಾನ! 'ಇಂಥವರ ಬಗ್ಗೆ ಹಿಂದೂ ಮುಂದೂ ನೋಡದೆ ಮನದಲ್ಲಿದ್ದುದನ್ನೆಲ್ಲಾ ಆಡಿಬಿಟ್ಟನಲ್ಲ ದುರುಗೇಶಿ! ಅದೂ ನನ್ನೆದುರಲ್ಲಿ! ಅವರು ನನ್ನ ಬಗ್ಗೆಯೂ ಏನೆಂದು ಕೊಂಡರೋ' ಎಂಬಂಥ ಅಳುಕು ನನ್ನಲ್ಲಿ ಹುಟ್ಟಿಕೊಂಡಿತು!

ಮಾರನೆಯ ದಿನ ಬೆಳಿಗ್ಗೆ ಶಂಕರೇಗೌಡರಿಗೆ ಮುಖ ತೋರಿಸಲೂ ಅಳುಕು, ಒಂದು ಬಗೆಯ ಅಂಜಿಕೆ! ಆದ್ದರಿಂದ ಕಳ್ಳನಂತೆ ಮುಚ್ಚುಮರೆಯಾಗಿ ಓಡಾಡಬೇಕಾಯಿತು!

ಸಂಜೆ ಎಂದಿನಂತೆ ನಾನು ರೂಮಿಗೆ ಏರಿದ್ದೇ ತಡ ಮಾದೇವಿ ಹಾಗೂ ಕಾವೇರಿ ಮೆಟ್ಟಿಲೇರಿ ಬಂದು, ಬಾಗಿಲಲ್ಲಿ ನಿಂತು ''ಸ್ವೀಟ್ ತಗೋಳಿ ಸಾರ್'' ಎನ್ನುತ್ತಾ ಮೈಸೂರು ಪಾಕ್ ಹಾಗೂ ಮಿಠಾಯಿ ಬಾಕ್ಸನ್ನು ನನ್ನ ಕೈಗಿತ್ತರು. ಇವತ್ತು ಪ್ರಕಟವಾದ ದ್ವಿತೀಯ ಪಿಯುಸಿ ಪರೀಕ್ಷೆ ಫಲಿತಾಂಶದಲ್ಲಿ ಪಾಸಾಗಿದ್ದಾರೆ! ಅದಕ್ಕಾಗಿ ಈ ಸಡಗರ-ಸಂಭ್ರಮ! ''ಮುಂದೇನು ಓದಬೇಕೂಂತಿದೀರಿ ?'' ಎಂದು ಪ್ರಶ್ನಿಸಿದೆ. ಮುಂದೆ ನಿಂತಿದ್ದ ಮಾದೇವಿ ನಿಸ್ತೇಜಿತಳಾಗಿ ''ಸಾರ್, ನಮ್ಮಣ್ಣ ನಮ್ಮಪ್ಪ ಮುಂದುಕ್ಕೋದಾಕಾಗಲ್ಲ ಯಾವ್ದಾದ್ರೂ ಕೆಲ್ಸಾನೋ ಟ್ರೈನಿಂಗೋ ನೋಡ್ಕೊ ಅಂದರು ಸಾರ್...'' ಎನ್ನುತ್ತಾ ನಿಟ್ಟುಸಿರುಬಿಟ್ಟಳು! ಚಮ್ಮಾರಿಕೆಯಿಂದಲೇ ಜೀವನ ಸಾಗಿಸುತ್ತಿರುವ ಮಾರಪ್ಪ ಇವಳನ್ನು ಇಲ್ಲಿಯವರೆಗೆ ಓದಿಸಿದ್ದೇ ಒಂದು ಹರಸಾಹಸ! ರಿಯಾಯಿತಿ, ಮೀಸಲಾತಿ, ಸವಲತ್ತುಗಳಿದ್ದರೂ ಸಣ್ಣಪುಟ್ಟ ಖರ್ಚುವೆಚ್ಚಗಳನ್ನೂ ನಿಭಾಯಿಸುವುದು ಆತನಿಗೆ ದುಸ್ತರವೇ! ಹೀಗಾಗಿ ಪಿಯುಸಿ ಪಾಸಾಗಿರುವ ಮಗ ದುರುಗೇಶಿಯನ್ನೂ ಮುಂದಕ್ಕೆ ಓದಿಸುವುದು ಸಾಧ್ಯವಾಗಿಲ್ಲ.

ಕಾವೇರಿಯನ್ನು ಕುರಿತು ''ನಿನ್ನ ವಿಷಯ ?'' ಎಂದೆ. ಏಕೋ ಮಾದೇವಿಯ ಹಿಂದೆಯೇ ಅವಿತುಕೊಂಡಂತೆ ತಲೆತಗ್ಗಿಸಿಕೊಂಡು ನಿಂತಿದ್ದ ಕಾವೇರಿ ಮತ್ತಷ್ಟು ನಾಚಿಕೊಂಡು, ಹಿಂತಿರುಗಿ ಸರಸರನೆ ಮೆಟ್ಟಿಲಿಳಿಯಲಾರಂಭಿಸಿದಳು! ''ಹೇಳೋಕೆ ಅವಳಿಗೆ ನಾಚ್ಕೆ ಸಾರ್...'' ಎನ್ನುತ್ತಾ ಮಾದೇವಿಯೂ ಹಿಂದಿರುಗಿದಳು!

ನಾನು ಈ ರೂಮಿಗೆ ಸೇರಿಕೊಳ್ಳುವಾಗ ಮನೆಯ ಮಾಲೀಕರಾದ ಶಂಕರೇಗೌಡರನ್ನು ಕುರಿತು ಬಾಡಿಗೆ ಎಷ್ಟೆಂಬುದರ ಬಗ್ಗೆ ವಿಚಾರಿಸಿದಾಗ ''ನಾನಿದನ್ನ ಬಾಡಿಗೆಗೆ ಕೊಡ್ತಾಯಿಲ್ಲ'' ಎಂದುಬಿಟ್ಟರು! ''ನೀವು ಬಾಡಿಗೆ ನಿಗದಿ ಮಾಡ್ದೇಯಿದ್ದರೆ ನಾನಿಲ್ಲಿ ನಿಸ್ಸಂಕೋಚವಾಗಿರೋದಕ್ಕೆ ಹೇಗೆ ಸಾಧ್ಯ ?!'' ಎಂಬ ನನ್ನ ಮಾತಿಗೆ ಅವರು ''ಅರ್ಥವಾಯ್ತು... ನೀವು ಹೇಗೂ ಮ್ಯಾಥ್ಸ್ ಲೆಕ್ಚರರ್. ಸೆಕೆಂಡಿಯರ್ ಪಿಯುಸಿಯ ಮ್ಯಾಥ್ಸ್‌ನಲ್ಲಿ ನಾಲ್ಕು ಬಾರಿ ಫೇಲಾಗಿ ಐದನೇ ಬಾರಿ ಪರೀಕ್ಷೆಗೆ ಕೂತಿರೂ ನನ್ನ ಮಗಳಿಗೆ ಪಾಠ ಹೇಳಿಬಿಡಿ ಸಾಕು. ಅದನ್ನೇ ಬಾಡಿಗೆ ಅಂದ್ಕೊಳ್ತೀನಿ...'' ಎಂದರು. ಮುಂದೇನು ಮಾತಾಡಬೇಕೆಂಬುದೇ ನನಗೆ ತಿಳಿಯಲಿಲ್ಲ.

ಸರಿ, ಅವರ ಮಗಳು ಕಾವೇರಿಗೆ ಪಾಠ ಮಾಡುವುದು ಇಷ್ಟು ದೊಡ್ಡ ಮನೆಯ ಯಾವ ಸ್ಥಳದಲ್ಲಿ ಎಂಬುದೇ ನನಗೊಂದು ಸಮಸ್ಯೆಯಾಯಿತು. ನಾನಿರುವ ರೂಮಿಗೇ ಅವಳು ಬರುವುದು ಬೇಡ ಅಂದುಕೊಂಡು, ಕಡೆಗೆ ಪಡಸಾಲೆಯಲ್ಲೇ ಸರಿ ಎಂದು ನಿರ್ಧರಿಸಿದೆ. ಅಂತೆಯೇ ಅಲ್ಲಿ ಮೇಜು ಕುರ್ಚಿಗಳ ವ್ಯವಸ್ಥೆಯಾಯಿತು. ಪಾಠ ಆರಂಭವಾದ ಕೆಲವೇ ದಿನಗಳಲ್ಲಿ ಕಾವೇರಿಯ ಗೆಳತಿ ಚಮ್ಮಾರ ಮಾರಯ್ಯನ ಮಗಳು ಮಹಾದೇವಿ ''ಪಾಠಕ್ಕೆ ನಾನೂ ಬರ್ಲಾ ಸಾರ್ ?'' ಎಂದು ಕೇಳಿದಳು. ''ಗೌಡರು ಪರ್ಮಿಷನ್ ಕೊಟ್ರೆ ನಂದೇನೂ ಅಭ್ಯಂತರ ಇಲ್ಲ'' ಎಂದೆ. ಅಂತೆಯೇ ಆ ಹುಡುಗಿ ಶಂಕರೇಗೌಡರಲ್ಲಿ ವಿನಂತಿಸಿಕೊಂಡಾಗ ''ಆಗಲಿ ಕಂದಾ, ನನ್ನ ಮಗಳೊಂದಿಗೆ ಪಾಠ ಹೇಳಿಸಿಕೋ, ನೋ ಪ್ರಾಬ್ಲಮ್'' ಎಂದರಂತೆ! ಮಹಾದೇವಿ ಹಾಗೂ ಕಾವೇರಿ ಪ್ರೈಮರಿ ಸ್ಕೂಲಿನಿಂದಲೂ ಸಹಪಾಠಿಗಳು. ಪಿಯುಸಿಯಲ್ಲಿ ಒಂದೇ ತರಹ ಫೇಲಾದವರು!

ಇಬ್ಬರೂ ಫೇಲಾಗಲು ತರಗತಿಯಲ್ಲಿಯ ಅಸಮರ್ಥ ಬೋಧನೆಯೇ ಕಾರಣ ಎನಿಸಿತು. ನನ್ನ ಸ್ಥಾನದಲ್ಲಿ ಹಿಂದೆ ಇದ್ದ ಮ್ಯಾಥ್ಸ್ ಲೆಕ್ಚರರ್ 'ಸರಿಯಾಗಿ ಪಾಠ ಮಾಡ್ತಿರ್ಲಿಲ್ಲ. ಅದಕ್ಕೇ ಡಲ್ ರಿಸಲ್ಟ್' ಎಂಬುದು ಹಲವರ ಆಕ್ಷೇಪ. ಅಂತಹ ಆಕ್ಷೇಪ-ಅಪವಾದ-ಕೆಟ್ಟ ಹೆಸರು ನನಗೂ ಬಾರದಿರಲಿ ಎಂಬ ಎಚ್ಚರದಿಂದ ನನ್ನ ಕರ್ತವ್ಯವನ್ನು ನಿರ್ವಹಿಸಲಾರಂಭಿಸಿದೆ. ತರಗತಿಯ ವಿದ್ಯಾರ್ಥಿಗಳೂ ಕೂಡ ಶ್ರದ್ಧಾಸಕ್ತಿಯಿಂದ ನನ್ನ ಗಣಿತದತ್ತ ಗಮನಹರಿಸಿದರು. ಕಡೆಗೂ ನನ್ನ ಶ್ರಮ ಸಾರ್ಥಕವಾಯಿತು. ಕಾಲೇಜಿನಲ್ಲಿ ತುಂಬ ಉತ್ತಮ ಫಲಿತಾಂಶ! 'ಕಾಲೇಜು ಹುಟ್ಟಿದಾಗಿನಿಂದಲೂ ಗಣಿತದಲ್ಲಿ ಇಂಥ ಫಲಿತಾಂಶ ಇರಲಿಲ್ಲ' ಎಂಬಂಥ ಮೆಚ್ಚುಗೆಯ ಮಾತುಗಳು! ಕಾವೇರಿ ಹಾಗೂ ಮಹಾದೇವಿಗೆ ಅತಿ ಹೆಚ್ಚು ಅಂಕಗಳು!

ಸಂಜೆ ಮೆಟ್ಟಿಲೇರಿ ಸಂಭ್ರಮದಿಂದ ಬಂದ ಶಂಕರೇಗೌಡರು ''ಗುರು, ಕಾವೇರಿ, ಮಾದೇವಿ ಈ ಜನ್ಮದಲ್ಲೇ ಇಷ್ಟು ಮಾರ್ಕ್ಸ್‌ನಿಂದ ಪಾಸಾಗ್ತಾರೆ ಅಂದ್ಕೊಂಡಿರ್ಲಿಲ್ಲ. ಅವರ ತಲೆಗಳಿಗೆ ಮ್ಯಾಥ್ಸ್ ತುಂಬಿಬಿಟ್ರಿ. ಸದ್ಯ ಪಾಸಾದದ್ದು ಅವರಲ್ಲ, ನೀವು!'' ಎಂದುಬಿಟ್ಟರು! ಅವರ ಅಭಿಮಾನ-ವಿಶ್ವಾಸ-ಸೌಜನ್ಯ-ಗೌರವಗಳಿಂದ ನನಗೆ ಸಾರ್ಥಕತೆಯ ಸಂತೃಪ್ತಿ! ಸಿಂಹದಂಥ ಆಳು; ಹೂವಿನಂಥ ಮನಸು. ಭರ್ಜರಿ ಚಡಾವು, ಹಾಲು ಬಿಳುಪಿನ ಅಂಗಿ-ಪಂಚೆ, ಜರಿ ಅಂಚಿನ ಶಲ್ಯ, ಮುಖದಲ್ಲಿ ನಿಷ್ಕಲ್ಮಷ ಗಾಂಭೀರ್ಯ; ಸರಳ ಸಜ್ಜನಿಕೆಯ ತೇಜಸ್ಸು! ನಾನು ಮಾತಿಗಾಗಿ ''ಮುಂದೇನು ಓದಿಸ್ಬೇಕೂಂತಿದೀರಿ ?'' ಎಂದೆ. ಅವರು ಲೋಕಾಭಿರಾಮವಾಗಿ ಮಾತನಾಡಲಾರಂಭಿಸಿದರು. ''ಅರವತ್ತು ಮಾರ್ಕ್ಸ್‌ನಲ್ಲಿ ಪಾಸಾದ ಹುಡುಗಿಯ ತಂದೆ ಪರಮೇಶ್ವರಪ್ಪ ಎಂಬುವವನು 'ಗೌಡರ ಮಗಳು ಕಾವೇರಿ ಈ ಜನ್ಮದಲ್ಲೇ ನನ್ನ ಮಗಳಂಗೆ ಪಾಸಾಗಲ್ಲ' ಎಂದು ನಕ್ಕಿದ್ದ! ಅವತ್ತಿನಿಂದ ಆ ಮಾತುಗಳು ನನ್ನನ್ನು ಬೈರಿಗೆಯಂತೆ ಕೊರೆಯುತ್ತಿದ್ದವು. ಅಂಬೇಡ್ಕರ್ ಫಂಕ್ಷನ್ ಟೈಮ್‌ನಲ್ಲಿ ದುರುಗೇಶಿ ಆಡಿದ ಮಾತಿನಂತೆ! ಅದಿರಲಿ, ಕಾವೇರಿ ಮಾದೇವಿ ಇಬ್ಬರೂ ತಾವು ದಡ್ಡಿಯರಲ್ಲ ಅನ್ನೋದನ್ನ ಸಾಬೀತು ಮಾಡಿಬಿಟ್ರು! ಸಾಕು, ನನ್ನ ಮಗಳು ಪರಮೇಶ್ವರಪ್ಪನ ಮಗಳಂಗೆ ಸರ್ಕಾರಿ ಕೆಲಸಕ್ಕೆ ಹೋಗ್ಬೇಕಾಗಿಲ್ಲ... ಒಳ್ಳೇ ಗೃಹಿಣಿಯಾದರೆ ಸಾಕು...''

ಎಲ್ಲಾ ತಿಳಿದವರೂ ಲೋಕಾನುಭವಿಗಳೂ ಆದ ಇವರು ಮಗಳ ಮುಂದಿನ ವಿದ್ಯಾಭ್ಯಾಸದತ್ತ ಆಸಕ್ತಿ ವಹಿಸ್ತಿಲ್ವಲ್ಲ ಎಂದು ಅಚ್ಚರಿ ಉಂಟಾಯಿತು! 'ಈಗಾಗಲೇ ಇವರದೇ ಆದ ನಿರ್ಧಾರಕ್ಕೆ ಬಂದುಬಿಟ್ಟಂತಿದೆ. ನಾನು ಬಾಯಿ ಹಾಕುವುದು ಸರಿಯಲ್ಲ' ಅಂದುಕೊಂಡೆ.

ಅಷ್ಟರಲ್ಲಿ ಚಮ್ಮಾರ ಮಾರಯ್ಯನೂ ಆಗಮಿಸಿದ. ''ಇಬ್ಬರಿಗೂ ನಮಸ್ಕಾರ'' ಎಂದ ಆತನನ್ನು ಗೌಡರು ಆದರದಿಂದ ತಮ್ಮ ಪಕ್ಕದ ಕುರ್ಚಿಯಲ್ಲೇ ಕುಳ್ಳಿರಿಸಿಕೊಂಡರು. ಮಾರಯ್ಯ ''ನಿಮ್ಮ ಪಾಠದಿಂದ ಇಬ್ರೂ ಪಾಸಾಗಿಬಿಟ್ರು ಮೇಷ್ಟ್ರೆ. ನನ್ನ ಮಗಳಂತೂ ಪಾಸೇ ಆಗಲ್ಲೇನೋ ಅಂದ್ಕಂಡಿದ್ದೆ. ನಿಮ್ಮ ಶ್ರಮ ದೊಡ್ಡದು ...ಫೀಜು ಕೊಡಾ ಸಗ್ತಿ ನಂಗಿಲ್ಲ. ಬಡವನ ಕಾಣಿಕೆ ತಗಳಿ...'' ಎನ್ನುತ್ತಾ ಪೇಪರಿನಲ್ಲಿ ಸುತ್ತಿ ತಂದಿದ್ದ ಒಂದು ಜೊತೆ ಹೊಸಾ ಚಡಾವು (ಒಂದು ಬಗೆಯ ವಿಶಿಷ್ಟ ಪಾದರಕ್ಷೆ)ಗಳನ್ನು ನನ್ನ ಮುಂದಿರಿಸಿದ. ''ಇದೆಲ್ಲಾ ಯಾಕೆ ?! ಗೌಡರು ಹೇಳಿದ್ದಕ್ಕೋಸ್ಕರ ದಿನದಲ್ಲಿ ಸ್ವಲ್ಪ ಹೊತ್ತು ಲೆಕ್ಕ ಹೇಳಿಕೊಟ್ಟೆ ಅಷ್ಟೇ...'' ಎನ್ನುತ್ತಾ ಅವುಗಳನ್ನು ಆತನ ಮುಂದಕ್ಕೇ ಸರಿಸಿದೆ. ''ಅಯ್ಯಯ್ಯೋ ಅಂಗನ್ಬ್ಯಾಡ್ರಿ ಮೇಷ್ಟ್ರೆ...'' ಎನ್ನುತ್ತಾ ಅವುಗಳನ್ನು ಮತ್ತಷ್ಟು ನನ್ನ ಮುಂದಕ್ಕಿಟ್ಟ! ಇಂಥ ಚಡಾವುಗಳನ್ನು ನಾನೆಲ್ಲೂ ನೋಡಿರಲಿಲ್ಲ! ಗೌಡರು ಅವುಗಳನ್ನು ಕೈಗೆತ್ತಿಕೊಂಡು ತಿರುತಿರುಗಿಸಿ ನೋಡುತ್ತಾ ''ಇವು ಲೆಕ್ಚರರಿಗೆ ಸರಿಯಾಗಲ್ಲ. ಏನಿದ್ದರೂ ನನ್ನಂಥ ಗೌಡಗೇ ಸರಿ...'' ಎನ್ನುತ್ತಾ ಅವುಗಳನ್ನು ಪಕ್ಕಕ್ಕಿಟ್ಟುಕೊಂಡು, ಜೇಬಿಗೆ ಕೈಹಾಕಿ ''ಬ್ಯಾಡ ಬ್ಯಾಡ ಗೌಡ್ರೆ, ಅದೇನೂ ಬ್ಯಾಡ...'' ಎನ್ನುತ್ತಾ ಕೈಗಳನ್ನು ಅಡ್ಡ ಹಿಡಿದರೂ ಬಿಡದೆ, ಸಿಕ್ಕಷ್ಟು ನೋಟುಗಳನ್ನು ತೆಗೆದು, ಮಾರಯ್ಯನ ಅಂಗಿ ಜೇಬಿಗೆ ತುರುಕಿಬಿಟ್ಟರು! ಮಾರಯ್ಯನಂತೂ ದೇಹ-ಮನಸನ್ನು ಹಿಂಡಿಕೊಂಡಂತೆ ಚಡಪಡಿಸಿದ.

ಗೌಡರು ಮಾರಯ್ಯನನ್ನು ಕುರಿತು ''ನಿನ್ನ ಮಗಳಿಗೆ ಮುಂದೇನು ಓದಿಸಬೇಕೂಂತಿದೀಯ ?'' ಎಂದು ಪ್ರಶ್ನಿಸಿದರು. ಮಾರಯ್ಯ ನಿಸ್ತೇಜಿತನಾಗಿ ''ಅವ್ಳ ನರ್ಸು ಟ್ರೈನಿಂಗಿಗೆ ಸೇರ್ಸನ ಅಂತಿದಾನೆ ನನ್ನ ಮಗ ದುರುಗೇಶಿ...'' ಎಂದ. ಗೌಡರು ಚುರುಕಾದರು. ''ನಿನ್ನ ಮಗ ದುರುಗೇಶಿ ನಿನ್ನೆ ಪಂಚಾಯ್ತಿ ಹಾಲ್‌ನಲ್ಲಿ ಎಂಥಾ ಮಾತಾಡ್ತಿದ್ದ ಗೊತ್ತಾ! ಅದು ಅವನೊಬ್ಬನ ಮಾತಲ್ಲ, ಅವನಂಥ ಹಲವರ ಅಭಿಪ್ರಾಯ



ಅಂದ್ಕೊಂಡಿದೀನಿ... ನನ್ನನ್ನ ಯಾರೂ ಸರಿಯಾಗಿ ಅರ್ಥ ಮಾಡ್ಕೊಂಡಿಲ್ವಲ್ಲ...!'' ಅಂದರು ವಿಷಾದನೀಯ ದನಿಯಲ್ಲಿ.

ಅಂತಹ ಸ್ಥಿತಿಯಲ್ಲೂ ಮಾರಯ್ಯ ನನ್ನನ್ನು ನೋಡಿ ಮುಗುಳ್ನಕ್ಕ! ಆ ನಗೆಯಲ್ಲಿ ಯಾವುದೋ ಒಂದು ಮಹತ್ತರವಾದ ಅರ್ಥವಿದ್ದಂತೆ ತೋರಿತು. ಅವನು ಗೌಡರನ್ನು ಕುರಿತು ''ನಿಮ್ಮಗಳು ಕಾವೇರಮ್ಮಗೆ ಮದಿವೆ ಮಾಡ್ಬೇಕಂತಿದೀರಂತೆ! ವರ...?'' ಎಂದ. ನನ್ನ ಕಿವಿಗಳೂ ಚುರುಕಾದವು. ಗೌಡರು ಏನೋ ಲೆಕ್ಕ ಹಾಕಿದವರಂತೆ ''...ಹೇಳ್ತೀನಿ, ನಾಡಿದ್ದು ಹೇಳ್ತೀನಿ'' ಎನ್ನುತ್ತಾ ಚಡಾವುಗಳನ್ನು ಕೈಗೆತ್ತಿಕೊಂಡು ಮೇಲೆದ್ದರು.

ಈಗ ಹೇಳಲಾಗದ್ದು ನಾಡಿದ್ದೇ ಹೇಳುವಂಥದ್ದೇನಿರಬಹುದು ಎಂಬಂಥ ಕುತೂಹಲ. ಇದು ನನಗೆ ಸಂಬಂಧಿಸಿದ ಸಂಗತಿಯಲ್ಲ ಅಂದುಕೊಂಡರೂ ಮನಸ್ಸು ಮಣಿಯಲಿಲ್ಲ. ನನಗೆ ತಿಳಿದ ಹಾಗೆ ಈಗಾಗಲೇ ಕಾವೇರಿಗೆ ಹಲವಾರು ವರಗಳು ಬಂದದ್ದು ಉಂಟು. ಅವರಲ್ಲಿ ಭಾರಿ ಭಾರಿ ಶ್ರೀಮಂತರೂ ಒಳ್ಳೆಯ ಉದ್ಯೋಗಸ್ಥರೂ ''ವರದಕ್ಷಿಣೆ ವರೋಪಚಾರ ಏನೂ ಬೇಡ. ಎಲ್ಲಾ ಖರ್ಚು ವಹಿಸ್ಕೊಂಡು ಮದುವೆ ಮಾಡ್ಕೊಳ್ತೇವೆ'' ಎಂದವರೂ ಇದ್ದರು. ಆದರೂ ಅವರಲ್ಲಿ ಯಾರೂ ಗೌಡರಿಗೆ ಹಿಡಿಸಲಿಲ್ಲ! ತಮ್ಮ ಏಕೈಕ ಮುದ್ದಿನ ಮಗಳಿಗೆ ಎಂತಹ ರಾಜಕುಮಾರನನ್ನು ನೋಡಿದ್ದಾರೋ ನೋಡುತ್ತಿದ್ದಾರೋ! ಅಂತೂ ಕಾವೇರಿಯ ಕೈ ಹಿಡಿಯುವವನು ಪುಣ್ಯವಂತನೇ ಸರಿ. ಯಾವುದೇ ಬಗೆಯ ಅಹಂಕಾರ-ದೊಡ್ಡಸ್ತಿಕೆಗಳಿಲ್ಲದ ಅವಳು ರೂಪದಲ್ಲೂ ಮಹಾಲಕ್ಷ್ಮಿ! ನಾನಂತೂ ಯಾವತ್ತೂ ಚೆಲುವೆ ಎಂಬಂಥ ದೃಷ್ಟಿಯಲ್ಲಿ ಅವಳನ್ನು ನೋಡಿದವನಲ್ಲ. ಅವಳೂ ಕೂಡ ಅಂಕಿ-ಸಂಖ್ಯೆಗಳ ಕಡೆಗೆ ಗಮನ ಕೊಡುತ್ತಿದ್ದಳೇ ವಿನಾ ನನ್ನ ಎದುರು ತಲೆ ಎತ್ತುತ್ತಿರಲಿಲ್ಲ. ಪ್ರತಿಷ್ಠಿತ ಕುಟುಂಬದ ಶ್ರೀಮಂತರ ಏಕೈಕ ಮುದ್ದಿನ ಮಗಳಲ್ಲೂ ಇಂಥ ಸದ್ಗುಣಗಳಿವೆಯಲ್ಲಾ ಎಂಬುದೇ ನನಗೊಂದು ಅಚ್ಚರಿಯ ಸಂಗತಿ.

ಮಧ್ಯಾಹ್ನ ಕಾಲೇಜಿನಲ್ಲಿದ್ದ ನನ್ನ ಬಳಿಗೆ ಬಂದ ಗೌಡರ ಮನೆಯ ಒಬ್ಬ ಆಳು ''ಸಾ, ಗೌಡ್ರು ಎದ್ದೇಟಿಗೆ ಕಾರ್ನಾಗೋದೋರು ಈಟೊತ್ತಾದ್ರೂ ನಾಪತ್ತೆ! ಮೊಬುಲ್ಲೂ ಮನೆಯಾಗೇ ಬಿಟ್ಟೋಗೀದಾರೆ. ಯತ್ಲಾಗೋದ್ರೂ ಮನಿಯಾಗೆ ಯೋಳೇ ಹೋಗಾರು. ಇವತ್ತು ಯಾರಿಗೂ ಏನ್ನೂ ಯೋಳಿಲ್ವಂತೆ. ಅದ್ಕೇ ಮನಿಯಾಗೆ ಎಲ್ಲಾ ತಾರ್‍ಯಾಡ್ತಿದಾರೆ... ನಿಮುಗೇನಾರೆ ಗೊತ್ತಾ?'' ಎಂದ ಗಡಿಬಿಡಿಯ ದನಿಯಲ್ಲಿ! ನಾನು ''ಯಾವುದೋ ಅರ್ಜಂಟ್ ಕೆಲಸಕ್ಕೆ ಹೋಗಿರಬೌದು. ಬರ್ತಾರೆ. ಅದಕ್ಯಾಕೆ ಇಷ್ಟು ಗಾಬರಿ !?'' ಎಂದೆ. ನನಗೂ ಮೊನ್ನೆಯಿಂದ ತಲೆಯಲ್ಲೆಲ್ಲಾ ಗೌಡರಿಗೆ ಸಂಬಂಧಿಸಿದ ಸಂಗತಿಗಳೇ! 'ದುರುಗೇಶಿಯ ಮಾತಿನಿಂದ ಅವರ ಮನಸ್ಸಿನ ಮೇಲೆ ಯಾವ ಪರಿಣಾಮ ಉಂಟಾಗಿರಬಹುದು !? ಕಾವೇರಿಯ ಮದುವೆಯ ಬಗ್ಗೆ ನಾಡಿದ್ದು ಹೇಳುವುದೇನು !? ಇಂತಹ ಕುತೂಹಲದೊಂದಿಗೆ ಇವತ್ತು ಯಾರಿಗೂ ತಿಳಿಸದೆ ಎಲ್ಲಿಗೋ ಹೋಗಿರುವ ವಿಷಯ ನನ್ನನ್ನು ಒಳೊಳಗೇ ಚಡಪಡಿಸುವಂತೆ ಮಾಡಿತು. ತರಗತಿಯ ಬೋರ್ಡಿನ ಮೇಲೆ ಅಂಕಿಗಳು ಅದಲುಬದಲಾದವು ! ಪ್ಲಸ್-ಮೈನಸ್‌ಗಳು ಹಿಂದು-ಮುಂದಾದವು ! ಲೆಕ್ಕ ದಿಕ್ಕು ತಪ್ಪಿತು ! ವಿದ್ಯಾರ್ಥಿಗಳು ಮುಸಿ ಮುಸಿ ನಕ್ಕರು ! ತಡಬಡಿಕೆಯ ಸ್ಥಿತಿ !



ಸಂಜೆಯಾದರೂ ಗೌಡರ ಸುಳಿವಿಲ್ಲ ವಾಯಿತು ! ಮಧ್ಯಾಹ್ನದಿಂದ ಆಳುಗಳೂ ಇತರರೂ ಹೊಲ, ತೋಟ, ಅಕ್ಕಪಕ್ಕದ ಹಳ್ಳಿಗಳಲ್ಲೆಲ್ಲಾ ಪರದಾಡಿದರಂತೆ. ದುರ್ಗಕ್ಕೋ ಚಳ್ಳಕೆರೆಗೋ ಹೋಗಿದ್ದಿದ್ದರೂ ಇಷ್ಟು ಹೊತ್ತಿಗೆ ಹಿಂತಿರುಗಬೇಕಾಗಿತ್ತು; ಫೋನಾದರೂ ಮಾಡಬೇಕಾಗಿತ್ತು. ಅವರಿಗೇನಾದರೂ ತೊಂದರೆ ? ಅನಾನುಕೂಲ ! ಯಾಕೆ ಹೀಗೆ ?! ಮನೆಯ ಆವರಣದಲ್ಲಿ ಜನವೋ ಜನ ! ಯಾವತ್ತೂ ನನ್ನ ಎದುರು ನಿಂತು ಮಾತನಾಡದ ಗೌರಮ್ಮನವರು ''ಸ್ವಲ್ಪ ಫೋನಾದ್ರೂ ಮಾಡಿ'' ಎಂದರು. ಕಾವೇರಿ ಕೊಟ್ಟ ಕೆಲವು ನಂಬರುಗಳಿಗೆ ಫೋನಾಯಿಸಿದೆ. ಏನೂ ಪ್ರಯೋಜನವಾಗಲಿಲ್ಲ. ದುರುಗೇಶಿ ನನ್ನ ಬಳಿಗೆ ಬಂದು ''ಇದೇನೂ ಸಣ್ಣ ವಿಷ್ಯ ಅಲ್ಲಾ ಸಾರ್. ಇಂಗೇ ಒದ ವರ್ಷ ಸಿದ್ವೀರಪ್ಪ ಅನ್ನೋ ಅಡಿಕೆ ತೋಟದ ಸಾವುಕಾರ್ರೂ ಇದ್ಕಿದ್ದಂಗೇ ಕಣ್ಮರೆಯಾಗಿಬಿಟ್ಟ! ಇವತ್ತಿನತಂಕ ಅಯಪ್ಪನ ಪತ್ತೆ ಇಲ್ಲ!'' ಎನ್ನುವುದೆ ! ನನ್ನ ಸನಿಹದಲ್ಲೇ ಇದ್ದ ಮಾರಯ್ಯ ಆಕಾಶದ ಕಡೆಗೆ ಕೈಮುಗಿಯುತ್ತಾ ''ದೇವುರೇ, ಬಗುವಂತ ನಮ್ ಗೌಡ್ರಿಗೆ ಏನೂ ಆಗ್ದಿರ್ಲಪ್ಪ... ಸುಕುವಾಗಿ ಮನಿಗೆ ಬರಂಗೆ ಮಾಡಪ್ಪಾ...'' ಎಂದು ಮುಂತಾಗಿ ಪ್ರಾರ್ಥಿಸಿದ. ಸಮಯ ಹನ್ನೊಂದನ್ನು ಮೀರಲಾರಂಭಿಸಿತು ! ರೂಮಿಗೆ ಏರಿ ಅಕ್ಕಿ ಬೇಯಿಸಿಕೊಳ್ಳಲೂ ಮನಸಾಗಲಿಲ್ಲ. ಗೌರಮ್ಮ ಹಾಗೂ ಕಾವೇರಿ ಚಿಂತಾಕ್ರಾಂತರಾಗಿ ಕುಳಿತುಬಿಟ್ಟಿದ್ದರು. ಅಷ್ಟರಲ್ಲಿ ಇತ್ತಲೇ ಬರುತ್ತಿದ್ದ ವಾಹನವೊಂದರ ಹೆಡ್‌ಲೈಟ್ ಕಾಣಲಾರಂಭಿಸಿತು ! 'ಗೌಡರ ಕಾರು ! ಗೌಡರ ಕಾರು !' ಎಂಬಂಥ ಉದ್ಗಾರಗಳು ! ತಕ್ಷಣ ದುರುಗೇಶಿ ಮಾಯವಾದ ! ಅಂತೂ ಗೌಡರು ಮುಗುಳ್ನಗುತ್ತಾ ಕಾರಿನಿಂದಿಳಿದರು... ಬಿಗುವಿನ ವಾತಾವರಣ ಸಡಿಲವಾಯಿತು. ಕಟ್ಟೆ, ಮೆಟ್ಟಿಲು, ಅಂಗಳದಲ್ಲೆಲ್ಲಾ ಕುಂತು ನಿಂತಿದ್ದವರಲ್ಲಿ ಕೆಲವರು ''...ನಮ್ಗೆಲ್ಲಾ ಎಷ್ಟು ಗಾಬರಿಯಾಗಿತ್ತು ಗೊತ್ತಾ...!'' ಎಂದು ಮುಂತಾಗಿ ಆಕ್ಷೇಪ ವ್ಯಕ್ತಪಡಿಸಿದರು. ಎಲ್ಲರಿಗೂ ಗೌಡರ ಮುಗುಳ್ನಗೆಯೇ ಉತ್ತರ !

ನನ್ನದೂ ಊಟವಾಗಿಲ್ಲ ಎಂಬುದನ್ನು ತಿಳಿದ ಗೌಡರು ''ಬನ್ನಿ ಬನ್ನಿ ...ಗುರು, ನಮ್ಜೊತೆಗೇ ಊಟ ಮಾಡಿ...'' ಎಂದು ಮುಂತಾಗಿ ಒತ್ತಾಯಿಸಿದರು. ಎಷ್ಟು ಪ್ರಯತ್ನಿಸಿದರೂ ತಪ್ಪಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಧರ್ಮಸಂಕಟ ಎಂದರೆ ಇದೇ ಎನಿಸಿತು. ಸಂಕೋಚ, ಮುಜುಗರ ಮುಂತಾದವುಗಳನ್ನೆಲ್ಲಾ ಹತ್ತಿಕ್ಕಿಕೊಳ್ಳಲೆತ್ನಿಸುತ್ತಾ ಅವರೊಂದಿಗೆ ಕುಳಿತುಕೊಳ್ಳಲೇಬೇಕಾಯಿತು. ಊಟದ ಮಧ್ಯೆ ಗೌಡರು ನನ್ನ ಭುಜದ ಮೇಲೆ ಕೈ ಇಟ್ಟು ''ನೀವು ವಿದ್ಯಾವಂತರು, ನಾಗರೀಕತೇನ ಮೈಗೂಡಿಸಿಕೊಂಡಿರೋರು, ವಿಚಾರವಂತರು. ಆದ್ರೂ ಇಂಗೆಲ್ಲಾ ಸಂಕೋಚಪಟ್ಕೊಂಡ್ರೆ ಹೇಗೆ! ಜಾತಿಗೆ ಸಂಬಂಧಿಸಿದ ಕೀಳರಿಮೇನ ಕಿತ್ತು ಬಿಸಾಕಿಬಿಡಿ. ಮನುಷ್ಯರಂದ್ರೆ ಎಲ್ಲರೂ ಒಂದೇ... ನೀವು ನಮ್ಮನೆಯ ರೂಮಿಗೆ ಬಂದು ಸುಮಾರು ಅರ್ಧವರ್ಷವೇ ಆಗಿರಬೌದು. ಆದ್ರೂ ನೀವು ನಮ್ಮನ್ನ ಸರಿಯಾಗಿ ಅರ್ಥಮಾಡ್ಕೊಂಡಿಲ್ಲ... ನಾವಂತೂ ನಿಮ್ಮನ್ನ ಚನ್ನಾಗಿ ಅರ್ಥ ಮಾಡ್ಕೊಂಡಿದ್ದೀವಿ'' ಎಂದರು ! ಊಟಕ್ಕೆ ಬಡಿಸುತ್ತಿದ್ದ ಗೌರಮ್ಮ ಹಾಗೂ ಕಾವೇರಿ ಅವರಲ್ಲೂ ವಿಶ್ವಾಸ, ಅಭಿಮಾನ, ಗೌರವದ ಬೆಳದಿಂಗಳು !

ಕೈ ತೊಳೆದುಕೊಂಡ ಕೂಡಲೇ ಗೌರಮ್ಮ ಪ್ರಶ್ನಿಸಿದರು : ''...ಎಲ್ಲಿಗೆ ಹೋಗಿದ್ರಿ, ಏನ್ಕತೆ...?'' ಗೌಡರು ಕೈ ಒರೆಸಿಕೊಳ್ಳುತ್ತಾ ಹೇಳಿದರು : ''ಗುರು ಅವರ ಊರಿಗೆ ಹೋಗಿದ್ದೆ. ಇವರ ತಂದೆ ತಾಯೀನ ಭೇಟಿಯಾದೆ. ಅವರು ನನ್ನನ್ನು ತುಂಬ ಗೌರವದಿಂದ ನೋಡಿಕೊಂಡರು. ಕಾಫಿ ಕೊಟ್ಟರು; ಊಟಕ್ಕೆ ಬಡಿಸಿದರು; ಹಣ್ಣು ತಾಂಬೂಲ ನೀಡಿದರು. ಅಂತೂ ತುಂಬ ಆದರದಿಂದ ನೋಡಿಕೊಂಡರು ...ಮನೆಯ ಉಸ್ತುವಾರಿಯೆಲ್ಲಾ ಇವರ ಅಣ್ಣನದು. ಇರೋ ಜಮೀನಿನಲ್ಲಿ ಚನ್ನಾಗಿ ಬೆಳೀತಾರೆ. ಊರು ಕೇರಿಯಲ್ಲೆಲ್ಲಾ ಒಳ್ಳೆಯ ಹೆಸರಿದೆ; ಗೌರವವಿದೆ. ಒಟ್ನಲ್ಲಿ ಸಂತೃಪ್ತ ಜೀವನ; ಒಳ್ಳೆಯ ಜನ. ನನಗಂತೂ ತುಂಬಾ ಸಂತೋಷವಾಯ್ತು...''

ಉದ್ಭವವಾದ ಪ್ರಶ್ನೆಗಳು ಬೃಹದಾಕಾರವಾಗಿ ನನ್ನನ್ನು ಕಾಡಲಾರಂಭಿಸಿದವು ! ಇವರು ಯಾರಿಗೂ ತಿಳಿಸದೆ ನಮ್ಮೂರಿಗೆ ಹೋಗಿ, ನಮ್ಮ ಮನೆಯ ವಿಷಯವನ್ನೆಲ್ಲಾ ಕೂಲಂಕಷವಾಗಿ ನೋಡಿ ತಿಳಿದದ್ದೂ ಪರೋಕ್ಷವಾಗಿ ನನ್ನನ್ನೂ ಪರಿಶೀಲಿಸುತ್ತಿರುವುದೂ ಯಾಕೆ ?? ಏಕೋ ಏನೋ ನನ್ನನ್ನೇ ನಾನು ನೋಡಿಕೊಳ್ಳುವಂತಾಯಿತು. ನಾನು ಯಾವ ತರಗತಿಯಲ್ಲೂ ಹಿಂದುಳಿಯದೆ, ಕ್ರೀಡಾಂಗಣದಲ್ಲೂ ಮುಂದಿದ್ದು, ಆಶುಭಾಷಣ ಹಾಗೂ ಚಿತ್ರಕಲೆಯಲ್ಲೂ ಬಹುಮಾನಗಳನ್ನು ಪಡೆದದ್ದುಂಟು.

ಪ್ರಥಮ ದರ್ಜೆಯಲ್ಲಿ ಎಂ.ಎಸ್ಸಿ. ಪದವಿ ಪಡೆದೊಡನೆ ಅತಿಯಾದ ಪ್ರಯತ್ನವಿಲ್ಲದೆ ಉಪನ್ಯಾಸಕ ಹುದ್ದೆ ದೊರಕಿತು. ಆ ಆದೇಶದೊಂದಿಗೆ ಬ್ಯಾಗನ್ನು ಹಿಡಿದು ಈ ಊರಿಗೆ ಹೊರಟು ನಿಂತಾಗ ಅಪ್ಪ, ಅವ್ವ ಹಾಗೂ ಅಣ್ಣ ಕಿವಿಮಾತು ಹೇಳಿದ್ದರು : ''ಅದೇನೂ ಬೆಂಗ್ಳೂರೋ ಮೈಸೂರೋ ಅಲ್ಲ. ಒಂದು ದೊಡ್ಡ ಊರು ಅಷ್ಟೇ. ಜಾತಿಭೇದ ಅನ್ನೋದು ಅಲ್ಲಿಯೂ ಇದ್ದದ್ದೇ. ಅದ್ರಲ್ಲೂ ನೀನು ದಲಿತ ಸಂಘ-ಹೋರಾಟ-ಭಾಷಣ-ಮುಷ್ಕರ ಅಂತ ಓಡಾಡೋನು. ಇನ್ನು ನಿನ್ನ ಕೆಲ್ಸಾ ನೀನು ನೋಡ್ಕಂಡು ಒಳ್ಳೇ ಮೇಷ್ಟ್ರು ಅನ್ನಿಸ್ಕೋಬೇಕು...'' ಅವರ ಕಳಕಳಿ ಸಹಜವೇ. ನಗರದ ನಾಗರಿಕತೆಯಲ್ಲೂ ಜಾತೀಯ ಪಿಶಾಚಿಗಳು ಅವಿತು ಕುಳಿತಿರುವಾಗ ಇನ್ನು ಹಳ್ಳಿಯೂ ಅಲ್ಲ ಪಟ್ಟಣವೂ ಅಲ್ಲ ಎಂಬಂಥ ಹೋಬಳೀ ಕೇಂದ್ರ ಸ್ಥಳವಾದ ಈ ಊರಿನ ವಿಷಯ ಏನೋ ಎಂತೋ ಎಂಬ ಅಳುಕು ನನ್ನನ್ನು ಕಾಡುತ್ತಿದ್ದುದೂ ಉಂಟು ! ಅಂತೂ ಇಂತೂ ಇಲ್ಲಿಯ ಪದವಿಪೂರ್ವ ಕಾಲೇಜಿನ ತೆರವಾದ ಗಣಿತ ಉಪನ್ಯಾಸಕ ಸ್ಥಾನಕ್ಕೆ ಸೇರ್ಪಡೆಯಾಗಿ, ಕೆಳಗೇರಿಯಲ್ಲೊಂದು ರೂಮಿಗಾಗಿ ಪರದಾಡಿದೆ. ಆಗ ಪರಿಚಯವಾದ ದಲಿತ ಸಂಘದ ಕಾರ್ಯಕರ್ತ ದುರುಗೇಶಿ ''ಸಾರ್, ದಲಿತ ಕೇರೀಲಿ ಬಾಡಿಗೆ ರೂಮು ಸಿಗೋದುಂಟಾ ?! ಉತ್ತಮರ ಏರಿಯಾದಲ್ಲೇ ಪ್ರಯತ್ನಿಸಬೇಕು. ಗ್ರಾಮಪಂಚಾಯ್ತಿ ಚೇರ್‌ಮನ್ ಶಂಕ್ರೇಗೌಡರ ಮನೆಯ ಮೇಲೊಂದು ಸಪರೇಟ್ ರೂಮೈತೆ. ಬರ್ರಿ ವಿಚಾರಿಸೋಣ'' ಎನ್ನುತ್ತಾ ನನ್ನನ್ನು ಕರೆದೊಯ್ದು, ಶಂಕರೇಗೌಡರಿಗೆ ಪರಿಚಯಿಸಿ, ವಿಷಯ ತಿಳಿಸಿದ. ನನ್ನ ಬಗ್ಗೆ ಅಗತ್ಯವಾದ ವಿವರಗಳನ್ನು ತಿಳಿದುಕೊಂಡು ಯಾವುದೇ ಅಭ್ಯಂತರವಿಲ್ಲದೆ 'ಒಕೆ' ಎಂದರು !

ಎಲ್ಲಾ ರೀತಿಯಲ್ಲೂ ಅನುಕೂಲಕರವಾದ ರೂಮು. ಸದ್ದುಗದ್ದಲವಿಲ್ಲದ ಪ್ರದೇಶ. ನನ್ನ ಓದು-ಬರಹಗಳಿಗೆ ಯಾವುದೇ ತೊಂದರೆ ಇಲ್ಲ. ಇಂಥ ಊರಿನಲ್ಲಿ ಇಂಥ ರೂಮು ದೊರಕಿದ್ದು ಒಂದು ಭಾಗ್ಯವೇ ಸರಿ ಎನಿಸಿತು. ಆದರೆ ನನ್ನೊಳಗಿನ ದಲಿತನ ಸಂಕೋಚ-ಅಳುಕು-ಅಂಜಿಕೆ ಇತ್ಯಾದಿಗಳು ಸಹಜವಾಗಿಯೇ ನನ್ನನ್ನು ಕಾಡಲಾರಂಭಿಸಿದವು! ಇದನ್ನೆಲ್ಲಾ ಗ್ರಹಿಸಿದ ಗೌಡರು ವಿಶ್ವಾಸಪೂರ್ವಕವಾಗಿ ''ಸಂಕೋಚಪಟ್ಕೋಬೇಡಿ. ನಿಮಗಿಲ್ಲಿ ಯಾವುದೇ ಕಿರಿಕಿರಿಯೂ ಇರೋದಿಲ್ಲ. ಬೀ ಹ್ಯಾಪಿ'' ಎಂದರು! ನನ್ನೊಳಗಿನ ಒತ್ತಡವೊಂದು ದೂರವಾಯಿತು.

ಈ ಊರಿನಲ್ಲಿ ಕಾರ-ಮಂಡಕ್ಕಿ-ಕಾಫಿ-ಟೀ ಹೋಟಲ್ ಮನೆಗಳಿವೆಯೇ ವಿನಾ ಸ್ವಲ್ಪ ಪರವಾಯಿಲ್ಲ ಎಂಬಂಥ ಊಟ-ಉಪಾಹಾರದ ಹೋಟಲ್ ಕಾಣಲಿಲ್ಲ. ಆದ್ದರಿಂದ ದಿನದ ಎರಡು-ಮೂರು ಹೊತ್ತುಗಳ ಊಟ-ಉಪಾಹಾರಕ್ಕೆ ಅಕ್ಕಿ, ಅವಲಕ್ಕಿ ಹಾಗೂ ರವೆಯನ್ನೇ ಅವಲಂಬಿಸಬೇಕಾಯಿತು. ಒಮ್ಮೊಮ್ಮೆ ಗೌಡರ ಮನೆಯಿಂದ ಬೇಡ ಬೇಡವೆಂದರೂ ಊಟ-ತಿಂಡಿ-ತಿನಿಸುಗಳು ಹಾಗೂ ಸಾಂಬಾರ್-ಮೊಸರು-ಮಜ್ಜಿಗೆ ಇತ್ಯಾದಿ ಬರಲಾರಂಭಿಸಿದವು! ಹೀಗಾಗಿ ಹಬ್ಬ ಹಾಗೂ ವಿಶೇಷ ದಿನಗಳಲ್ಲಿ ನನಗೂ ಹಬ್ಬದ ವಿಶೇಷ ಊಟವೇ! ಎಂದಿನಂತೆ ಒಮ್ಮೆ ತುಂಬಿದ ತಟ್ಟೆ-ಬಟ್ಟಲುಗಳನ್ನು ತಂದ ಆಳಿನ ಎದುರು 'ಗೌಡರ ಮನೆಯ ಈ ಋಣಾನ ತೀರ್ಸೋದು ಯಾವಾಗ ?!' ಅಂದುಕೊಂಡೆ. ತಕ್ಷಣವೇ ಅವನು ''ಇಷ್ಟರಲ್ಲೇ ತೀರಿದರೂ ತೀರಬೌದು ಬಿಡ್ರಿ ಸಾ!'' ಎನ್ನುವುದೇ! ಒಟ್ಟಿನಲ್ಲಿ ವೃತ್ತಿಯನ್ನು ಒಳಗೊಂಡಂತೆ ಇಲ್ಲಿಯ ನನ್ನ ಬದುಕು ಆಹ್ಲಾದಕರ! ಸ್ವಂತ ಊರಿನಷ್ಟೇ ಆಪ್ಯಾಯಮಾನ!

ಬೆಳಗ್ಗೆ ಸುಮಾರು ಎಂಟರ ಸಮಯ. ಶಂಕರೇಗೌಡರೂ ಅವರ ಧರ್ಮಪತ್ನಿ ಗೌರಮ್ಮ ರೂಮಿನೊಳಕ್ಕೆ ಬಂದು ಕುಳಿತುಕೊಂಡರು! ಇದ್ದಕ್ಕಿದ್ದಂತೆ ಬಂದುಬಿಟ್ಟರಲ್ಲ!! ನನಗಂತೂ ಗಡಿಬಿಡಿ! ಯಾಕೆ ಹೀಗೆ ಬಂದ್ರಿ ಎಂದು ಕೇಳಲಾಗಲಿಲ್ಲ! ಏನೊಂದೂ ತೋಚದೆ ಒಳೊಳಗೇ ಚಡಪಡಿಸಲಾರಂಭಿಸಿದೆ!

ಅಷ್ಟರಲ್ಲಿ ಗೌಡರು ''ನಾವೊಂದು ವಿಷಯ ತಿಳಿಸ್ಬೇಕೂಂತ ಬಂದಿದೇವೆ... ನಿಮಗೇನನ್ನುಸ್ತೋ ತಿಳೀದು...'' ಎಂದರು! ಒಂದು ನುಡಿಯೂ ತಿದ್ದಿ ತೀಡಿದಂತೆ!

''ಅದೇನು ದಯವಿಟ್ಟು ಹೇಳಿ'' ಎಂದೆ.

ಅವರು ''ನಮ್ಮ ಕಾವೇರೀನ ನಿಮಗೆ ಮದುವೆ ಮಾಡಿಕೊಡಬೇಕು ಅಂದ್ಕೊಂಡಿದೀವಿ...'' ಎಂದುಬಿಟ್ಟರು!!

ಆಗಿನ ನನ್ನ ಅಂತರಂಗದ ಸ್ಥಿತಿ-ಗತಿಯನ್ನು ವಿವರಿಸಲಾಗುವುದಿಲ್ಲ! ಇದೇನು ತಮಾಷೆಯೋ!? ಯಾವುದೋ ರಾದ್ಧಾಂತದ ಆರಂಭಿಕ ವ್ಯಂಗ್ಯವೋ!? ಬೆಪ್ಪಾಗಿ ಅವರನ್ನು ನೋಡಿದೆ. ಆ ಮುಖಗಳಲ್ಲಿ ಅದೇ ವಿಶ್ವಾಸ! ಗೌರವ! ಸೌಜನ್ಯ! ವಿನಂತಿ! ...ಮುಂತಾದವುಗಳಿಗೆ ಸಂಬಂಧಿಸಿದ ನಿಷ್ಕಲ್ಮಷ ಭಾವ!!

''ಏನು!! ಏನು ಹೇಳ್ತಿದೀರಿ??'' ಎಂದೆ.

''ಇದು ನಮ್ಮ ನಿರ್ಧಾರ... ನಮ್ಮ ಮಗಳ ಇಷ್ಟ... ಇನ್ನು ನಿಮ್ಮ ಅಭಿಪ್ರಾಯ ಏನು ಹೇಳಿ'' ಎನ್ನುವುದೆ!

'ಇದು ನಿಜಕ್ಕೂ ಜಗತ್ತಿನ ಎಂಟನೆಯ ಅದ್ಭುತ' ಎನಿಸಿತು! ಸ್ವಲ್ಪ ಸಮಯದ ಮೌನದಲ್ಲಿ ನನ್ನನ್ನು ನಾನು ಸ್ತಿಮಿತಕ್ಕೆ ತಂದುಕೊಂಡೆ. ''ಇಲ್ಲಿಯ ಧರ್ಮ, ಸಮಾಜ, ಸಂಸ್ಕೃತಿ ಇನ್ನೂ ಇಷ್ಟೊಂದು ಮುಂದುವರಿದಿಲ್ಲ... ನೀವು ದುಡುಕುತ್ತಿದ್ದೀರಿ...'' ಎಂದೆ.

ಇಬ್ಬರೂ ಯಥಾರೀತಿ ನಿಷ್ಕಲ್ಮಷವಾಗಿ ನಕ್ಕರು!

ಕಡೆಗೆ ''ಯೋಚ್ನೆ ಮಾಡೋಕೆ ಸಮಯ ಬೇಕು'' ಎಂದೆ.

''ಆಯ್ತು. ಯೋಚ್ನೆ ಮಾಡಿ. ನಿಮ್ಮ ತಂದೆ-ತಾಯಿ-ಅಣ್ಣ ಮತ್ತಿತರರ ಅಭಿಪ್ರಾಯವೂ ಮುಖ್ಯ. ನೀವೆಲ್ಲರೂ ಒಪ್ಪಿಕೊಂಡರೆ ನಿಮಗೆ ಹೇಗೆ ಬೇಕೋ ಹಾಗೇ ಮದುವೆ ಮಾಡ್ತೇವೆ... ಯಾವ ಧರ್ಮ ಅಡ್ಡಿಯಾಗುತ್ತೋ ಯಾವ ಸಮಾಜ ಬೇಡ ಅನ್ನುತ್ತೋ ಅದೆಲ್ಲಾ ನನಗಿರಲಿ. ನೀವು ಯಾವುದಕ್ಕೂ ಅಂಜಬೇಕಾಗಿಲ್ಲ; ಅಳುಕಬೇಕಾಗಿಲ್ಲ... ಇದು ಇಪ್ಪತ್ತೊಂದನೆಯ ಶತಮಾನ...'' ಎಂದರು!!


**ಎಸ್. ಆರ್. ಗುರುನಾಥ್**

'ಶ್ರೀನಿವಾಸ', ೧೧ನೇ ಅಡ್ಡರಸ್ತೆ, ಐ.ಯು.ಡಿ.ಪಿ. ಬಡಾವಣೆ, ಚಿತ್ರದುರ್ಗ - ೫೭೭ ೫೦೧


# ಬಿ. ವಿ. ವೈಕುಂಠರಾಜು



ಕನ್ನಡ ಪತ್ರಿಕೋದ್ಯಮದಲ್ಲಿ ವೈಕುಂಠರಾಜು ಚಿರಪರಿಚಿತ ಹೆಸರು. ಅಕೆಡಮಿಕ್ ಶಿಸ್ತನ್ನು ಮುಖ್ಯವಾಗಿ ಪತ್ರಿಕಾ ಬರಹಕ್ಕೆ ತರಲು ಪ್ರಯತ್ನಿಸಿದವರು. ಅತ್ಯಂತ ನಿಷ್ಠುರ, ರಾಜಿ ಮಾಡಿಕೊಳ್ಳದ ವಿಶ್ಲೇಷಣಾತ್ಮಕ ವಿಮರ್ಶೆಗಾಗಿ ತುಂಬ ಹೆಸರಾದವರು. ಕನ್ನಡ ಸಾರಸ್ವತಲೋಕದ ಹಿರಿಯರೆಲ್ಲರಿಗೂ ಹತ್ತಿರವಾದವರು. ಸರಿಯಲ್ಲವೆನ್ನಿಸಿದಾಗ ಸಿಡಿದು ಹೊರಬಂದರು. 'ಪ್ರಜಾವಾಣಿ' ಪತ್ರಿಕೆಯಲ್ಲಿ ಬಹುಕಾಲ ಸೇವೆ ಸಲ್ಲಿಸಿದ ಚಿತ್ರದುರ್ಗ ಮೂಲದವರಾದ ವೈಕುಂಠರಾಜು ಅವರು ಪತ್ರಿಕೆಯ ಪುರವಣಿ ವಿಭಾಗದಲ್ಲಿ ಹಲವು ವಿಶೇಷಗಳನ್ನು ರೂಪಿಸಿದವರು; ವಾದ-ವಿವಾದಗಳಿಗೆ ಎಡೆ ಕಲ್ಪಿಸಿದವರು. ಸೃಜನಶೀಲ ಲೇಖಕರೂ ಆಗಿದ್ದ ರಾಜು ಹಲವು ಕತೆ, ಕಾದಂಬರಿಗಳನ್ನು, ಅಂಕಣ ಬರಹಗಳನ್ನೂ ಪ್ರಕಟಿಸಿದ್ದಾರೆ. ಚಲನಚಿತ್ರ, ಕನ್ನಡ ರಂಗಭೂಮಿ ಕುರಿತ ಇವರ ಪುಸ್ತಕಗಳಿಗೆ ಗೌರವ ಪ್ರಶಸ್ತಿಗಳು ಲಭಿಸಿವೆ. ಮೈಸೂರು ವಿಶ್ವವಿದ್ಯಾನಿಲಯದ ಡಿ.ಲಿಟ್. ಗೌರವಕ್ಕೆ ಪಾತ್ರರು. ಇವರ 'ಆಕ್ರಮಣ' ಕೃತಿ ಗಿರೀಶ್ ಕಾಸರವಳ್ಳಿ ಅವರಿಂದ ಚಲನಚಿತ್ರವಾಯಿತು. 'ಉದ್ಭವ' ಕಾದಂಬರಿಯನ್ನು ಕೋಡ್ಲು ರಾಮಕೃಷ್ಣ ಅವರು ಚಿತ್ರಿಸಿದ್ದರು. ಅದು ರಂಗದ ಮೇಲೂ ಜನಪ್ರಿಯವಾಗಿತ್ತು. ಇವರ ನಾಟಕಗಳೂ ಪ್ರದರ್ಶಿತವಾಗಿವೆ. ಸ್ವತಃ ನಟಿಸಿ ನಿರ್ದೇಶಿಸಿದ್ದೂ ಉಂಟು.

ವೈಕುಂಠರಾಜು ಅವರು ರಾಜ್ಯ ನಾಟಕ ಅಕಾಡಮಿಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ. ಅವರ ಅವಧಿಯಲ್ಲಿ ಅನೇಕ ಉತ್ತಮ ಪುಸ್ತಕಗಳು ಪ್ರಕಟಣೆಗೊಂಡವು. ಮುಖ್ಯವಾಗಿ ವೃತ್ತಿರಂಗಭೂಮಿಯ ಕಾಯಕಲ್ಪಕ್ಕೆ ಆಗಬೇಕಾದ ಕೆಲಸಗಳೇನೆಂಬ ಬಗ್ಗೆ ವಿಸ್ತೃತ ವರದಿಯನ್ನು ತಯಾರಿಸಿಕೊಟ್ಟಿದ್ದರು. ರಾಜ್ಯ ರಾಜಕಾರಣದಲ್ಲಿ ಲೋಹಿಯಾ, ಜಯಪ್ರಕಾಶ ನಾರಾಯಣರ ಅನುಯಾಯಿಯಾಗಿ ಹಲವು ಚಟುವಟಿಕೆಗಳಲ್ಲಿ ತೊಡಗಿಕೊಂಡರು.

ಅವರದೇ ಮಾಲೀಕತ್ವದಲ್ಲಿ 'ವಾರಪತ್ರಿಕೆ' ಪ್ರಾರಂಭಿಸಿ ಕೂರಂಬಿನಂಥ ಬರಹಗಳಿಗೆ ಪ್ರಸಿದ್ಧರಾಗಿದ್ದರು. 'ವಾರಪತ್ರಿಕೆ'ಯ ಜೊತೆಗೆ ಕ್ರೀಡಾಪತ್ರಿಕೆ, ಮಾಸ ಪತ್ರಿಕೆಗಳನ್ನೂ ಪ್ರಕಟಿಸಿದರು. ಯಶಸ್ವೀ ಪತ್ರಕರ್ತ, ಉದ್ಯಮಿ ಎಂದು ಹೆಸರಾದರು.

ಮೈಸೂರು, ಬೆಂಗಳೂರು ವಿಶ್ವವಿದ್ಯಾಲಯಗಳಲ್ಲಿ ಅತಿಥಿ ಪ್ರಾಧ್ಯಾಪಕರಾಗಿ ಕೆಲಸ ಮಾಡಿದರು. ವೈಕುಂಠರಾಜು ಅವರು ಚಲನಚಿತ್ರ ಪತ್ರಕರ್ತರ ಸಂಘ, ಅಭಿವ್ಯಕ್ತಿ ಮೊದಲಾದ ಸಂಸ್ಥೆಗಳನ್ನು ಕಟ್ಟಿ, ಉತ್ತಮ ಕಾರ್ಯಗಳನ್ನು ಮಾಡಿ ತೋರಿಸಿಕೊಟ್ಟರು. ದಾವಣಗೆರೆಯಲ್ಲಿ ಜಿ. ಎಸ್. ಶಿವರುದ್ರಪ್ಪನವರ ಅಧ್ಯಕ್ಷತೆಯಲ್ಲಿ ಸಾಹಿತ್ಯ ಸಮ್ಮೇಳನ ನಡೆಸಿ ೭೦ರ ದಶಕದಲ್ಲಿ 'ನ ಭೂತೋ' ಅನ್ನಿಸಿಬಿಟ್ಟಿದ್ದರು. ಅವರ ಗರಡಿಯಲ್ಲಿ ಯುವ ಬರಹಗಾರರ ಪಡೆಯನ್ನು ಕಟ್ಟಿ ಬೆಳೆಸಿದರು. ಡಿ.ಎಲ್.ಎನ್., ಶಿವರಾಮ ಕಾರಂತರು, ಶ್ರೀರಂಗರು, ಗೋಪಾಲಕೃಷ್ಣ ಅಡಿಗರು, ಬಿ. ವಿ. ಕಾರಂತ, ಲಂಕೇಶ್, ಕೆ. ವಿ. ಸುಬ್ಬಣ್ಣ ಮೊದಲ್ಗೊಂಡು ಅನೇಕ ಹಿರಿಯರ ಒಡನಾಟ, ಪುಸ್ತಕ ಪ್ರಕಟಣೆ ಮೊದಲಾದುದರಲ್ಲಿ ತೊಡಗಿದರು. ತೀವ್ರ ಅನಾರೋಗ್ಯ ಅವರನ್ನು ಚಟುವಟಿಕೆಯಿಂದ ಹಿಂದೆ ಸರಿಸಿಬಿಟ್ಟಿತು. ಕೊನೆತನಕ ಬರವಣಿಗೆ ನಿಲ್ಲಲಿಲ್ಲ. ಅವರೊಬ್ಬ ನ್ಯಾಯನಿಷ್ಠುರಿ ಎಂದೇ ಕೊನೆತನಕ ಉಳಿದುಕೊಂಡರು.

'ಹೊಸತು'ಗೆ ಲೇಖನಗಳನ್ನು ಬರೆದಿದ್ದ ಶ್ರೀ. ವೈಕುಂಠರಾಜು ಅವರಿಗೆ ಪತ್ರಿಕೆಯು ಗೌರವ ಸೂಚಿಸುತ್ತದೆ.

ಹೊಸ ಓದು




**ಜ್ಯೋತಿಯೊಳಗಣ ಕಾಂತಿ**

ಕೆ. ನೀಲಾ

**ಪುಟ :** ೧೪೪ + ೪

**ಬೆಲೆ :** ರೂ. ೭೫

**ಚಿಂತನ ಪುಸ್ತಕ**, ನಂ. ೧೮೬೩, ೩೮ನೇ ಅಡ್ಡರಸ್ತೆ, ೧೧ನೇ ಮುಖ್ಯರಸ್ತೆ, ೪ನೇ 'ಟಿ' ಬ್ಲಾಕ್, ಜಯನಗರ, ಬೆಂಗಳೂರು-೪೧

ಹೋರಾಟದ ಬದುಕನ್ನು ಆಯ್ದುಕೊಂಡಿರುವ ಕೆ. ನೀಲಾ ಅವರು ಚಿಂತನೆ ಮತ್ತು ಚಳುವಳಿಗಳನ್ನು ಏಕಕಾಲಕ್ಕೆ ಮೈಗೂಡಿಸಿಕೊಂಡವರು. ಹೆಣ್ಣುಮಕ್ಕಳ ಶೋಷಣೆ, ಅಸಂಘಟಿತ ಕಾರ್ಮಿಕ ಸಮುದಾಯಗಳ ಸಮಸ್ಯೆ – ಇವನ್ನು ಅರಿತು ಸಕ್ರಿಯವಾಗಿ ಸ್ಪಂದಿಸುತ್ತ ಓಡಾಡುವ ಇವರು ತಮಗೆ ದಕ್ಕಿದ ಅನುಭವಗಳನ್ನು ಕಥೆಗಳ ಮೂಲಕ ಹೇಳಿದ್ದಾರೆ. ಉತ್ತರ ಕರ್ನಾಟಕದ ಮಧ್ಯಮ ವರ್ಗದ ಸಂಸಾರಗಳನ್ನು ಪರಿಚಯಿಸುವ ಪಾತ್ರಗಳು, ಅಲ್ಲಿನ ಭಾಷೆಯ ಸೊಗಡಿನಿಂದ ಅವು ಇನ್ನಷ್ಟು ತಾಜಾತನವನ್ನು ಗಳಿಸಿವೆ. ಹೆಣ್ಣುಮಕ್ಕಳಿಗಂತೂ ಬವಣೆಗಳು ಪ್ರಾರಂಭವಾಗುವುದು ತಾಯ ಗರ್ಭದಲ್ಲಿ ಭ್ರೂಣದ ಹಂತದಿಂದಲೇ ಎಂಬ ಸತ್ಯವನ್ನು 'ಕರುಳ ಸುತ್ತ ಹುತ್ತ' ಎಂಬ ಕಥೆ ನಿರೂಪಿಸುತ್ತದೆ. ಹೋರಾಟದ ಬದುಕನ್ನೇ ಪರಿಚಯಿಸುವ ಇತರ ಕಥೆಗಳೂ ಹೇಳುವುದು ದೊಡ್ಡ ಮನುಷ್ಯರ ಸಣ್ಣತನಗಳನ್ನೇ. ಬದುಕನ್ನು ಎದುರಿಸಲಾಗದ ನಿಟ್ಟುಸಿರುಗಳು, ಅತೃಪ್ತ ಹಸಿ ಬಿಸಿ ಭಾವನೆಗಳು, ಮೌನ ರೋದನಗಳು ಇಲ್ಲಿ ಸಾಕಷ್ಟು ಇವೆ.




**ಬಸವಲಿಂಗಪ್ಪನವರು ಮತ್ತು ಡೇವಿಡ್ ಸಾಹೇಬರು**

ನಟರಾಜ್ ಹುಳಿಯಾರ್

**ಪುಟ :** xvi + ೯೬

**ಬೆಲೆ :** ರೂ. ೬೦

**ಕನ್ನಡ ಸಂಘ**, ಸಂತ ಜೋಸೆಫರ ವಾಣಿಜ್ಯ ಕಾಲೇಜು, ೧೬೩, ಬ್ರಿಗೇಡ್ ರಸ್ತೆ, ಬೆಂಗಳೂರು-೨೫

ನಟರಾಜ್ ಹುಳಿಯಾರ್ ಅವರ ಕಥನ ಕಲೆ ಭಿನ್ನರೀತಿಯದು. ಬರಿ ಕಲ್ಪನೆಗಳಿಂದ ಕತೆ ಹೆಣೆದು ಓದುಗನನ್ನು ಭ್ರಮಾಲೋಕಕ್ಕೆ ಕೊಂಡೊಯ್ಯುವ ತಂತ್ರ ಇಲ್ಲಿಲ್ಲ. ಆ ಕ್ಷಣ ನಡೆದ ಘಟನೆಯನ್ನು ಬೆನ್ನಟ್ಟಿಹೋಗಿ, ವಾಸ್ತವವನ್ನು ಕೆದಕಿ ಕಥೆ ಬರೆಯುತ್ತಾರೆ. ಸರಕಾರಿ ಅಧಿಕಾರಿಗಳು, ಸಾಹಿತಿಗಳು, ಕಲಾವಿದರು, ವಿಜ್ಞಾನಿಗಳು ಎಲ್ಲರನ್ನೊಳಗೊಂಡ ಈ ದೇಶ ಭ್ರಷ್ಟಾಚಾರವನ್ನು ಹೊರತುಪಡಿಸಿ ಏನನ್ನಾದರೂ ಸಾಧಿಸಿದೆಯೆ? ಸಾಧನೆಗಳು ಸಹ ಆಗಿರುವುದು ಭ್ರಷ್ಟಾಚಾರದ ಮೂಲಕವೇ ಅಲ್ಲವೆ? ನಮ್ಮ ನಮ್ಮ ಮುಖಗಳನ್ನು ಮತ್ತೆ ಮತ್ತೆ ಕನ್ನಡಿಯಲ್ಲಿ ನೋಡಿಕೊಳ್ಳಬೇಕಾದ ಸಮಯವಿದೆಂದು ಕಥೆಗಳು ಜ್ಞಾಪಿಸುತ್ತವೆ. ಸಾಹಿತಿ ಹಾಗೂ ವಿಮರ್ಶಕ ಇಬ್ಬರಿಗೂ ಛಡಿಏಟನಂತಿರುವ ವಿಶಿಷ್ಟವಾದ ಗಮನ ಸೆಳೆಯುವ ಕಥೆ ''ಜ್ಞಾನಪೀಠದ ಹಾದಿಯಲ್ಲಿ''.

**ನೂರಿ** (ಕಾದಂಬರಿ)

ಡಾ|| ಜಾನಕಿ ಸುಂದರೇಶ್

**ಪುಟ :** ೨೪೦ **ಬೆಲೆ :** ರೂ. ೧೪೦

**ನವಕರ್ನಾಟಕ ಪ್ರಕಾಶನ**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

ಈ ಕಾದಂಬರಿಯ ಕಥಾನಾಯಕಿ ನೂರಿ, ಉಪನಾಯಕಿ ಸೋನಿ. ಇಬ್ಬರದೂ ಒಳ್ಳೆಯ ಮನೆತನವಿರಬಹುದು. ಇದೀಗ ಬೀದಿಯ ಮಕ್ಕಳು ಹಾಗೂ ಜೊತೆಗಾರ್ತಿಯರು. ''ಉಪಕಾರ ಮಾಡಲಾಗದವರು ಉಪದ್ರವವನ್ನಾದರೂ ಕೊಡಬಾರದೆಂಬ'' ಸನ್ನುಡಿಗೆ ವಿರುದ್ಧವಾಗಿ ಎಲ್ಲರೂ ಒಂದಲ್ಲೊಂದು ರೀತಿಯಿಂದ ಈ ಮಕ್ಕಳನ್ನು ಕಾಡಿ ಪೀಡಿಸಿದವರೇ. ಹೊಟ್ಟೆ ತುಂಬಿಸಿಕೊಳ್ಳಲು ನಾನಾ ತರಹದ ವಿದ್ಯೆಗಳನ್ನು ಕಲಿತು ಒರಟೊರಟಾಗಿ ವರ್ತಿಸುವ ನೂರಿಗೆ ಎಲ್ಲೆಲ್ಲಿ ಯಾವ್ಯಾವ ತಂತ್ರಗಳನ್ನು ಹೂಡಬೇಕೆಂದು ಬೀದಿಯ ಬದುಕು ಕಲಿಸಿಕೊಟ್ಟಿತ್ತು. ಆಕಸ್ಮಾತ್ ಮಿಂಚು ಹೊಳೆದಂತೆ ಸೋನಿಯ ಊರಿನ ಹೆಸರು ತಿಳಿದುಬಿಡುತ್ತದೆ. ಅಲ್ಲಿಂದ ಕಾದಂಬರಿ ಹೊಸತಿರುವು ಪಡೆದು, ಕ್ಷಣಕ್ಷಣಕ್ಕೂ ಪ್ರಪಂಚವೆಂದರೇನೆಂದು ಮನವರಿಕೆ ಮಾಡಿಕೊಡುವಲ್ಲಿ ಯಶಸ್ವಿಯಾಗಿದೆ. ಬಂದೊದಗಿದ ಅಪಾಯದ ಸಂಚನ್ನು ವಿಫಲಗೊಳಿಸಿ ಸೋನಿಯನ್ನು ಮನೆ ತಲುಪಿಸುವವರೆಗಿನ ಸಾಹಸ ಕಥೆ ಇಲ್ಲಿ ಚಿತ್ರಿತವಾಗಿದೆ. ಹ್ಞೂ ಕಣಕ್ಕಾ, ಹ್ಞೂ ಕಣಣ್ಣಾ ಎನ್ನುತ್ತಲೇ ಹೆಜ್ಜೆ ಹೆಜ್ಜೆಗೂ ಅಪಾಯವನ್ನೆದುರಿಸುತ್ತ ಓಡಾಡುವ ನೂರಿಯ ಇಲ್ಲಿನ ಪಾತ್ರವನ್ನು ನಮ್ಮಿಂದ ಸುಲಭವಾಗಿ ಮರೆಯಲು ಸಾಧ್ಯವಿಲ್ಲ. ಬೀದಿಯ ಮಕ್ಕಳು, ಬಾಲಕಾರ್ಮಿಕರ ಬಗೆಗೆ ಚಿಂತಿಸುವಂತೆ ಈ ಕೃತಿ ಮಾಡಬಲ್ಲುದು.




**ಬಣ್ಣದ ತೆರೆ**

ತಮಿಳು ಮೂಲ : ಸುಪ್ರಭಾರತಿ ಮಣಿಯನ್; ಕನ್ನಡಕ್ಕೆ : ತಮಿಳ್ ಸೆಲ್ವಿ

**ಪುಟ :** xvi + ೧೬೦ **ಬೆಲೆ :** ರೂ. ೧೦೦

**ಅಭಿನವ ಪ್ರಕಾಶನ**, ೧೭/೧೮-೨, ಮೊದಲನೆಯ ಮುಖ್ಯರಸ್ತೆ, ಮಾರೇನಹಳ್ಳಿ, ವಿಜಯನಗರ, ಬೆಂಗಳೂರು - ೫೬೦ ೦೪೦

ಬತ್ತಿದಂತೆ ಬೆಳಕೋ – ಎನ್ನುವ ಗಾದೆಮಾತು ಪರಿಸರವನ್ನು ಕಲುಷಿತಗೊಳಿಸಿ ಇದೀಗ ತಲೆಯಮೇಲೆ ಕೈಹೊತ್ತು ಪರಿಹಾರ ಕಾಣದೆ ಗೋಳಿಡುವ ಮನುಷ್ಯನನ್ನು ಎಚ್ಚರಿಸುವ ಮಾತೂ ಆಗುತ್ತದೆ. ಸುಖಜೀವನದ ಬೆನ್ನುಹತ್ತಿದ ಮಾನವನಿಗೆ ಹಳೆಯದೆಲ್ಲ ಬೇಡವಾಗಿ ನವನಾಗರಿಕತೆ, ಥಳಕು-ಬಳಕಿನ ಐಷಾರಾಮಿ ಜೀವನ ಇವೆಲ್ಲ ಬೇಕಾಗಿವೆ. ಅವನ್ನು ಕೈಗೆಟಕಿಸಿಕೊಳ್ಳುವ ಭರದಲ್ಲಿ, ಅಭಿವೃದ್ಧಿಯ ಹೆಸರಿನಲ್ಲಿ, ಪ್ರಕೃತಿಯ ಎಲ್ಲ ಸಂಪನ್ಮೂಲಗಳನ್ನು ವಿವೇಚನೆಯಿಲ್ಲದೆ ಬಳಸಿ ಜೀವಿಗೋಳದ ವ್ಯವಸ್ಥೆಯನ್ನೇ ಬದಲಿಸಲಾಗಿದೆ. ಪ್ರಸ್ತುತ ಕಾದಂಬರಿ ತಿರುಪ್ಪೂರು ಎಂಬಲ್ಲಿನ ನೊಯ್ಯಲ್ ಎಂಬ ಜೀವನದಿಯೊಂದು ಬಣ್ಣದ ಕಾರ್ಖಾನೆಯಿಂದ ಕಲುಷಿತಗೊಂಡು ಊರಿಗೇ ಮಾರಕವಾಗಿ ಪರಿಣಮಿಸಿದ ಕಥೆಯನ್ನು ಹೇಳುತ್ತದೆ. ಹೊಸ ಸ್ವರ್ಗ ಕಂಡುಕೊಳ್ಳುತ್ತೇನೆಂದು ಬಯಸಿ ಬಾಳನ್ನು ನರಕ ಮಾಡಿಕೊಂಡ ಮನುಷ್ಯನ ಕಥೆ. ನೆಲ-ಜಲ-ಗಾಳಿ ಇವುಗಳ ಸಹಜತೆಯಲ್ಲಿ ಮಾನವನ ಹಸ್ತಕ್ಷೇಪವಾಗಿದ್ದು ಅದರ ಫಲಗಳೇನೆಂದು ಇಲ್ಲಿನ ಪಾತ್ರಗಳ ಬವಣೆಯ ಮೂಲಕ ತಿಳಿಸಿ ಎಚ್ಚರಿಸಲಾಗಿದೆ.

**ಆಲಾಹಳ ಹೆಣ್ಣುಮಕ್ಕಳು** (ಕಾದಂಬರಿ)

ಮಲಯಾಳಂ ಮೂಲ : ಸಾರಾ ಜೋಸೆಫ್; ಕನ್ನಡಕ್ಕೆ : ಪಾರ್ವತಿ ಜಿ. ಐತಾಳ್

**ಪುಟ :** ೧೬೦ **ಬೆಲೆ :** ರೂ. ೧೦೦

**ನವಕರ್ನಾಟಕ ಪ್ರಕಾಶನ**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧



ಅಂಗಳದಲ್ಲಿ ತಾನಾಗಿ ಬೆಳೆದು ಮನೆಯವರ ಉಸಿರಾಗಿ, ಹಸಿರಾಗಿ ಹಬ್ಬಿನಿಂತ ಸುಕೋಮಲ ಅವರೆಬಳ್ಳಿಯ ಚಪ್ಪರ. ಮುಂದೊಂದು ದಿನ ರಸ್ತೆಗೆ ಟಾರು ಹಾಕುವಾಗ ಅದನ್ನು ಸವರಿ ಮುಂದೆ ಹೋಗುವ ಕಲ್ಲೆಂಜಿನು (ರೋಡ್ ರೋಲರ್). ಇವೆರಡು ಸಂಕೇತಗಳು ಇಡೀ ಕಾದಂಬರಿಯ ತಿರುಳಾಗಿ ಪ್ರಾರಂಭ ಮತ್ತು ಅಂತ್ಯಗಳನ್ನು ಹೇಳುತ್ತವೆ. ಪ್ರತಿಭಟನೆಯ ದನಿ ಸೋತು ನಿಶ್ಶಕ್ತವಾಗುವ ಸಂಕೇತವೇ ನಿತ್ಯ ಕ್ಷಯರೋಗಿಯಾದ ''ಕುಟ್ಟಿಪಾಪ''ನ ಪಾತ್ರ. ಎಂಟೆದೆಯವರೂ ಕಾಲಿಡಲು ಭಯಪಡುತ್ತಿದ್ದ ಜಾಗವೊಂದರಲ್ಲಿ ನಿರ್ಗತಿಕ ಕುಟುಂಬವೊಂದು ಬೀಡುಬಿಟ್ಟು, ಅಲ್ಲಿನ ಮಣ್ಣಿನೊಂದಿಗೆ ತಮ್ಮ ಬಾಂಧವ್ಯವನ್ನು ಗುರುತಿಸುವ ಕಥಾನಕವಿದು. ಜಾತಿ, ನಂಬಿಕೆ, ಆಚರಣೆ, ಧರ್ಮ ಇವುಗಳ ಮಧ್ಯೆ ಕಂಗೆಡುವ, ಆದರೆ ಒಗ್ಗಟ್ಟಾಗಿ ಎದುರಿಸಿ ನಿಭಾಯಿಸುವ ಮುಗ್ಧ ಕುಟುಂಬದ ಚಿತ್ರಣ. ಸಂಕಷ್ಟಗಳ ಬದುಕಿಗೆ ಸೆಟೆದುನಿಂತು, ಐದು ಹೆಣ್ಣುಮಕ್ಕಳ ತೀರದ ಕಷ್ಟಗಳಿಗೆ ಸಾಕ್ಷಿಯಾಗಿದ್ದು, ಒಬ್ಬ ಓಡಿಹೋದ – ಇನ್ನೊಬ್ಬ ನಿತ್ಯರೋಗಿಯಾದ ಗಂಡುಮಕ್ಕಳಿಬ್ಬರ ಆಸರೆಯೂ ಇಲ್ಲದೆ ಕೋಕ್ಕಾಂಚರದ ಮರಿಯಾ ಇಲ್ಲಿ ಒಂದೆಡೆ ಕೇಳುತ್ತಾಳೆ: ''ಹಸಿವೆಗಿಂತಾ ದೊಡ್ಡ ಪಿಶಾಚಿ ಇದೆಯಾ'' ಎಂದು!

– ಇಂದಿರಾಕುಮಾರಿ

೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨

# ಮಗು

ಪ್ರೇಮ್‌ಚಂದ್



ಜನರು 'ಗಂಗು'ನನ್ನು ಬ್ರಾಹ್ಮಣ ಎಂದು ಗುರುತಿಸಿದ್ದರು, ಅವನೂ ಹಾಗೆ ಅಂದುಕೊಂಡಿದ್ದ. ನನ್ನೆಲ್ಲ ಕೆಲಸದಾಳುಗಳು ನನ್ನನ್ನು ಗೌರವಿಸುತ್ತಿದ್ದರು. ಆದರೆ ಗಂಗು ಈ ರೀತಿಯ ಗೌರವ ಎಂದೂ ನೀಡಿಲ್ಲ. ನಾನು ತಲೆಬಾಗಲೆಂದು ಆತನ ಭಾವನೆ ಇರಬೇಕು. ಅವನೆಂದೂ ಗಂಜಳ ಪಾತ್ರೆಗಳನ್ನು ಮುಟ್ಟುತ್ತಿದ್ದಿಲ್ಲ. ಸೆಕೆಗಾಲದಲ್ಲಿ ಗಾಳಿ ಹಾಕಲೆಂದು ಹೇಳುವ ಧೈರ್ಯ ಮಾಡಿಲ್ಲ. ಕೆಲವೊಂದು ವೇಳೆ ಯಾರೂ ಸುತ್ತಮುತ್ತ ಇಲ್ಲದಿದ್ದಾಗ, ನಾನು ಬೆವರಿನಿಂದ ಒರೆಸಿಕೊಳ್ಳುತ್ತಿದ್ದಾಗ, ಫ್ಯಾನ್ ಹಾಕುವಂತೆ ಮಾಡಿ ಏನೋ ನನಗೆ ತುಂಬ ಉಪಕಾರ ಮಾಡೋನಂತೆ ವರ್ತಿಸುತ್ತಿದ್ದ. ಆತನು ಶೀಘ್ರಕೋಪಿ. ಸಹನಶೀಲನಲ್ಲ. ಅವನಿಗೆ ಗಾಡಿ ಹೊಡೆಯುವವನೊಟ್ಟಿಗೆ ಸಮಾನನಾಗಿ ಕೂಡುವುದು ಇಷ್ಟ ಇಲ್ಲ. ಅಷ್ಟೆ ಅಲ್ಲ, ಆತ ಜಾತ್ರೆಗಾಗಲಿ, ನಾಟಕಕ್ಕಾಗಲಿ ಹೋದದ್ದೇ ಇಲ್ಲ. ಅವನ ವರ್ಗದಲ್ಲಿ ಸಾಮಾನ್ಯವಾಗಿ ಕಂಡುಬರುವ ಭಂಗಿ ಸೇವನೆ ಇವನಲ್ಲಿಲ್ಲ.

ಅವನೆಂದೂ ಪೂಜೆ ಮಾಡಿಲ್ಲ, ನದಿಯಲ್ಲಿ ಹೋಗಿ ಸ್ನಾನ ಮಾಡಿಲ್ಲ. ಅವನು ಸಂಪೂರ್ಣ ನಿರಕ್ಷರಕುಕ್ಷಿ. ಆದಾಗ್ಯೂ ಬ್ರಾಹ್ಮಣನಿಗೆ ಎಲ್ಲಾ ಮರ್ಯಾದೆಗಳು ಇವೆ ಎಂದು ಭಾವಿಸಿದ್ದ.

ಪಿತ್ರಾರ್ಜಿತ ಆಸ್ತಿಯಿಂದ ಬೇರೆ ಜನರು ಹೆಮ್ಮೆ ಪಡುವಂತೆ ಈತನೂ ತನ್ನ ಜಾತಿಯ ಬಗ್ಗೆ ಭಾವನೆ ಯಾಕೆ ಹೊಂದಿರಬಾರದು ?

ನಾನೆಂದೂ ವಿನಾಕಾರಣ ನೌಕರರ ಜೊತೆಗೆ ಮಾತನಾಡುವುದಿಲ್ಲ. ನಾನು ಹೇಳದ ಹೊರತು ನನ್ನ ಖಾಸಗಿ ವಿಷಯದಲ್ಲಿ ಪ್ರವೇಶಿಸುವಂತಿಲ್ಲ. ಸಣ್ಣ ಪುಟ್ಟ ವಿಚಾರಗಳಾದ ಒಂದು ಲೋಟ ನೀರು ತರುವುದು, ಬೂಟುಗಳನ್ನು ತೆಗೆದಿರಿಸುವುದು, ದೀಪ ಹಚ್ಚುವುದು ಇಂಥವುಗಳನ್ನು ನಾನೇ ಮಾಡಲು ಆದ್ಯತೆ ನೀಡುತ್ತಿದ್ದೆ. ಇದರಿಂದ ನನಗೆ ಆತ್ಮತೃಪ್ತಿ ಮತ್ತು ಸಂತೋಷ ಆಗುತ್ತಿತ್ತು. ಆಳುಗಳು ನನ್ನ ಅಗತ್ಯಗಳನ್ನು ತಿಳಿದಿದ್ದರು. ನನಗಾಗಿ ಯೋಚಿಸುವ ಅಗತ್ಯ ಇರಲಿಲ್ಲ.

ಅವರು ಗೈರುಹಾಜರಾಗುತ್ತಿದ್ದರು. ಒಂದೋ, ಅವರು ತಮ್ಮ ಸಂಬಳದ ಮುಂಗಡ ಕೇಳುವುದಕ್ಕೆ ಅಥವಾ ಅವರು ಬೇರೆ ಆಳುಗಳ ಬಗ್ಗೆ ದೂರು ನೀಡುವುದಕ್ಕೆ ಬರುತ್ತಿದ್ದರು. ಈ ಎರಡೂ ಪದ್ಧತಿಗಳನ್ನು ನಾನು ಖಂಡಿಸುತ್ತಿದ್ದೆ. ನಾನು ಅವರಿಗೆ ಸಾಕಷ್ಟು ತಪ್ಪದೇ ಪಾವತಿಸಿದಾಗ್ಯೂ ಒಂದು ತಿಂಗಳ ಸಂಬಳವನ್ನು ಹದಿನೈದು ದಿನದಲ್ಲಿ ಹೇಗೆ ಮುಗಿಸುತ್ತಿದ್ದರೋ ಕಾರಣ ಗೊತ್ತಾಗಲಿಲ್ಲ.

ಒಂದು ಪ್ರಾತಃಕಾಲ ನನ್ನ ಹತ್ತಿರ ಕರೆಸದೇ ಗಂಗು ಬಂದಿದ್ದ. ತಾಳಲಾರದೆ, ''ಬಂದಿದ್ದೇಕೆ''? ಎಂದು ಕೇಳಿದೆ. ಅವನ ಚಹರೆಯಿಂದ ಅವನೇನೋ ಹೇಳ ಬಯಸಿದ್ದು, ಅವನೆಲ್ಲ ಪ್ರಯತ್ನ ಮೀರಿ ತುಟಿಗಳಿಂದೀಚೆಗೆ ಪದಗಳು ಬರಲಿಲ್ಲ. ನಿಧಾನಿಸಿ ಕೇಳಿದೆ, ''ಏನು ಸಮಾಚಾರ. ನೀನೇಕೆ ಮಾತನಾಡುತ್ತಿಲ್ಲ? ನಿಂಗೊತ್ತಿದೆ ನನಗೀಗಾಗಲೇ ವಾಕಿಂಗ್ ಹೋಗುವುದು ತಡವಾಗಿದೆ.'' ತಡವರಿಸುತ್ತಾ ಗಂಗೂ ಹೇಳಿದ, ''ನೀವು ತಡಮಾಡಬೇಡಿ ನಾನು ಮತ್ತೊಮ್ಮೆ ಬರುವೆ.'' ಇದು ಶೋಚನೀಯ. ನನಗೆ ಅವಸರವಿಲ್ಲವೆಂದು ಆತನಿಗೆ ಗೊತ್ತಿಲ್ಲದ್ದೇ ಆದರೆ ಉದ್ದಕ್ಕೆ ಮಾತನಾಡುತ್ತಿದ್ದ. ಓದುವಾಗ ಮತ್ತು ಬರೆಯುವಾಗ ಮಾತ್ರ ನಾನು ಧ್ಯಾನಸ್ಥನಾಗಿರುತ್ತೇನೆಂದು ಆತನ ಗ್ರಹಿಕೆ ಯಾಗಿದೆ. ಒಬ್ಬನೇ ಕುಳಿತು ಈ ಸ್ಥಿತಿಯಲ್ಲಿದ್ದಾಗ, ಸುಮ್ಮನೇ ಇದ್ದೇನೆಂದು ತಿಳಿಯುತ್ತಿದ್ದ. ನನಗೆ ಖಾತ್ರಿ ಆಗಿದೆ, ನನ್ನ ಆ ಪರಿಸ್ಥಿತಿಯಲ್ಲಿ ಅದೆಷ್ಟು ಬೆಲೆ ಇದ್ದುದ್ದು ಎಂದು ತನಗೆ ತಾನು ಗೊಂದಲಕ್ಕೊಳಗಾಗುತ್ತಿದ್ದ.

ತಕ್ಷಣವೇ ಆತನನ್ನು ಹೊತ್ತುಹಾಕಲೆಂದು ಹೇಳಿದೆ ''ನೀನು ಹಣಕ್ಕಾಗಿ ಬಂದಿದ್ದೇ ಆದರೆ ಖಂಡಿತವಾಗಿ ನಿನಗೆ ಅದು ಸಿಕ್ಕದು.''

''ನನಗೆ ಮುಂಗಡ ಬೇಕಾಗಿಲ್ಲ. ನಾನು ನಿಮ್ಮನ್ನು ಈ ಬಗ್ಗೆ ಕೇಳೇ ಇಲ್ಲ'' ಎಂದು ಗಂಗೂ ಹೇಳಿದ.

''ಹಾಗಾದರೆ ನೀನು ಯಾರ ಬಗ್ಗೆಯಾದರೂ ಚಾಡಿ ಹೇಳಲು ಬಯಸಿದ್ದಿ. ಹಿಂದೆ ಆಡಿಕೊಳ್ಳುವುದು ನನಗಿಷ್ಟವಿಲ್ಲ ಎಂದು ನಿನಗೆ ತಿಳಿದಿರಬೇಕು.''

''ಇಲ್ಲ ಸ್ವಾಮಿ, ನಾನು ಯಾರ ವಿರುದ್ಧವೂ ದೂರುವುದಿಲ್ಲ'' ಎಂದು ಗಂಗು ಹೇಳಿದ. ಸಂಯಮ ಕಳೆದುಕೊಂಡು ಹೇಳಿದೆ ''ನನ್ನ ತಲೆ ತಿನ್ನಲು ಬಂದಿದ್ದೇಕೆ ?''

ಗಂಗು ತನ್ನ ರಹಸ್ಯ ಬಿಚ್ಚಿಡಲು ಇನ್ನೊಂದು ಪ್ರಯತ್ನ ಮಾಡಿದ. ಅವನ ಮುಖಚರ್ಯೆಯಿಂದ ಏನೋ ಹೇಳಲು ಬಲವಾಗಿ ಪ್ರಯತ್ನಿಸುತ್ತಿದ್ದ. ಕೊನೆಗೊಮ್ಮೆ ಹೇಳಿದ, ''ನನ್ನನ್ನು ಕೆಲಸದಿಂದ ಬಿಡುಗಡೆ ಮಾಡಿ ಸ್ವಾಮಿ, ಇನ್ನು ಬಹಳಷ್ಟು ದಿನಗಳು ನಿಮ್ಮ ಸೇವೆ ಮಾಡಲಾರೆ''. ಇಂತಹದ್ದು ಇದೇ ಮೊದಲು. ಇದರಿಂದ ನೋವಾಯಿತು. ನಾನೊಬ್ಬ

ಅವನ ಮುಖಭಾವ ಹಸಿದು ಕಂಗಾಲಾದ ಮನುಷ್ಯ ಮೃಷ್ಟಾನ್ನ ಮಾಡಿದಂತಿತ್ತು. ಧರ್ಮಾತ್ಮನಂತೆ ಪ್ರಶ್ನಿಸಿ ''ಗೋಮತಿಯ ಬಗ್ಗೆ ಏನಾದರೂ ತಿಳಿಯಿತೆ, ಅವಳನ್ನು ನೀನು ಹುಡುಕಲು ಹೋಗಿದ್ದೆಂದು ನಂಬಿರುವೆ ?'' ಎಂದೆ. ಸಂತೋಷ ಉಕ್ಕಿ ಹರಿದು ಆತ ಹೇಳಿದ ''ನಾನು ಕೊನೆಗೂ ಅವಳನ್ನು ಕಂಡೆ ಬಾಬೂಜಿ, ಲಕ್ನೋದ ಮಹಿಳೆಯರ ಆಸ್ಪತ್ರೆಯಲ್ಲಿದ್ದಳು. ಅವಳೊಬ್ಬ ಮಿತ್ರನಿಗೆ ನನ್ನ ಖಿನ್ನತೆ ಕುರಿತು ಇದ್ದುದಾದರೆ, ನಾನಿಲ್ಲಿದ್ದೇನೆ ತಿಳಿಸು ಎಂದು ಹೇಳಿದ್ದಳು. ಇದನ್ನು ತಿಳಿದಾಕ್ಷಣ ಲಕ್ನೋಗೆ ಹೋದೆ. ಅವಳನ್ನು ಕರೆತಂದೆ. ಫಲಾಪೇಕ್ಷೆಯೆಂಬಂತೆ ಈ ಮಗುವನ್ನು ಪಡೆದಿದ್ದೇನೆ.'' ಹೊಸ ಪಾರಿತೋಷಕ ಗೆದ್ದ ಕ್ರೀಡಾಪಟುವಿನಂತೆ ಆ ಮಗುವನ್ನು ಹೆಮ್ಮೆಯಿಂದ ಎತ್ತಿ ತೋರಿಸಿದ.

ಒಳ್ಳೆಯ ಮಾಲೀಕನಾಗಿದ್ದೆ. ಇದರಿಂದ ಆಳುಗಳೂ ನನ್ನ ಜೊತೆಗಿರುವುದು ಒಳ್ಳೆಯ ಅವಕಾಶ ಎಂದು ಭಾವಿಸಿದ್ದರು. ''ಏಕೆ ಕೆಲಸ ಬಿಡುವೆ ?'' ಎಂದು ಕೇಳಿದೆ.

''ಸ್ವಾಮಿ, ನೀವು ದಯೆಯ ಪ್ರತೀಕವೆ. ಸಕಾರಣ ವಿಲ್ಲದೆ ಯಾರು ನಿಮ್ಮಿಂದ ದೂರಾಗಲು ಬಯಸುತ್ತಾರೆ ? ಗತ್ಯಂತರವಿಲ್ಲದೆ ನಾನು ನಿಮ್ಮ ಹತ್ತಿರ ಬಿಡಲು ಒಂದು ಘಟನೆ ಕಾರಣವಾಗಿದೆ. ನನ್ನಿಂದಾಗಿ ಜನರು ನಿಮಗೆ ಬೆರಳು ತೋರಿಸುವುದು ಬೇಡ.''

ಇದು ಗೊಂದಲದ ಸಂಗತಿಯಾಗಿತ್ತು. ನಾನು ಬೆಳಗಿನ ವಾಕಿಂಗ್ ಹೋಗುವುದನ್ನು ಮರೆತು ಕುರ್ಚಿಯಲ್ಲಿ ಕುಳಿತಿದ್ದೆ

''ಒಗಟಿನಂತೆ ಏಕೆ ಮಾತನಾಡುತ್ತಿ? ಮನಸ್ಸಿನಲ್ಲಿ ಇರುವುದನ್ನು ಏಕೆ ಬಿಚ್ಚಿ ಹೇಳುತ್ತಿಲ್ಲ?'' ಗಂಗೂ ಸಾವಧಾನವಾಗಿ, ''ಅದೇನೂಂದ್ರೆ ಇದೀಗ ವಿಧವಾ ಶ್ರಮದಿಂದ ಹೊರಬಂದ ಗೋಮತಿದೇವಿ'' ...ಎನ್ನುತ್ತ ಮಾತನ್ನು ಅಪೂರ್ಣಗೊಳಿಸಿದ.

ನಾನು ಅಸಹನೆಯಿಂದ ಕೇಳಿದೆ : ''ನಿನ್ನಿಂದ ಅವಳಿಗೇನಾಗಬೇಕಿದೆ ?''

''ನಾನು ಅವಳನ್ನು ಮದುವೆಯಾಗಬೇಕೆಂದಿದ್ದೇನೆ ಯಜಮಾನರೆ'' ಗಂಗು ನುಡಿದ.

ಸಿಟ್ಟು ಪಿತ್ತಕ್ಕೇರಿ ಆತನೆಡೆ ನೋಡಿದೆ. ನಾಗರಿಕತೆಯ ಸೋಂಕಿಲ್ಲದ ಈ ಬ್ರಾಹ್ಮಣ ಹೇಗೆ ವಿಧವೆಯನ್ನು ಮದುವೆ ಯಾಗಲು ನಿರ್ಧರಿಸಿದ : ಆತ್ಮಾಭಿಮಾನದ ಯಾವೊಬ್ಬನೂ ಇವನನ್ನು ಮನೆಯ ಹತ್ತಿರ ಬಿಟ್ಟುಕೊಳ್ಳುತ್ತಿರಲಿಲ್ಲ. ನಮ್ಮ ಓಣಿಯಲ್ಲಿ ಇದ್ದ ಪ್ರಶಾಂತ ವಾತಾವರಣವನ್ನು ಗೋಮತಿ ಕದಡುವಂತೆ ಮಾಡಿದ್ದಳು. ಕೆಲವು ವರ್ಷಗಳ ಹಿಂದೆ ವಿಧವಾಶ್ರಮ ಪ್ರವೇಶಿಸಿದ್ದಳು. ವಿಧವಾಶ್ರಮದ ಆಡಳಿತ ಎರಡು ಸಲ ಆಕೆಯ ವಿವಾಹ ಮಾಡಿದರೂ ವಾರೊಪ್ಪತ್ತಿನಲ್ಲಿ ಆಕೆ ಮರಳಿಬಂದಿದ್ದಳು. ಕೊನೆಗೆ ಅವಳನ್ನು ಅಲ್ಲಿಂದ ಹೊರದೂಡಿದ್ದರು. ಈಗ ಅವಳು ಓಣಿಯಲ್ಲಿ ಒಂದು ಕೋಣೆಯನ್ನು ಹಿಡಿದಿದ್ದಾಳೆ. ಪ್ರೀತಿ ಮಾಡುವ ಪಡ್ಡೆ ಹುಡುಗರಿಗೆ ಇದೊಂದು ಕೇಂದ್ರ ಆಸಕ್ತಿಯಾಗಿದೆ.

ಅವರಿಬ್ಬರು ನಿರ್ಗತಿಕರೆನಿಸಿ ಗಂಗು ಕುರಿತು ಕರುಣೆ ಮೂಡಿತು. ''ಈ ಅಯೋಗ್ಯನೇಕೆ ಬೇರೆ ಹೆಂಗಸನ್ನು ಬಯಸಲಿಲ್ಲ'' ಎಂದುಕೊಂಡೆ. ನನಗೆ ಖಾತ್ರಿ ಆಗಿತ್ತು ಆಕೆ ಇವನೊಟ್ಟಿಗೆ ಬಾಳಲಿಕ್ಕಿಲ್ಲ ಅವನು ಶ್ರೀಮಂತನಾಗಿದ್ದರೆ ಆಕೆ ಆರು ತಿಂಗಳಾದರೂ ಅಂಟಿಕೊಂಡಿರುತ್ತಿದ್ದಳು. ಮದುವೆ ಕೆಲವೇ ದಿನಗಳಲ್ಲಿ ನಿಶ್ಚಿತ ಅಂಬೋದು ನಿಚ್ಚಳವಾಯಿತು.

''ಆಕೆಯ ಪೂರ್ವೇತಿಹಾಸ ಗೊತ್ತೊ ?''

''ಅದೆಲ್ಲ ಸುಳ್ಳು ಸ್ವಾಮಿ'' ಎಂದು ದೃಢವಾಗಿ ಹೇಳಿದ. ''ಅವಳು ಏನೂ ಮಾಡದಿದ್ದರೂ ಜನರು ಅವಳಿಗೆ ಕೆಟ್ಟ ಹೆಸರು ಕೊಟ್ಟಿದ್ದಾರೆ.''

''ಮೂರ್ಖ! ಆಕೆ ಮೂವರನ್ನು ಬಿಟ್ಟಿರುವುದು ಗೊತ್ತಿಲ್ಲವೋ ?''

''ಅವಳೇನು ಮಾಡಿದ್ದಾಳೆ'' ಎಂದು ಎಗ್ಗಿನಲ್ಲಿ ಗಂಗು ಕೇಳಿದ. ''ಆ ಜನರೇ ಅವಳನ್ನು ಹೊರಗಟ್ಟಿದರೆ ?''

''ಏನು ಹುಚ್ಚ ಇದ್ದೀಯಾ ನೀನು. ಯಾವೊಬ್ಬನು ಸಾವಿರಾರು ರೂಪಾಯಿಗಳನ್ನು ವ್ಯಯಿಸಿ ಹೆಂಗಸೋ ರ್ವಳನ್ನು ತೆಕ್ಕೆಗೆ ತರಬಲ್ಲನೆ ?''

ಗಂಗು ಕವಿಯಂತೆ ಉಲ್ಲಾಸಭರಿತನಾಗಿ ''ಎಲ್ಲಿ ಪ್ರೀತಿ ಇರುವುದಿಲ್ಲವೋ ಅಲ್ಲಿ ಹೆಂಗಸು ಇರಲಿಕ್ಕೆ ನೀವು ಭಾವಿಸ ಬೇಕಾ ? ನೀವು ಕೇವಲ ಊಟ ಮತ್ತು ವಸತಿಯಿಂದ ಒಬ್ಬ ಹೆಂಗಸನ್ನು ಗೆದಿಯಲಾರಿರಿ. ಆಕೆಯನ್ನು ವಿವಾಹ ಆದವರು ವಿಧವೆ ಎಂಬ ದೊಡ್ಡ ದಯೆ ತೋರಿದ್ದೇವೆಂದು, ಎಲ್ಲಾ ಬಿಟ್ಟಿ ಚಾಕರಿಗಾಗಿ ಎಂಬಂತೆ ಬಳಸಿದರು. ಇನ್ನೊಂದು ಕಡೆ ಸ್ವಾಮಿ, ಅವಳಿಗೆ ಮಲರೋಗ ಬರುತ್ತೆ, ಕೆಲವೊಮ್ಮೆ ಅಸಂಬದ್ಧ ರೀತಿಯಲ್ಲಿ ಮಾತನಾಡುತ್ತಾಳೆ ಮತ್ತು ಎಚ್ಚರತಪ್ಪಿ ಬೀಳುತ್ತಾಳೆ. ಜನರು ಹೇಳುತ್ತಾರೆ. – ಆಕೆಗೆ ಪಿಶಾಚಿ ಹಿಡಿದಿದೆ ಎಂದು.''

''ಮತ್ತೆ ನೀನು ಅಂಥ ಒಬ್ಬ ಹೆಂಗಸನ್ನು ಮದುವೆ ಯಾಗುತ್ತೀ ?'' ಎಂದು ಕೇಳಿದೆ. ''ಸಮಸ್ಯೆ ಮಾಡಿಕೊಳ್ಳುತ್ತಿ ಎಂದು ನಿನಗನ್ನಿಸುವುದಿಲ್ಲವೆ ?''

ಹುತಾತ್ಮನಂತೆ ಗಂಗು ಉತ್ತರಿಸಿದ : ''ದೈವೇಚ್ಛೆ. ಆಕೆಯನ್ನು ಪಡೆದರೆ ನನಗೆ ಒಳಿತಾಗಬಹುದು.''

''ಅಂದರೆ ನೀನು ಅಂತಿಮವಾಗಿ ನಿರ್ಧರಿಸಿದ್ದಿ''

''ಹೌದು ಸಾರು.''

''ಸರಿ ಹಾಗಾದರೆ ಇದಕ್ಕಾಗಿ ನಾನು ನಿನ್ನ ರಾಜೀನಾಮೆಯನ್ನು ಒಪ್ಪಿದ್ದೇನೆ.''

ಸಾಮಾನ್ಯವಾಗಿ ನನಗೆ ಕಂದಾಚಾರಗಳಲ್ಲಿ ಮತ್ತು ಅರ್ಥವಿಲ್ಲದ ಆಚರಣೆಗಳಲ್ಲಿ ನಂಬಿಕೆ ಇಲ್ಲ. ಅದರಲ್ಲೂ ಈ ವಿಷಯಕ್ಕೆ ಸಂಬಂಧಪಟ್ಟಂತೆ ಈ ಹೆಂಗಸಿನ ಜೊತೆಗೆ ಏಗುವ ಸಂಗತಿ ಕುರಿತು ಅಪಾಯವೇ ಇದೆ. ಇದು ಎಲ್ಲಾ ಸಮಸ್ಯೆಗಳ ಮೂಲವಾಗಬಹುದು. ಈ ಹೆಂಗಸನ್ನು ವಿವಾಹವಾಗಬಯಸುವ ಗಂಗು ಹಸಿದ ಹದ್ದಿನಂತೆ ಕಾಣುತ್ತಾನೆ. ಒಣತುಂಡು ಆಹಾರ ಹೇಗಿದ್ದರೇನು ಎಂಬ ಚಿಂತೆ ಇಲ್ಲ. ಒಂಟಿಯಾಗಿರುವುದು ಸರಿ ಎಂದು ಅನಿಸಿತು.

ಐದು ತಿಂಗಳು ಗತಿಸಿದವು. ಗಂಗು ಗೋಮತಿಯನ್ನು ಮದುವೆಯಾಗಿ ಅದೇ ಓಣಿಯ ಹುಲ್ಲು ಹೊದಿಸಿದ ಗುಡಿಸಿಲಿನಲ್ಲಿ ವಾಸಿಸುತ್ತಿದ್ದ. ಅವನು ಹಾಗೂ ಹೀಗೂ ಗಳಿಕೆಗೆ ಇಳಿದ. ಅವನು ಸಿಕ್ಕಾಗಲೆಲ್ಲಾ ಕ್ಷೇಮ ಸಮಾಚಾರ ವಿಚಾರಿಸುವುದನ್ನು ಕೈಬಿಟ್ಟೆ. ಅವನ ಬಾಳು ನನ್ನ ಆಸಕ್ತಿಯ ಮೂಲವಾಯಿತು. ಅಂತ್ಯ ಎಂದೋ ಎಂಬ ಆಸಕ್ತಿ ಮುಂದು ವರಿಸುವ ತಾಳ್ಮೆ ನನಗುಳಿಯಲಿಲ್ಲ. ಆದಾಗ್ಯೂ ಆತನು ಖುಷಿಯಲ್ಲಿರುತ್ತಿದ್ದುದನ್ನು ಗಮನಿಸಿದೆ. ಅವನ ಮುಖಚರ್ಯೆಯಲ್ಲಿ ದುಃಖದ ಛಾಯೆ ಇರಲಿಲ್ಲ. ಅವನು ದಿನಕ್ಕೊಂದು ರೂಪಾಯಿ ಗಳಿಸಲಾರಂಭಿಸಿದ. ಆತನ ಸಾಮಾನು ಖರೀದಿ ಮಾಡಿದ ನಂತರ ಹತ್ತು ಆಣೆಗಳಷ್ಟು ಉಳಿದಿತ್ತು. ಆ ಹತ್ತು ಆಣೆಯಲ್ಲಿ ಅದು ಯಾವುದೋ ಅಗೋಚರ ಶಕ್ತಿ ಇದ್ದು, ಆತನಿಗೆ ಸಂಪೂರ್ಣ ತೃಪ್ತಿ ಕೊಟ್ಟಿತ್ತು.

ಒಂದು ದಿವಸ ಗೋಮತಿ ಓಡಿ ಹೋದುದನ್ನು ಕೇಳಿದೆ. ಏಕೆಂದು ನನಗೆ ಗೊತ್ತಾಗಲಿಲ್ಲ, ಆದರೆ ಇದರಿಂದ ನನಗೆ ಸಂತೋಷವಾಯಿತು. ಆತನಿಗೆ ಇದೇನೂ ಅನಿಸಲಿಲ್ಲ. ಅದೇ ನನ್ನ ಹೊಟ್ಟೆ ಉರಿ. ನನ್ನದೇ ಸರಿ ಎಂದು ಸಂತೋಷವಾಯಿತು. ಆಕೆಯಿಂದ ಮೋಸಹೋದ ಗಂಡಂದಿರು ಹಿತಾಸಕ್ತರೆಂದು ಈತನಿಗೆ ಅರಿವಾಯಿತು. ಸಿಕ್ಕಷ್ಟೆ ಶಿವ ಅಂದುಕೊಂಡ ಮೂರ್ಖ ಈತ ಅಂದು ಕೊಂಡೆ. ಅವನನ್ನು ಭೇಟಿಯಾಗುವ ತಾಳ್ಮೆ ಉಳಿಯಲಿಲ್ಲ.

ಅಂದು ಮಧ್ಯಾಹ್ನ ಭೇಟಿಯಾಗಿದ್ದಾಗ ಅವನು ಸಂಪೂರ್ಣ ಕಲಕಿಹೋಗಿದ್ದ. ಅವನು ನನ್ನನ್ನು ಕಂಡ ಕೂಡಲೇ ಅಳುವುದಕ್ಕೆ ಶುರುಮಾಡಿದ. ''ಬಾಬೂಜಿ ಗೋಮತಿ ನನ್ನನ್ನು ಬಿಟ್ಟು ಹೋದಳು'' ಎಂದ.

ನಾನು ಕರುಣೆ ತೋರಿಸುತ್ತಾ ಹೇಳಿದೆ, ''ಪ್ರಾರಂಭ ದಲ್ಲೇ ಹೇಳಿದೆ. ನೀನು ಅವಳಿಂದ ದೂರ ಇರು ಎಂದು. ಆದರೆ ನೀನು ನನ್ನ ಮಾತು ಕೇಳಲೇ ಇಲ್ಲ. ನಿನ್ನ ವಸ್ತುಗಳನ್ನು ತೆಗೆದುಕೊಂಡು ಹೋಗಿದ್ದಾಳೆಯೇ ?''

ಗಂಗು ತನ್ನ ಎದೆಯ ಮೇಲೆ ಕೈ ಇಟ್ಟು ನಾನು ದೇವರನ್ನೇ ನಿಂದಿಸುತ್ತಿದ್ದೇನೆಂದು ಹೇಳಿದ : ''ಹಾಗೆ ಹೇಳಬೇಡಿ ಬಾಬೂಜಿ ಅವಳು ಏನನ್ನೂ ಕೊಂಡೊಯ್ದಿಲ್ಲ ಅವಳ ವಸ್ತುಗಳು ಇನ್ನೂ ಅಲ್ಲೆ ಇವೆ. ಅವಳು ನನ್ನನ್ನೂ

ಬಿಟ್ಟುಹೋಗಲು ನನ್ನಿಂದ ಏನು ಕೊರತೆ ಕಂಡಳೋ ಗೊತ್ತಿಲ್ಲ. ನಾನವಳಿಗೆ ತಕ್ಕವನಾಗಿರಲಿಲ್ಲ, ಅವಳು ವಿದ್ಯಾವಂತೆ, ನಾನು ಸಂಪೂರ್ಣ ಅನಕ್ಷರಸ್ಥನಾಗಿದ್ದೆ. ನಾನು ಇನ್ನು ಸ್ವಲ್ಪ ದಿನ ಅವಳ ಜೊತೆಗಿದ್ದರೆ ನನ್ನನ್ನು ಒಬ್ಬ ಮನುಷ್ಯ ನನ್ನಾಗಿಸುತ್ತಿದ್ದಳು. ಬೇರೆಯವರ ದೃಷ್ಟಿಯಲ್ಲಿ ಅವಳು ಹೇಗೇ ಇರಲಿ, ನನಗಂತೂ ಖಂಡಿತ ದೇವತೆಯಾಗಿದ್ದಳು. ನನ್ನಲ್ಲೇನೋ ತಪ್ಪಿರಬೇಕು ಎಂದು ನನ್ನನ್ನು ತ್ಯಜಿಸಿದಳು.''

ಗಂಗೂನ ಮಾತುಗಳಿಂದ ನನಗೆ ತುಂಬಾ ಜಿಗುಪ್ಸೆ ಯಾಯಿತು. ಗೋಮತಿಯ ವಂಚನೆ ಕುರಿತು ಶತಾಯ ಗತಾಯ ದೂರುತ್ತಾನೆಂದು ನನ್ನ ಗ್ರಹಿಕೆಯಾಗಿತ್ತು. ಆದರೆ ಈ ಮೂರ್ಖ ತನ್ನ ದೃಷ್ಟಿಯನ್ನೇ ಕಳೆದುಕೊಂಡಿರಬೇಕು. ಅಥವಾ ಅವನು ತನ್ನ ಬುದ್ಧಿಮತ್ತೆಯನ್ನೇ ಕಳೆದುಕೊಂಡಿದ್ದ.

ಅರ್ಧಸತ್ಯದಲ್ಲಿ ನಾನು ಕೇಳಿದೆ ''ಅಂದಂತೆ, ಅವಳೇನೂ ತೆಗೆದುಕೊಂಡು ಹೋಗಿಲ್ಲ.''

''ಇಲ್ಲ ಒಂದು ಕವಡೆಯಷ್ಟೂ ಇಲ್ಲ.''

''ಮತ್ತೆ ನಿನ್ನನ್ನು ಅವಳು ತುಂಬಾ ಪ್ರೀತಿಸುತ್ತಿದ್ದಳು ಎನ್ನು.''

''ಇನ್ನೇನು ಹೆಚ್ಚಿಗೆ ಹೇಳಲಿ ಬಾಬೂಜಿ? ನಾನು ಸಾಯುವವರೆಗೂ ಅವಳನ್ನು ಮರೆಯಲಾರೆ.''

''ಆದಾಗ್ಯೂ ಅವಳು ನಿನ್ನನ್ನು ಬಿಡಲು ನಿರ್ಧರಿಸಿದಳು.''

''ಅದೇ ನನಗೆ ಆಶ್ಚರ್ಯವಾಗಿದೆ.''

''ಒಂದು ಹಳೆಯ ಗಾದೆ ಇದೆ. ನಿಂಗೊತ್ತಿಲ್ಲವೆ ? ಹೆಣ್ಣಿನ ಮತ್ತೊಂದು ಹೆಸರೇ ಚಂಚಲತೆ.''

''ದಯವಿಟ್ಟು ಹಾಗೆಂದು ಹೇಳಬೇಡಿ ಬಾಬೂಜಿ. ಅವಳ ಬಗ್ಗೆ ನಾನು ಒಂದು ಕ್ಷಣವೂ ಹೀಗೆಂದು ನಂಬಲಾರೆ.''

''ಹಾಗಾದರೆ ಹೋಗಿ ಅವಳನ್ನು ಹುಡುಕು, ಇನ್ನೂ ಅವಳ ಬಗ್ಗೆ ಆರ್ದ್ರತೆ ಇದ್ದರೆ.''

''ಹೌದು ಧಣಿ, ನಾನು ಅವಳನ್ನು ಹುಡುಕುವವರೆಗೆ ವ್ಯವಧಾನ ಇಲ್ಲ. ಅವಳೆಲ್ಲಿರುತ್ತಾಳೆಂದು ತಿಳಿಯುವುದಾದರೆ ಅವಳನ್ನು ತರದೇ ಬಿಡೆನು. ನಾನು ಜೀವನದಲ್ಲಿ ಬದುಕಿದ್ದೇ ಆದರೆ ನಿಮ್ಮನ್ನು ಮತ್ತೆ ಕಾಣುವೆ'' ಎಂದು ಹೇಳುತ್ತಾ ಹೊರಟುಹೋದ.

ಇದಾದ ನಂತರ ನಾನು ನೈನಿತಾಲ್‌ಗೆ ಹೋಗಿ ಒಂದು ತಿಂಗಳಾದ ನಂತರ ಮರಳಿದೆ. ಬಟ್ಟೆಯನ್ನು ಬಿಚ್ಚುತ್ತಿದ್ದಾಗ ನಾನು ಗಂಗುವನ್ನು ನೋಡಿದೆ. ಅವನು ಅದೇ ತಾನೆ ಜನಿಸಿದ ಹಸುಗೂಸುವಿನೊಂದಿಗೆ ನಿಂತಿದ್ದ. ಅವನು ಅತ್ಯಂತ ಖುಷಿ ಯಿಂದಿದ್ದ. ಕೃಷ್ಣನನ್ನು ಪಡೆದಿದ್ದ ನಂದ ಕೂಡ ಆ ರೀತಿಯ ಖುಷಿಯಿಂದಿರಲಿಲ್ಲವೇನೊ ! ಅವನ ಮುಖಭಾವ ಹಸಿದು ಕಂಗಾಲಾದ ಮನುಷ್ಯ ಮೃಷ್ಟಾನ್ನ ಮಾಡಿದಂತಿತ್ತು. ಧರ್ಮಾತ್ಮ ನಂತೆ ಪ್ರಶ್ನಿಸಿ ''ಗೋಮತಿಯ ಬಗ್ಗೆ ಏನಾದರೂ ತಿಳಿಯಿತೆ, ಅವಳನ್ನು ನೀನು ಹುಡುಕಲು ಹೋಗಿದ್ದೆಂದು ನಂಬಿರುವೆ ?'' ಎಂದೆ. ಸಂತೋಷ ಉಕ್ಕಿ ಹರಿದು ಆತ ಹೇಳಿದ : ''ನಾನು ಕೊನೆಗೂ ಅವಳನ್ನು ಕಂಡೆ ಬಾಬೂಜಿ, ಲಕ್ನೋದ ಮಹಿಳೆಯರ ಆಸ್ಪತ್ರೆಯಲ್ಲಿದ್ದಳು. ಅವಳೊಬ್ಬ ಮಿತ್ರನಿಗೆ ನನ್ನ ಖಿನ್ನತೆ ಕುರಿತು ಇದ್ದುದಾದರೆ, ನಾನಿಲ್ಲಿದ್ದೇನೆ ತಿಳಿಸು ಎಂದು ಹೇಳಿದ್ದಳು. ಇದನ್ನು ತಿಳಿದಾಕ್ಷಣ ಲಕ್ನೋಗೆ ಹೋದೆ. ಅವಳನ್ನು ಕರೆತಂದೆ. ಫಲಾಪೇಕ್ಷೆಯೆಂಬಂತೆ ಈ ಮಗುವನ್ನು ಪಡೆದಿದ್ದೇನೆ.'' ಹೊಸ ಪಾರಿತೋಷಕ ಗೆದ್ದ ಕ್ರೀಡಾಪಟು ವಿನಂತೆ ಆ ಮಗುವನ್ನು ಹೆಮ್ಮೆಯಿಂದ ಎತ್ತಿ ತೋರಿಸಿದ.

ನಾಚಿಕೆ ಇಲ್ಲದ ಅವನ ವರ್ತನೆಯಿಂದ ನನಗೆ ಆಶ್ಚರ್ಯ ವಾಯಿತು. ಅವನು ಗೋಮತಿಯನ್ನು ಮದುವೆಯಾಗಿ ಆರು ತಿಂಗಳೂ ಆಗಿಲ್ಲ, ಆದಾಗ್ಯೂ ಅವನು ಹೆಮ್ಮೆಯಿಂದ ಆ ಮಗುವನ್ನು ಪ್ರದರ್ಶಿಸಿದ. ನಾನು ಚುಚ್ಚುವ ರೀತಿಯಲ್ಲಿ ಹೇಳಿದೆ : ''ಓ ಹಾಗಾದರೆ ನೀನು ಮಗುವನ್ನು ಪಡೆದೆ. ಅದಕ್ಕಾಗಿ ಬಹುಶಃ ಅವಳು ಓಡಿಹೋದಳು. ಇದು ಖಂಡಿತವಾಗಿ ನಿನ್ನ ಮಗುವೆ ?''

''ನನ್ನದೇಕೆ ಬಾಬೂಜಿ. ಇದು ದೇವರದು.''

''ಇದು ಲಕ್ನೋದಲ್ಲಿ ಜನಿಸಿದ್ದು ಹೌದಲ್ಲವೆ ?''

''ಹೌದು ಬಾಬೂಜಿ ನಿನ್ನೆಯಷ್ಟೆ ಇದಕ್ಕೆ ಒಂದು ತಿಂಗಳಾಯಿತು.''



''ನಿನ್ನ ಮದುವೆ ಆಗಿ ಎಷ್ಟು ಕಾಲವಾಯಿತು ?''

''ಈಗ ಇದು ಏಳನೆಯ ತಿಂಗಳು.''

''ಹಾಗಾದರೆ ಈ ಮಗು ನಿನಗೆ ಆರು ತಿಂಗಳೊಳಗೆ ಹುಟ್ಟಿದೆ, ಅಲ್ಲವೆ ?''

''ಹೌದು'', ವಿಚಲಿತನಾಗದೇ ಗಂಗು ಹೇಳಿದ.

''ಇನ್ನೂ ಕೂಡ ಇದನ್ನು ನಿನ್ನ ಮಗುವೆಂದು ನಿರ್ಧರಿಸಿದ್ದಿ.''

''ಹೌದು ಹೌದು.''

''ನಿನ್ನ ಬುದ್ಧಿ ಸ್ತಿಮಿತತೆಯಲ್ಲಿದೆಯಾ'' ಎಂದು ಕೇಳಿದೆ. ಅವನು ನನ್ನನ್ನು ಬೇಕಂದೇ ಅಪಾರ್ಥ ಮಾಡಿಕೊಂಡನೋ ಅಥವಾ ನಾನು ಹೇಳಲು ಪ್ರಯತ್ನಿಸಿದ್ದನ್ನು ಅರ್ಥಮಾಡಿ ಕೊಳ್ಳಲಿಲ್ಲವೋ ಸರಿಯಾಗಿ ನನಗೆ ಗೊತ್ತಾಗಲಿಲ್ಲ.

''ಅವಳು ಕಡುಕಷ್ಟದಲ್ಲಿ ಇದ್ದಳು'' ಎಂದು ಗಂಗೂ ಅದೇ ಧ್ವನಿಯಲ್ಲಿ ಹೇಳಿದ ''ಬಾಬೂಜಿ ಅವಳಿಗೆ ಇದು ನಿಜವಾದ ಹೊಸಜೀವನ. ಮೂರು ಹಗಲು ಅಹೋ ರಾತ್ರಿ ಅವಳು ನೋವಿನಿಂದ ನಲುಗಿದ್ದಳು. ಓ ಅದು ಸಹಿಸಲಸದಳ !''

ಈ ಸಂಗತಿಯೇ ನನ್ನನ್ನು ವಿಚಲಿತಗೊಳಿಸಿ ಹೇಳಿದೆ, ''ಈ ರೀತಿ ಕೇಳಿದ್ದು ನಾನು ಮೊಟ್ಟಮೊದಲು, ಮದುವೆಯಾಗಿ ಆರು ತಿಂಗಳೊಳಗೆ ಒಂದು ಕೂಸು ಹುಟ್ಟುತ್ತದೆಂದು.''

ನನ್ನ ಮಾತನ್ನು ಕೇಳಿ ಗಂಗು, ನನಗಿದೇನೂ ವಿಷಾದನೀಯವಲ್ಲ ಎಂದ. ಈ ಒಂದು ಕಾರಣಕ್ಕಾಗಿ ಗೋಮತಿ ಮನೆಬಿಟ್ಟು ಹೋಗಿದ್ದಳು. ''ನನ್ನನ್ನು ಇಷ್ಟಪಡದಿದ್ದರೆ, ನಿನ್ನಿಷ್ಟದಂತೆ ನೀನು ಬದುಕಬಹುದೆಂದು ನಾನವಳಿಗೆ ಹೇಳಿದ್ದೆ. ಆಕೆ ನನ್ನನ್ನು ಪ್ರೀತಿಸದಿದ್ದರೆ ಏನಾಯಿತು. ಮಗುವಿನಿಂದ ಬೇರ್ಪಡೆ ಆಗಕೂಡದು. ಆ ಮಗುವನ್ನು ನನ್ನದೆಂದು ಪ್ರೀತಿಸುವೆ. ಯಾರೇ ಆಗಲಿ ಕಟಾವು ಮಾಡದೇ ದಕ್ಕಿದ ಫಸಲು, ನಂತರ ಬಿತ್ತಿದವರ್ಯಾರೆಂದು ಮರೆಯಕೂಡದು.''

ಆತ ಸಂತೃಪ್ತ ನಗೆ ನಕ್ಕ.

ನನಗೆ ಗಂಗೂನ ಭಾವನೆಗಳು ತಟ್ಟಿದವು ಮತ್ತು ಅವನಿಗಿಂತ ನಾನು ಅಯೋಗ್ಯ ಎಂದುಕೊಂಡೆ.

ನಾನು ಕೈ ಚಾಚಿ ಗಂಗೂನಿಂದ ಮಗುವನ್ನು ಪಡೆದು ಅದಕ್ಕೆ ಮುತ್ತು ಕೊಟ್ಟೆ. ''ಬಾಬೂಜಿ ನೀವು ಒಳ್ಳೆತನದ ಸಾಕಾರಮೂರ್ತಿ, ನಾನು ಪದೇ ಪದೇ ಗೋಮತಿ ಹತ್ತಿರ ತಮ್ಮ ಕುರಿತು ಹೇಳಿದ್ದೇನೆ, ಅವಳು ಬಂದು ನಿಮ್ಮನ್ನು ಗೌರವಿಸಲೆಂದು. ಆದರೆ ಆಕೆ ನಾಚಿದ್ದಾಳೆ (ಹಮ್ಮಿನವಳು).''

ಸಾಕಾರಮೂರ್ತಿಯಾದ ನಾನು, ನನ್ನ ಮಧ್ಯಮ ವರ್ಗದ ಧೋರಣೆ, ಆತನ ಧೈರ್ಯ ಮತ್ತು ಪ್ರಾಮಾಣಿಕತೆಯ ಮುಂದೆ ನಾಚಿದೆ.

''ನೀನೇ ಒಳ್ಳೆತನದ ಮರ್ಯಾದ ಪುರುಷ. ಈ ಮಗು ಅದರ ಹಿರಿಮೆ. ನಾನು ಗೋಮತಿಯನ್ನು ಭೇಟಿಯಾಗ ಬೇಕಾಗಿದೆ'' ಎನ್ನುತ್ತಾ ಗಂಗೂನ ಮನೆಗೆ ಹೋದೆವು.

ಹಿಂದಿ ಮೂಲ : **ಪ್ರೇಮ್‌ಚಂದ್**
ಆಂಗ್ಲ ಅನುವಾದ : **ಮದನ್ ಗುಪ್ತಾ**
ಕನ್ನಡಾನುವಾದ : **ತಂಬ್ರಹಳ್ಳಿ ರಾಮನಮಲಿ**
**ಹರಪನಹಳ್ಳಿ**



# ಸಣ್ಣ ಅಲೆಗಳ ದೊಡ್ಡ ಸಾಗರ

ಇತ್ತೀಚೆಗೆ ಡಿಸೆಂಬರ್‌ನಲ್ಲಿ ನವಕರ್ನಾಟಕ ಪ್ರಕಾಶನವು ನಡೆಸಿದ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತರನ್ನು ಕುರಿತ ಬರಹಗಳ ಬಿಡುಗಡೆ ಸಮಾರಂಭದಲ್ಲಿ ನನಗೆ ಮಾತನಾಡುವ ಸಂದರ್ಭ ಒದಗಿದಾಗ 'ಇಲ್ಲಿಯವರೆಗೂ ಒಬ್ಬ ಲೇಖಕಿಗೆ ಮಾತ್ರ ಈ ಪ್ರಶಸ್ತಿ ಬಂದಿದೆ. ಸುಮಾರು ಐದಾರು ದಶಕಗಳಿಂದಲೂ ಪ್ರಬುದ್ಧವಾದ ಮಹಿಳಾ ಸಾಹಿತ್ಯ ರಚನೆಯಾಗಿರುವ ಸಂದರ್ಭದಲ್ಲಿ ಹೆಚ್ಚು ಪ್ರಾತಿನಿಧಿಕವಾಗುವಂತೆ ಈ ಪ್ರಶಸ್ತಿ ಮಹಿಳೆಯರಿಗೆ ಬಾರದಿರುವ ಸ್ಥಿತಿಯ ಹಿಂದಿನ ಲಿಂಗ ರಾಜಕೀಯವೇನಿರಬಹುದು ? ವೈದೇಹಿಯಂತಹ ಲೇಖಕಿಗೆ ಇಲ್ಲಿಯವರೆಗೂ ಈ ಪ್ರಶಸ್ತಿ ಬಾರದಿರುವುದು ನನಗೆ ಅಚ್ಚರಿ ಮೂಡಿಸುತ್ತಿದೆ' ಎಂದಿದ್ದೆ. ಅದಾದ ಹದಿನೈದು ದಿನಕ್ಕೆ ವೈದೇಹಿಗೆ ಈ ಪ್ರಶಸ್ತಿ ದೊರೆತ ಸುದ್ದಿ ಕೇಳಿದ ನನಗೆ ಆದ ಸಂತೋಷ ಅಷ್ಟಿಷ್ಟಲ್ಲ. ತಕ್ಷಣ ನನ್ನ ಸ್ನೇಹಿತರೂ ಈ ವಿಷಯವಾಗಿ ನನ್ನೊಡನೆ ಈ ಸಂತೋಷವನ್ನು ಹಂಚಿಕೊಂಡರು. ಆ ಸಂಭ್ರಮದಲ್ಲಿ ವೈದೇಹಿಗೆ ಅಭಿನಂದಿಸಲು ಫೋನ್ ಮಾಡಿದಾಗ ಸಂತೋಷದಿಂದ ಮಾತನಾಡಿದ ವೈದೇಹಿ ನೆನಪಿಸಿಕೊಂಡದ್ದು, ಹದಿನಾರು ವರ್ಷಗಳ ಹಿಂದೆ, ಅವರು ಅನುಪಮಾ ಪ್ರಶಸ್ತಿ ಪಡೆದ ಸಂದರ್ಭದಲ್ಲಿ ನಾನು ಅವರೊಂದಿಗೆ ಆಕಾಶವಾಣಿಗೆಂದು ನಡೆಸಿದ ಸಂದರ್ಶನವನ್ನು.

ಫೋನಿನಲ್ಲಾಗಲಿ ಅಥವಾ ಮುಖತಃ ವೈದೇಹಿಯವರೊಡನೆ ಮಾತನಾಡುವುದಾಗಲಿ ಅದೊಂದು ಸೊಗಸು. ಅದೊಂದು ಕಥೆ ಓದಿದಂತೆ; ಕವನ ಕೇಳಿದಂತೆ; ನಾಟಕ ನೋಡಿದಂತೆ. ಮಾತನಾಡುವಾಗ ಅವರು ತೋರುವ ಪ್ರೀತಿ, ಸಲಿಗೆ ಅಕ್ಕ-ತಂಗಿಗೆ ತೋರುವಂತಹುದು. ಆ ವಿಶ್ವಾಸದ ವಲಯದಲ್ಲಿ ಅವರು ಬಿಚ್ಚಿಕೊಳ್ಳುವ ಪುಟ್ಟ ಪುಟ್ಟ ಅನುಭವಗಳು ದೊಡ್ಡ ಅನುಭವ ಪ್ರಪಂಚವನ್ನು ನಮ್ಮ ಮುಂದಿಡುತ್ತವೆ. ಪ್ರಶಸ್ತಿ ಪಡೆಯಲು ದೆಹಲಿಗೆ ಹೋಗುವ ಮುನ್ನಿನ ದಿನ ವೈದೇಹಿ ಅದೆಷ್ಟು ಬಿಡುವಿಲ್ಲದ ಚಟುವಟಿಕೆಗಳಲ್ಲಿ ಮುಳುಗಿದ್ದರು! ಅವರ ಕುಟುಂಬದವರ ಸಂಭ್ರಮಾಚರಣೆ, ಸಂಜೆ ಅವರನ್ನು ಕುರಿತ ವಾಚಿಕೆಯ ಬಿಡುಗಡೆ, ಸನ್ಮಾನ, ಸಂವಾದ – ಈ ಎಲ್ಲಾ ಕಾರ್ಯಕ್ರಮಗಳ ನಡುವೆ 'ನನಗೆ ಅರ್ಧ ಗಂಟೆ ಸಮಯ ಕೊಡಿ' ಎಂದಾಗ ಪ್ರೀತಿಯಿಂದ ಒಪ್ಪಿಕೊಂಡರು. ಊರಿನಿಂದ ಆಗತಾನೇ ಬಂದು ಇಸ್ರೋ ಲೇಔಟ್‌ನಲ್ಲಿರುವ ತಂಗಿಯ ಮನೆ ಸೇರಿದ್ದ ಅವರ ತಂಗಿಯ ಮನೆಗೆ ಲಗ್ಗೆಯಿಟ್ಟು ಅವರೊಡನೆ ಪಡೆದುಕೊಂಡ ಸಂದರ್ಶನವಿದು.

ಸಂದರ್ಶನ : **ಡಾ|| ಎನ್. ಗಾಯತ್ರಿ**

ಚಿತ್ರಗಳು : **ಬಿ. ಮೈತ್ರಿ**

ಕಥೆ, ಕವನ, ಕಾದಂಬರಿ, ಪ್ರಬಂಧ, ಅನುವಾದ, ಆತ್ಮಚರಿತ್ರೆಗಳ ಲಿಪಿಕಾರ್ತಿ – ಹೀಗೆ ಹತ್ತು ಹಲವಾರು ಪ್ರಕಾರಗಳಲ್ಲಿ ಕಳೆದ ಮೂರು ದಶಕಗಳಿಂದಲೂ ವಿಪುಲವಾಗಿ ಬರವಣಿಗೆಯಲ್ಲಿ ತೊಡಗಿಕೊಂಡ ಕನ್ನಡದ ಪ್ರಮುಖ ಲೇಖಕಿ ವೈದೇಹಿ ಕನ್ನಡದ ಎಲ್ಲಾ ಪ್ರತಿಷ್ಠಿತ ಪ್ರಶಸ್ತಿಗಳನ್ನು ಈಗಾಗಲೇ ತಮ್ಮ ಮುಡಿಗೇರಿಸಿಕೊಂಡಿರುವರು. ಅವರ ಸಾಧನೆಯ ಹಾದಿಯಲ್ಲಿ ವೈದೇಹಿಯವರಿಗೆ ಇದೇ ಫೆಬ್ರವರಿ ೧೬ರಂದು ದೆಹಲಿಯಲ್ಲಿ ಅವರ 'ಕ್ರೌಂಚ ಪಕ್ಷಿಗಳು' ಕಥಾ ಸಂಕಲನಕ್ಕಾಗಿ ಈ ಬಾರಿಯ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪ್ರದಾನವಾದದ್ದು ಅವರ ಕಿರೀಟಕ್ಕೆ ಮತ್ತೊಂದು ಗರಿ ಮುಡಿಸಿದಂತಾಗಿದೆ. ಇದು ಕನ್ನಡಿಗರೆಲ್ಲರಿಗೂ ಸಂತೋಷದ, ಹೆಮ್ಮೆಯ ಸಂಗತಿ. ಈ ಸಂದರ್ಭದಲ್ಲಿ ಅವರೊಡನೆ 'ಹೊಸತು' ನಡೆಸಿದ ಚುಟುಕು ಸಂದರ್ಶನವನ್ನು ಇಲ್ಲಿ ಪ್ರಕಟಿಸುತ್ತಿದ್ದೇವೆ.

**ಹೊಸತು** : ನಮಸ್ಕಾರ, ವೈದೇಹಿಯವರೇ, ನಿಮಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಬಹುಮಾನ ಬಂದದ್ದು ನಮಗೆಲ್ಲಾ ತುಂಬ ಸಂತೋಷ. 'ಹೊಸತು' ಪರವಾಗಿ ಅಭಿನಂದನೆಗಳು.

**ವೈದೇಹಿ** : ನಿಮ್ಮ ಸಂತೋಷ, ನನ್ನ ಸಂತೋಷ ಕೂಡ. ವಂದನೆಗಳು.

**ಹೊಸತು** : ನಿಮ್ಮ ತಂದೆ ವಕೀಲರಾಗಿದ್ದರು ಅಂತ

ತಿಳಿದಿದ್ದೀವಿ. ಹಾಗಾದರೆ ನಿಮ್ಮಲ್ಲಿ ಸಾಹಿತ್ಯಿಕ ವಾತಾವರಣ ಮೂಡಿದ್ದು ಹೇಗೆ ?

**ವೈದೇಹಿ** : ನನ್ನ ದೊಡ್ಡ ಅಣ್ಣ ಒಬ್ಬಿದ್ದ. ಅವನು ಜೆ.ಎನ್.ಯು.ನಲ್ಲಿ ಇಂಗ್ಲಿಷ್ ಪ್ರೊಫೆಸರ್ ಆಗಿದ್ದ. ತುಂಬ ಓದ್ಕೊಂಡಿದ್ದ. ನಂತರದ ಇನ್ನೊಬ್ಬ ಅಣ್ಣ ಅವನು ತುಂಬ ಓದುತ್ತಿದ್ದ. ಈಗಲೂ ನನಗೆ ಅವನು ಓದುತ್ತಾ ಕುಳಿತಿರುವ ದೃಶ್ಯವೇ ಕಣ್ಣಮುಂದೆ ಬರುತ್ತದೆ. ಮೂರನೆಯ ಅಣ್ಣನಂತೂ ನೇರವಾಗಿ ಸಾಹಿತ್ಯಕ್ಕೇ ಬಂದುಬಿಟ್ಟ. ಕುಂದಾಪುರದಲ್ಲಿ ಕನ್ನಡ ಸಂಘ ಕಟ್ಟಿ, ಕನ್ನಡದ ಕಾರ್ಯಕ್ರಮಗಳನ್ನು ಮಾಡುತ್ತಿದ್ದ. ನಂತರ ಅವನು ವಕೀಲನಾದರೂ ಕನ್ನಡದ ಕೆಲಸ ನಿಲ್ಲಿಸಲಿಲ್ಲ. ಅಪ್ಪ, ಅಣ್ಣ, ಅವರೆಲ್ಲಾ ಯಾವಾಗಲೂ ಶೇಕ್ಸ್‌ಪಿಯರ್, ಬರ್ನಾರ್ಡ್ ಷಾ ಹಾಗೇ ಹೀಗೆ ಅಂತ ಮಾತಾಡುತ್ತಿದ್ದರೆ, ಅವೆಲ್ಲಾ ಪೂರ್ತಿ ಅರ್ಥ ಆಗದಿದ್ದರೂ ಕೇಳಿಸಿಕೊಳ್ಳುತ್ತಿದ್ದೆ. ಅಲ್ಲದೆ ಅದರ ಬಗ್ಗೆ ಏನೋ ಒಂದು ವಿಸ್ಮಯ, ಅದರೊಳಗೆ ಹೋಗಬೇಕು ಅಂತ ಅನ್ನಿಸುತ್ತಿತ್ತು.

**ಹೊಸತು** : ಅಂದ್ರೆ, ನಿಮ್ಮ ಬರವಣಿಗೆಗೆ ಒಂದು ಒಳ್ಳೆಯ ಸಾಹಿತ್ಯಿಕ ವಾತಾವರಣವೇ ಹಿನ್ನೆಲೆಯಾಗಿದೆ.

**ವೈದೇಹಿ** : ಮುಖ್ಯವಾಗಿ ಮನಸ್ಸಲ್ಲಿ ಒಂದು ಅಕ್ಷರ ಮೂಡಬೇಕು, ಅದು ಸಾಹಿತ್ಯ ಆಗಿ ಹೊರಹೊಮ್ಮುತ್ತೆ. ಈಗ ಇಂತಹ ಯಾವುದೇ ಪರಿಸರ ಇಲ್ಲದೆಯೂ ಬರವಣಿಗೆ ಮಾಡಿದವರು ಇಲ್ವಾ ? ಬ್ಲಾಕ್ ರೈಟರ್ಸ್‌ಗೆ, ದಲಿತ ಸಾಹಿತಿಗಳಿಗೆ ಯಾವ ಪರಿಸರ ಇದೆ ? ಅನುಭವಕ್ಕೆ ಅಕ್ಷರ ಮೂಡಬೇಕು ಅಷ್ಟೇ. ಆಗ ಬರವಣಿಗೆ ತಂತಾನೇ ಬರುತ್ತದೆ.

**ಹೊಸತು** : ನೀವು ಕಥೆ, ಕವನ, ಕಾದಂಬರಿ, ಅನುವಾದ, ಪ್ರಬಂಧ... ಹೀಗೆ ಬಹುಪಾಲು ಎಲ್ಲಾ ಪ್ರಕಾರಗಳಲ್ಲೂ ಬರೆದಿದ್ದೀರಿ. ಇವುಗಳಲ್ಲಿ ನಿಮಗೆ ಯಾವುದು ತುಂಬ ಇಷ್ಟ ?

**ವೈದೇಹಿ** : ನನಗೆ ಎಲ್ಲವೂ ಇಷ್ಟ. ಬರೆಯೋದೆ ನನಗೆ ಇಷ್ಟ. ಈಗ ಮನಸ್ಸಿನಲ್ಲಿ ಒಂದು ವಿಚಾರ ಹೊಳೆದು ಬರೆಯೋಕೆ ಹೋಗುತ್ತೀನಿ. ಆಗ ಆ ವಿಚಾರ ಇಷ್ಟವಾಗುತ್ತದೆ. ಆಗ ಅದು ಮುಗಿದ ತಕ್ಷಣ ಬೇರೇನೆ ರೀತಿ ಬರೀಲಿಕ್ಕೆ ನನಗೆ ಅಡ್ಡಿಯಿಲ್ಲ. ಹಾಗಾದ್ದರಿಂದ ಒಂದು ಹೆಚ್ಚು, ಒಂದು ಕಮ್ಮಿ ಅಂತ ಯಾವುದೂ ಇಲ್ಲ.

**ಹೊಸತು** : ಅಂದ್ರೆ, ವಸ್ತುವೇ ಅದರ ಸ್ವರೂಪ ನಿರ್ಧರಿಸುತ್ತೆ, ಅಂತ ಹೇಳ್ತೀರಾ ?

**ವೈದೇಹಿ** : ಹೌದು. ಈಗ ಒಂದು ಕಾವ್ಯದ ಫ್ಲಾಷ್ ಒಂದು ಹೊಳೆಯುತ್ತೆ. ಅದು ಕವನವಾಗಿಬಿಡುತ್ತೆ. ಇನ್ನೂ ಹೇಳಬೇಕೆಂದರೆ ನನ್ನ ಭಾಷೆಯೇ ಆ ಪಾತ್ರವನ್ನು ಕಟ್ಟಿಕೊಡುತ್ತೆ. ನಾನು ಎರಡು ಮೂರು ಭಾಷೇಲಿ ಬರಿತೀನಿ, ನೋಡು. ಒಂದು ಅಮ್ಮನ ಭಾಷೆ, ಇನ್ನೊಂದು ಗಂಡನ ಭಾಷೆ, ಮತ್ತೊಂದು ಕುಂದಾಪುರದ ಭಾಷೆ. ನನ್ನ 'ಅಕ್ಕು' ಇದಾಳಲ್ಲಾ, ಅವಳದು ಅಮ್ಮನ ಭಾಷೆ; ವಾಣಿಮಾಯಿ, ಅಮ್ಮಚ್ಚಿ ಅವರದು ಕುಂದಾಪುರದ ಭಾಷೆ, ಇನ್ನು 'ಒಗಟುಗಳು'ನಲ್ಲಿ ಇವರ, ಅಂದ್ರೆ ಶಿವಮೊಗ್ಗದ, ಹಳೇ ಮೈಸೂರಿನ ಭಾಷೆ. ಮತ್ತೆ, ಶಾಕುಂತಲೆಯದು ಕಾವ್ಯ ಭಾಷೆ. ನನ್ನಲ್ಲಿ ಮೂಡುವ ಸುಪ್ತ ಭಾಷೆಯೇ ವಸ್ತುವನ್ನು ನಿರ್ಧರಿಸುತ್ತೆ. ಒಂದು ರೀತಿಯಲ್ಲಿ ಭಾಷೆಯೇ ಸ್ವರೂಪವನ್ನು ಪಲ್ಲಟ ಮಾಡುತ್ತದೆ. ಅದು ನನಗೇ ಗೊತ್ತಾಗಲ್ಲ. ಅದೊಂದು ರೀತಿಯ ಆವಾಹನೆಯಾದ ಹಾಗೆ.

**ಹೊಸತು** : ನೀವು ನಿಮ್ಮ ಬರಣಿಗೆಗೆ ಯಾವ ಮಾದರಿಯನ್ನು, ಯಾವ ಪರಂಪರೆಯನ್ನು ಗುರುತಿಸಿಕೊಂಡ್ರಿ ?

**ವೈದೇಹಿ** : ನಾನು ಆರಂಭ ಮಾಡಿದಾಗ, ಹೈಸ್ಕೂಲಿನ ದಿನಗಳಲ್ಲಿ ನನ್ನನ್ನು ಮೊದಲು ಎಳೆದುಕೊಂಡು ಬಂದಿದ್ದು ತ್ರಿವೇಣಿಯೇ. ಅವರ ಬೆಕ್ಕಿನ ಕಣ್ಣು, ತೆರೆದ ಬಾಗಿಲು ಕಾದಂಬರಿಗಳು, ಎಂ. ಕೆ. ಜಯಲಕ್ಷ್ಮಿ, ಎಂ. ಕೆ. ಇಂದಿರಾ – ಇವರ ಕಾದಂಬರಿಗಳು ಹಾಗೂ ಅವರ ಭಾಷೆಯೇ ನನ್ನದೂ ಆಯಿತು. ಆರಂಭದಲ್ಲಿ ನಾನು ಗೀಚಿದ ಒಂದೆರಡು ಕತೆಗಳೂ ಇದೇ ಭಾಷೆಯಲ್ಲಿವೆ. ನನಗೆ ಕನ್ನಡವನ್ನು ಪರಿಚಯಿಸಿದವರು ಈ ಲೇಖಕಿಯರೇ.

ಸ್ವಲ್ಪ ದೊಡ್ಡವಳಾದ ಮೇಲೆ, ನಾನು ಓದುತ್ತಾ ಓದುತ್ತಾ ಶಿವರಾಮ ಕಾರಂತರ ಕಾದಂಬರಿಗಳನ್ನು ಓದಲಿಕ್ಕೆ ಆರಂಭಿಸಿದಾಗ 'ಅರೇ ಇದರಲ್ಲಿ ಇರುವ ಪಾತ್ರಗಳೆಲ್ಲಾ ನನ್ನ ಸುತ್ತಮುತ್ತಲೇ ಇದಾರೆ. ಅದೇ ಭಾಗೀರಥಿ, ಸರಸೋತಿ... ಇವರೆಲ್ಲಾ ನಾ ದಿನನಿತ್ಯ ನೋಡುವವರೇ. ಅವರು ಆಡುವ ಭಾಷೆ ನನ್ನದೇ ಅಂತ ಗುರುತಿಸಿಕೊಂಡೆ. ಆಮೇಲೆ ನವ್ಯದವರು ಬಂದವರು. ಅನಂತಮೂರ್ತಿ, ಲಂಕೇಶ್ ಅವರು ಬಂದರು. ಹಾಗೇ ಅದೊಂದು ದೊಡ್ಡ ಸಾಗರ...

**ಹೊಸತು** : ನೀವು ನಾಟಕಗಳನ್ನು ಅನುವಾದಿಸಿದೀರ. ಹಾಗೇ ನಾಟಕದಲ್ಲಿ ಅಭಿನಯ ಅಂತ ರಂಗದ ಮೇಲೆ ಬಂದದ್ದುಂಟಾ ?

**ವೈದೇಹಿ** : ನಿಜ ಹೇಳಬೇಕೆಂದರೆ, ಸ್ಕೂಲಿನಲ್ಲಿ ನಾಟಕ ನೋಡಿದ್ದನ್ನು ಬಿಟ್ಟರೆ, ಮದುವೆಗೆ ಮುಂಚೆ ನಾನು ಹೊರಗೆ ಹೋಗಿ ನಾಟಕ ನೋಡಿರಲಿಲ್ಲ. ನಮ್ಮ ಮನೆಯಲ್ಲಿ ಹೆಣ್ಣುಮಕ್ಕಳನ್ನು ಮನೆಯ ಒಳಗೇ ಬಹಳ ಮುಚ್ಚಟೆಯಾಗಿ ಬೆಳೆಸಿದ್ದರು. ಹಾಗೆ ಶಾಲೆ, ಕಾಲೇಜಿಗೆ ಹೋಗಿ ಹೀಗೆ ಮನೆ ಸೇರಿಬಿಡಬೇಕು. ಒಟ್ಟಿನಲ್ಲಿ ಮರ್ಯಾದೆಯಾಗಿ ಹೆಣ್ಣು ಮಕ್ಕಳನ್ನು ಮನೆ ದಾಟಿಸಿಬಿಟ್ಟರೆ ಸಾಕು, ಅಂತಂದುಕೊಂಡ ಜೀವನ ಅದು. ನಮ್ಮ ಮನೆಯಲ್ಲಿ ಮಾತ್ರವಲ್ಲ, ಆಗ ಎಲ್ಲರ ಮನೆಯಲ್ಲೂ ಹೆಣ್ಣುಮಕ್ಕಳೆಂದರೆ ಹೀಗೇನೆ. ಅದು ದುಡ್ಡಿನ ಕಾಲವಲ್ಲ. ನಾವೂ ಇದನ್ನು ಒಪ್ಪಿಕೊಂಡೇ ಬದುಕಿದವರು. ಆಮೇಲೆ ಮದುವೆಯಾದ ಮೇಲೆ ಶಿವಮೊಗ್ಗಕ್ಕೆ ಬಂದ ಮೇಲೆ ನನ್ನ ಪ್ರಪಂಚಾನೇ ಬದಲಾಯಿತು. ಶಿವಮೊಗ್ಗ ಎಂಥ ಊರು ? ಹಿಂಗೆ ಚಿಟುಕಿ ಹೊಡೆದರೆ ಸಂಗೀತಾ, ಆ ಕಡೆ ತಿರುಗಿದರೆ ನಾಟಕ, ಇಲ್ಲ ಸಾಹಿತ್ಯ. 'ಸತ್ತವರ ನೆರಳು' ನಾಟಕ ನೋಡಿದ್ದೇ ಆಗ. ನಂತರ ನೀನಾಸಂ ನಾಟಕಗಳು. ಕೌಟುಂಬಿಕ ಜೀವನವೇ ಬದಲಾದ್ದರಿಂದ ನನ್ನ ಆಸಕ್ತಿಗಳು ಚಿಗುರಿದವು. ನನ್ನ ಗಂಡನಿಗೆ ಸಾಹಿತ್ಯದ ಜೊತೆಗೆ ಸಂಗೀತದ ಆಸಕ್ತಿ ತುಂಬ. ಅವರು ನನ್ನನ್ನು ಎಲ್ಲಕ್ಕೂ ಕರ್ಕೊಂಡು ಹೋಗುತ್ತಿದ್ದರು. ತುಂಬ ಒಳ್ಳೇ ಗಂಡ ಕಣೇ.

**ಹೊಸತು** : ನಿಮ್ಮ 'ಕ್ರೌಂಚ ಪಕ್ಷಿಗಳು' ಕಥೆಯನ್ನು ಓದಿದಾಗ ಎಚ್. ವಿ. ಸಾವಿತ್ರಮ್ಮನವರ 'ದಮಯಂತಿ' ಕಥೆ ನೆನಪಿಗೆ ಬರುತ್ತದೆ. ನಿಮ್ಮ ನೇರ ಅನುಭವದ ಕಕ್ಷೆಗೆ



ಬರದಿದ್ದರೂ ಇಂತಹ ವಸ್ತು ನಿಮ್ಮ ಕಥಾ ಹಂದರದ ಒಳಗೆ ನುಸುಳಿದ್ದು ಹೇಗೆ? ಸ್ವಾತಂತ್ರ್ಯ ಕಾಲದ ದೇಶ ವಿಭಜನೆಯ ನಂತರ ಪತ್ರಿಕೆಯ ವರದಿಗಳನ್ನಾಧರಿಸಿದ ಅನುಭವದ ಹಿನ್ನೆಲೆಯಲ್ಲಿ ಸಾವಿತ್ರಮ್ಮನವರು ಈ ಕಥೆಯನ್ನು ರಚಿಸಿದ್ದರು. ನಿಮ್ಮದು ಹೇಗೆ?

**ವೈದೇಹಿ**: ನಾನು 'ದಮಯಂತಿ' ಓದಿಲ್ಲ, ಇಲ್ಲಿನ ಸಂದರ್ಭ ಕೂಡ ಬೇರೆ. ಅಯೋಧ್ಯಾ ಪ್ರಕರಣ ನಡೆದಾಗ ಮನಸ್ಸಿನಲ್ಲಿ ಬಹಳ ತಳಮಳವಾಗಿತ್ತು. ಮನಸ್ಸಿನ ಈ ತಳಮಳವನ್ನು ಹೇಗಾದರೂ ಹೊರಗೆ ಹಾಕಬೇಕಿತ್ತು. ಆ ಸಂದರ್ಭದಲ್ಲಿ ಕಮಲಾದೇವಿ ಚಟ್ಟೋಪಾಧ್ಯಾಯ ಅವರ ಆತ್ಮಕಥೆ 'ದಿ ಇನ್ನರ್ ರಿಸೆಸಸ್ ಎಂಡ್ ಔಟರ್ ಸ್ಪೇಸಸ್' ಪುಸ್ತಕ ಓದಲಿಕ್ಕೆ ಸಿಕ್ಕಿತು. ಅದನ್ನು ಓದಿದಾಗ ನನ್ನ ತಳಮಳಕ್ಕೆ ಸ್ಪಂದನೆ ಸಿಕ್ಕಿತು. ನನ್ನ ಊರಲ್ಲೇ ಹಳೇ ಘಟನೆಗೆ ಹೊಸ ಗಲಭೆ ಎಬ್ಬಿಸಿದರಲ್ಲಾ, ಅದು ನನ್ನನ್ನು ಬಹುವಾಗಿ ಕಲಕಿತು. ನಮ್ಮ ಮನೆತುಂಬ ಮಕ್ಕಳು. ಎಲ್ಲರೂ ಇದೇ ವಿಷಯ ಕುರಿತು ಚರ್ಚಿಸುತ್ತಿದ್ದೆವು. ಈ ನನ್ನ ಕತೆಯಲ್ಲಿ ಅಂತಹ ಹಲವಾರು ಸಂಗತಿಗಳು ಕೆಲಸ ಮಾಡಿವೆ. ಲಂಕೇಶ್ ಹೇಳುತ್ತಾರಲ್ಲಾ, ''ಬರವಣಿಗೆ ಅನ್ನೋದು ಗುಬ್ಬಚ್ಚಿ ಗೂಡು ಕಟ್ಟಿದ ಹಾಗೆ'' ಅಂತ. ಹಾಗೆ ನಾನು ಒಂದೊಂದು ಕಡ್ಡಿಯನ್ನು ಒಂದೊಂದು ಕಡೆಯಿಂದ ತಂದು ಈ ಕತೆ ಕಟ್ಟಿದೀನಿ. ಇದು ಬರೆಯುವಾಗ ಅದೆಲ್ಲಾ ಕೆಲಸ ಮಾಡಿತ್ತು. ನನ್ನ ತಳಮಳ - ಎಲ್ಲಾ ಇದರಲ್ಲಿ ವ್ಯಕ್ತವಾಗಿದೆ.

**ಹೊಸತು**: ಸಾಮಾನ್ಯವಾಗಿ ನೀವು ಕತೆಯನ್ನೇ ಹೆಚ್ಚು ಬರೆದಿದ್ದೀರಿ. ನಿಮ್ಮ 'ಅಸ್ಪೃಶ್ಯರು' ಕೃತಿಯನ್ನು ನಾನು ಸ್ವರೂಪದ ದೃಷ್ಟಿಯಿಂದ ನೀಳ್ಗತೆ ಎಂದೇ ಕರೆಯುತ್ತೇನೆ. ಏಕೆ ನೀವು ಕಾದಂಬರಿಯನ್ನು ಬರೆಯುವ ಮನಸ್ಸು ಮಾಡಿಲ್ಲ?

**ವೈದೇಹಿ**: ಅದೇ ಕಣೇ. ಕಾದಂಬರಿ ಬರೆಯೋದಕ್ಕೆ ತುಂಬ ಸಮಯ ಬೇಕು. ಅದಕ್ಕೆ ಒಂದು ಥರದ ಧ್ಯಾನಸ್ಥ ಸ್ಥಿತಿ ಬೇಕು. ನನ್ನ ಅಲ್ಲಾಡೋ ಸ್ಥಿತಿಗೆ ಕಥಾ ಪ್ರಕಾರವೇ ಸರಿ ಅನ್ನಿಸಿತು. ಕಾದಂಬರಿಯೊಳಗೆ ಬರೆಯಬಹುದಾದ ಎಲ್ಲ ಕಷ್ಟ, ಸುಖ, ಅನುಭವಗಳಿರುವ ಕಥೆಗಳನ್ನೇ ನಾನು ಬಿಡಿ ಬಿಡಿಯಾಗಿ ಬರೆದಿದ್ದೀನಿ. ಅಷ್ಟೇ. ಕಾದಂಬರಿ ಬರೆಯೋದಿಕ್ಕೆ ಬೇರೆಯೇ ಮನಃಸ್ಥಿತಿ ಬೇಕು.

**ಹೊಸತು**: ನೀವು ಮೂರು ದಶಕಗಳಿಗೂ ಹೆಚ್ಚು ಕಾಲದಿಂದ ಸಾಹಿತ್ಯ ರಚನೆಯಲ್ಲಿ ತೊಡಗಿಕೊಂಡಿದ್ದೀರ. ಈ ಅವಧಿಯ ಸಾಹಿತ್ಯ ಸಂದರ್ಭದಲ್ಲಿ ಹಲವಾರು ಸಾಹಿತ್ಯ ಚಳುವಳಿಗಳು, ಉದಾಹರಣೆಗೆ ಬಂಡಾಯ ಸಾಹಿತ್ಯ ಚಳುವಳಿ, ದಲಿತ ಸಾಹಿತ್ಯ, ಸ್ತ್ರೀವಾದಿ ಸಾಹಿತ್ಯ ಚಳುವಳಿ – ಇವೆಲ್ಲಾ ನಮ್ಮ ನಡುವೆ ನಡೆದುಹೋಗಿವೆ. ಅವುಗಳೊಂದಿಗಿನ ನಿಮ್ಮ ಸಂಬಂಧ ಅಥವಾ ನಿಮ್ಮ ಮೇಲೆ ಅವುಗಳ ಪ್ರಭಾವ ಹೇಗಿದೆ?

**ವೈದೇಹಿ**: ಸಾಹಿತ್ಯ ಮತ್ತು ಸಂಘಟನೆ ಎಂದಾಗ, ಅದರಲ್ಲಿ ಎರಡು ತರಹದ ಜನರು ಇರುತ್ತಾರೆ. ಒಂದು ಸಾಹಿತ್ಯದ ಸಂಘಟನೆಯ ಕೆಲಸ. ನೇರವಾಗಿ ಮಾಡುವವರು. ಇನ್ನೊಂದು ಗುಂಪಿನ ಜನ ನನ್ನಂಥವರು ನಮ್ಮ ಪಾಡಿಗೆ ಬರಕೋತಾನೇ, ಈ ಸಾಹಿತ್ಯ ಚಳುವಳಿಯ ಭಾಗವಾಗಿರು ವವರು. ನನ್ನ ಪಾತ್ರಗಳೆಲ್ಲಾ ಮಹಿಳೆಯರು. ನನಗೇ ಗೊತ್ತಿಲ್ಲದೆ, ಈ ಪಾತ್ರಗಳು ಇಂತಹ ಚಳುವಳಿಯೊಳಗೆ ನನ್ನನ್ನು ಕರ್ಕೊಂಡು ಹೋಗಿಬಿಟ್ಟಿರುತ್ತವೆ. ನನಗೆ ಗೊತ್ತಿಲ್ಲ, ಇದು ಯಾವ ಚಳುವಳಿಯ ಭಾಗ ಅಂತ. ಒಟ್ಟಾರೆ ಇವೆಲ್ಲಾ ಮಾನವ ಚಳುವಳಿಯ ಭಾಗ ಅಂತ. ಆದ್ದರಿಂದ ಯಾವ ಚಳುವಳಿ ನನ್ನಲ್ಲಿ ಇದೆ ಅಂತ ನೀವೇ ಹೇಳಬೇಕು ಅಂತ.

ನಾನು ಓದಿದ್ದು ಬಿ.ಕಾಂ. ಕನ್ನಡ ನನ್ನ ಮೈನರ್ ಸಬ್ಜೆಕ್ಟ್. ನಾನು ಹೆಚ್ಚು ಓದಿದ್ದು ಸಂಸ್ಕೃತ. ನಾನು ಯಾವುದೇ ಅಕಡೆಮಿಕ್ ಆದ ಸಾಹಿತ್ಯದ ವ್ಯಕ್ತಿಯಲ್ಲ. ಸುಮ್ಮನೆ ಮನಸ್ಸಿನಲ್ಲಿ ಹುಟ್ಟಿದ್ದನ್ನು ಬರ್ಕೋತಾ ಹೋಗಿದ್ದೀನಿ. ಅದಕ್ಕೆ ಸಾಹಿತ್ಯದ ಭಾಷೆಯಲ್ಲಿ ವಿವರಣೆ ಕೊಡಬೇಕಾದವರು ನೀವು. ನನಗೆ ಮೊದಲು ಸಿಟ್ಟು ಬರೋದು, 'ಮಹಿಳಾ ಲೇಖಕಿ, ಮಹಿಳಾ ಕೇಂದ್ರಿತ' ಅಂತ ಪದಗಳನ್ನು ಬಳಸಿದಾಗ. ಏಕೆಂದರೆ ಯಾರೂ ಪುರುಷ ಲೇಖಕ, ಪುರುಷ ಕೇಂದ್ರಿತ ಅಂತ ಹೇಳಲ್ಲ. ನಾವೆಲ್ಲರೂ ಮಾತಾಡೋದು ಮನುಷ್ಯರ ಬಗ್ಗೇನೆ. ಆ ಮನುಷ್ಯ ಮಹಿಳೆ ಆಗಿರ್ತಾಳೆ ಅಷ್ಟೇ. ಇನ್ನು ಸಾಹಿತ್ಯದ ಪ್ರಧಾನ ಧಾರೆ ಅಂದರೆ ಏನು? ಉಪ ಧಾರೆ ಅನ್ನೋದು ಎಲ್ಲಿದೆ? ನಮ್ಮನ್ನು ಅನಾದರಿಸುವ ನಿಮ್ಮದು ಎಂತಹ ಮುಖ್ಯಧಾರೆ, ಅಂತ ಅವರನ್ನು ಕೇಳಲಿಕ್ಕೆ ಬಯಸುತ್ತೇನೆ. ನೀವು ವ್ಯಕ್ತಿಗತ ಶ್ರೇಷ್ಠತೆಯ ಬಗ್ಗೆ ಹೇಳುತ್ತೀರ. ಆದರೆ ನಮ್ಮ ಜೈವಿಕ ಶ್ರೇಷ್ಠತೆಯ ಬಗ್ಗೆ ನಮಗೆ ಹೆಮ್ಮೆ ಇದೆ, ಅಂತ ಅವರಿಗೆ ಹೇಳ್ತೀನಿ.

**ಹೊಸತು**: ಹಾಗಲ್ಲ, ನೀವು ಆದರ್ಶದ ಸ್ಥಿತಿಯ ಬಗ್ಗೆ ಏನೇ ಹೇಳಿದರೂ ವಾಸ್ತವದಲ್ಲಿ ಪರಿಸ್ಥಿತಿ ಬೇರೆ ಇದೆ. ಲಿಂಗ ರಾಜಕೀಯ ಎಲ್ಲಾ ಹಂತದಲ್ಲೂ ಕೆಲಸ ಮಾಡುತ್ತಿರುತ್ತದೆ. ಈಗ ನಿಮಗೆ ಈ ಪ್ರಶಸ್ತಿ ಬಹಳ ಹಿಂದೆಯೇ ಬರಬೇಕಿತ್ತು ಅಂತ ನಮ್ಮ ಅನಿಸಿಕೆ.

**ವೈದೇಹಿ**: ಏನಿಲ್ಲ, ಸರಿಯಾಗಿದೆ ಸುಮ್ಮನಿರು. ಈಗ ಬಂದದ್ದೇ ಸರಿ. ನಿಜವಾಗಲೂ ನನಗೆ ಪ್ರಶಸ್ತಿ ಬರಲಿಲ್ಲ ಅಂತ ದುಃಖ ಆಗಲ್ಲ. ಆದರೆ ಬರೆಯಬೇಕೆನಿಸಿದ್ದು ಬರೆಯಕ್ಕಾಗದಿದ್ದರೆ ಆಗ ಬೇಜಾರಾಗತ್ತೆ.

**ಹೊಸತು**: ಕೊನೆಯದಾಗಿ ಒಂದು ಪ್ರಶ್ನೆ. ಹಿಂದೆ ಹದಿನಾರು ವರ್ಷದ ಹಿಂದೆ ನಿಮ್ಮನ್ನು ಸಂದರ್ಶನ ಮಾಡಿದಾಗಲೂ ಈ ಪ್ರಶ್ನೆ ಕೇಳಿದ್ದೆ. ಈಗ ಮತ್ತೊಮ್ಮೆ ಕೇಳುತ್ತಿರುವೆ. ನಿಮ್ಮ ಅಭಿಪ್ರಾಯ ಬದಲಾಗಿದೆಯಾ, ನೋಡುವಾ.

ನಿಮ್ಮ ಕತೆಗಳ ಸ್ತ್ರೀ ಪಾತ್ರಗಳು ಕೌಟುಂಬಿಕ ಬದುಕಿನಲ್ಲಿ ದುಡಿಮೆಯನ್ನೇ ವಿಶೇಷ ಮೌಲ್ಯವಾಗಿ ಸ್ವೀಕರಿಸಿದವರು. ಆದರೆ ಮನೆಯ ಹೊರಗೆ ದುಡಿಯುವ



ಅಂದರೆ ಸಾರ್ವಜನಿಕ ಉತ್ಪಾದನೆಯಲ್ಲಿ ತೊಡಗಿರುವ ಮಹಿಳೆಯರು ನಿಮ್ಮ ಕಥಾಭಿತ್ತಿಯಲ್ಲಿ ಹೆಚ್ಚು ಚಿತ್ರಿತವಾಗಿಲ್ಲ. ಇದಕ್ಕೆ ನಿಮ್ಮ ದೃಷ್ಟಿಕೋನ ಕಾರಣವೇ? ಹಿಂದೆಯೂ ನಿಮ್ಮನ್ನು ಸಂದರ್ಶಿಸಿದಾಗ ಮಹಿಳೆಯರು ಹೊರಗೆ ಹೋಗಿ ದುಡಿಯುವುದರ ಬಗ್ಗೆ ನೀವು ಹೆಚ್ಚು ಒಲವು ತೋರಿರಲಿಲ್ಲ.

**ವೈದೇಹಿ**: ನನ್ನ ಮನೆಯಲ್ಲಿ ಹೊರಗೆ ಹೋಗಿ ದುಡಿಯಲಿಲ್ಲವೆಂಬ ಕಾರಣಕ್ಕೆ ಯಾವ ಹೆಣ್ಣೂ ಅವಮರ್ಯಾದೆಗೆ ಒಳಗಾಗಲಿಲ್ಲ. ಒಂದು ಹೆಣ್ಣೋ ಅಥವಾ ಗಂಡೋ ಮನೆಯಲ್ಲಿ ಯಾರಾದರೂ ಒಬ್ಬರು ದುಡಿಯಲಿಕ್ಕೆ ಹೋದರೆ ಸಾಕು, ಅನ್ನುವುದು ನನ್ನ ಅಭಿಪ್ರಾಯ. ಒಬ್ಬರ ಸಂಪಾದನೆಯೇ ಮನೆಯ ನಿರ್ವಹಣೆಗೆ ಸಾಲತ್ತೆ ಅನ್ನೋದಾದರೆ ಇಬ್ಬರೂ ದುಡಿಯ ಲಿಕ್ಕೆ ಹೋಗಬೇಕಾಗಿಲ್ಲ ಅಂತ ನನ್ನ ಭಾವನೆ. ದುಡಿದರೆ ಮಾತ್ರ ಗೌರವ ಅನ್ನುವುದು ನಗರ ಸಂಸ್ಕೃತಿ. ಉದ್ಯೋಗ ಮತ್ತು ಹೆಣ್ಣು ಅನ್ನುವ ವಿಷಯದಲ್ಲಿ ಆರೋಗ್ಯಕರವಾದ ಭಾವನೆಯನ್ನು ಇಟ್ಟುಕೊಳ್ಳದಿದ್ದರೆ, ತುಂಬ ಕಷ್ಟ ಆಗುತ್ತದೆ. 'ಉದ್ಯೋಗಂ ಪುರುಷಸ್ಯ ಲಕ್ಷಣಂ' ಎಂದು ಹೇಳುತ್ತಾ ಉದ್ಯೋಗವನ್ನು ಪುರುಷನಿಗೇ ಕಟ್ಟಿಹಾಕುವುದು ಸರಿಯಲ್ಲ. ಒಂದು ಕುಟುಂಬದಲ್ಲಿ ಹೆಣ್ಣಾಗಲಿ ಗಂಡಾಗಲಿ, ಯಾರು ಬೇಕಾದರೂ ಉದ್ಯೋಗಕ್ಕೆ ಹೋಗುವಂತಿರಬೇಕು. ಉದ್ಯೋಗ ಮಾಡಲಿಲ್ಲ ಅಂತ ಅವಮಾನ ಮಾಡೋದು ಎಲ್ಲಾ ಶುರುವಾಗೋದು ಇದರಿಂದಾನೇ. ಹಣಕ್ಕೆ ಹೆಚ್ಚು ಬೆಲೆ ಕೊಡದೆ, ಹದವಾದ ಆರ್ಥಿಕ ಮಹತ್ವ ಇದ್ದರೆ, ಆಗ ಎಲ್ಲ ಸರಿ ಆಗುತ್ತದೆ. ಅಲ್ಲವಾ?

(ನನ್ನ ಕೈಗಡಿಯಾರ ನೋಡಿದೆ. ೧೦ ಗಂಟೆಯಾಗುತ್ತಿತ್ತು. ನಿಗದಿತ ಸಮಯ ಮುಗಿದದ್ದರಿಂದ ಮುಕ್ತಾಯ ಹಾಡಲು 'ಓ.ಕೆ. ಥ್ಯಾಂಕ್ಯು' ಎಂದೆ.)

**ವೈದೇಹಿ**: ಹಾಂ, ಏನು ನಿನ್ನ ಅಭಿಪ್ರಾಯ ಹೇಳಲೇ ಇಲ್ಲ, ಎಂಥದು ನಿನಗೆ ನನ್ನ ಅಭಿಪ್ರಾಯದ ಬಗ್ಗೆ ಏನನ್ನಿಸತ್ತೆ?

**ಹೊಸತು**: ಇಲ್ಲ, ನಾನು ಈ ವಾದವನ್ನು ಪೂರ್ತಿ ಒಪ್ಪಲ್ಲ. ಕುಟುಂಬದ ಹೊರಗಿನ ದುಡಿಮೆ ಅವಳಿಗೆ ಕೇವಲ ಹಣ ತಂದು ಕೊಡೋದು ಅಷ್ಟೇ ಅಲ್ಲ, ಹಲವಾರು ಹೊಸ ಅನುಭವಗಳನ್ನು ಕಟ್ಟಿಕೊಡುತ್ತದೆ. ಅದರಿಂದ ಬದುಕಿಗೆ ಹೆಚ್ಚು ಪ್ರಯೋಜನವಾಗುತ್ತದೆ. ದುಡಿಮೆಯ ರಂಗದಿಂದ ಹೊರಗುಳಿಯುವ ಹೆಣ್ಣು ಎಷ್ಟೊಂದು ಅನುಭವಗಳಿಂದ ವಂಚಿತಳಾಗುತ್ತಾಳೆ! ಅಂತ ನನಗೆ ಅನ್ನಿಸುತ್ತೆ.

**ವೈದೇಹಿ**: ಅದೇನೋ ನಿಜ. ದುಡಿಮೆ ಹೆಣ್ಣಿಗೆ ಆತ್ಮವಿಶ್ವಾಸವನ್ನು ಕೊಡುತ್ತದೆ. ಆದರೆ ದುಡಿಯಲು ಇಷ್ಟಪಡದ ಎಷ್ಟೋ ಹೆಣ್ಣುಮಕ್ಕಳು ಬಲವಂತದಿಂದ ಉದ್ಯೋಗಕ್ಕೆ ಹೋಗಬೇಕಾದ ಪರಿಸ್ಥಿತಿಯೂ ನಮ್ಮ ನಡುವೆ ಇದೆ. ಅದು ಒಳ್ಳೆಯದಲ್ಲ.

**ಹೊಸತು**: ಸರಿ, ನಿಮ್ಮ ಬಿಡುವಿಲ್ಲದ ಸಮಯದಲ್ಲೂ ನಮ್ಮೊಡನೆ ಮಾತನಾಡಿದ್ದಕ್ಕೆ ತುಂಬ ವಂದನೆಗಳು. ನಮಸ್ಕಾರ.

**ಡಾ|| ಎನ್. ಗಾಯತ್ರಿ**
ನಂ. ೨೦೧, ಸ್ಕೈಲೈನ್ ಗೋಲ್ಡನ್ ರೇಸ್, ಚಿತ್ರಂ ಬ್ಲಾಕ್
ಕೆಂಪೇಗೌಡ ನಗರ, ಗವಿಪುರಂ, ಬೆಂಗಳೂರು - ೫೬೦ ೦೧೯

# ಭಯವೇ ಭಕ್ತಿಯ ಮೂಲವಯ್ಯಾ !



ಬುದ್ಧ ಹೇಳಿದ – ಆಸೆಯೇ ದುಃಖಕ್ಕೆ ಮೂಲ. ಹೌದು ಆತ ಹೇಳಿದ್ದು ಸಾರ್ವಕಾಲಿಕ ಸತ್ಯವಾದ ವೈಚಾರಿಕ ಮಾತು. ಆದರೆ ಇದೇ ಆಸೆಯನ್ನೇ ಭಕ್ತಿಗೆ ಮೂಲವಾಗಿ ನಾವು ಅದೆಂತು ಈ ಕಲಿಗಾಲದಲ್ಲಿ ಬಳಸಿಕೊಳ್ಳುತ್ತಿದ್ದೇವೆ ನೋಡಿ : ನಿನಗೆ ಕೋಟ್ಯಂತರ ರೂಪಾಯಿ ಲಾಭವಾಗುತ್ತೆ, ಪುತ್ರ ಸಂತಾನ ಭಾಗ್ಯ ಪ್ರಾಪ್ತಿಯಾಗುತ್ತೆ ಎಂದು ಹೇಳುತ್ತ, ಬಸವ ನುಡಿದ - ದಯೆಯೇ ಧರ್ಮದ ಮೂಲವಯ್ಯಾ! ಈ ದಯೆಯನ್ನು ಬಡಿದಟ್ಟಿ ಬದಿಗೆ ದಬ್ಬಿ ಅದರ ಜಾಗದಲ್ಲಿ ಭಯವನ್ನು ತಂದು ಕೂರಿಸಿದ ಕಲಿಗಳು ನಾವು. ಅದಕ್ಕೆಂದೇ ಹೇಳುವುದು ''ಭಯವೇ ಭಕ್ತಿಗೆ ಮೂಲವಯ್ಯಾ !''

ಡಾ|| ಅನಿಲ ಕಮತಿ

ನಮ್ಮ ಇತಿಹಾಸದಲ್ಲಿ, ಪುರಾಣ ಪುಣ್ಯಕಥೆಗಳಲ್ಲಿ ಭಕ್ತಿಪಂಥಕ್ಕೆ ತನ್ನದೇ ಆದ ಮಹತ್ವವಿದೆ. ಭಕ್ತಿ ಪರಂಪರೆ ನಮ್ಮ ನೆಲದ ಸಂಸ್ಕೃತಿಯ ಒಂದು ಅವಿಭಾಜ್ಯ ಅಂಗ. ನಾಸ್ತಿಕವಾದವೂ ಅನಾದಿ ಕಾಲದಿಂದ ಇಂದಿನವರೆಗೆ ಅಲ್ಲಲ್ಲಿ ಹಣಕಿಹಾಕುತ್ತದ್ದಾದರೂ ಉಕ್ಕಿ ಹರಿಯುವ ಭಕ್ತಿ ಎಂಬ ಮಹಾಸಾಗರದಲ್ಲಿ ಈ ನಡುಗಡ್ಡೆಗಳು ಕಾಣಿಸುವುದು ಸೂಕ್ಷ್ಮವಾಗಿ ಅವಲೋಕಿಸಿದವರ ಕಣ್ಣಿಗೆ ಮಾತ್ರ.

ದೇವರುಗಳೊಳಗೆ ಕೆಲ ದೇವರುಗಳಿಗೇ ಮೀಸಲಾದ ಕೆಲ ಭಕ್ತರಿದ್ದಾರೆ. ರಾಮಭಕ್ತ ಹನುಮಂತ, ನಾರಾಯಣ ಜಪ ಸದಾ ಜಪಿಸುತ್ತಲೇ ಇರುವ ಹರಿಪ್ರಿಯ, ಲೋಕಸಂಚಾರಿ, ಕಲಹಪ್ರಿಯ ನಾರದ, ಶಿವನ ಸಂಗಾತಿ ನಂದೀಶ್ವರ ಹೀಗೆ ಹೆಸರಿಸುತ್ತ ಹೋದರೆ ಪಟ್ಟಿ ಬೆಳೆಯುತ್ತಲೇ ಹೋಗುತ್ತದೆ. ಇನ್ನು ಮರ್ತ್ಯಲೋಕದಲ್ಲಿ ಜನಿಸಿಯೂ ತಮ್ಮ ಭಕ್ತಿ ಮಾತ್ರದಿಂದಲೇ ದೇವರಾಗಿ ಕುಳಿತಿರುವವರೂ ಅನೇಕರಿದ್ದಾರೆ. ನಾನು ಹೇಳಹೊರಟಿರುವುದು ಇಂಥವರ ಬಗೆಗಲ್ಲ. ಇವರೆಲ್ಲ ಸದಾ ಅದರಣೀಯರೇ, ಪೂಜನೀಯರೇ ಎನ್ನಿ ಬೇಕಾದರೆ.

ಪ್ರಸ್ತುತದಲ್ಲಿ ನಾನು ಪ್ರಸ್ತುತ ಪಡಿಸುತ್ತಿರುವುದು ಇಂದಿನ ಕಾಲದ ನಾನು ಕಂಡುಂಡ ಬಹುತೇಕ ಭಕ್ತರ ಬಗ್ಗೆ. ಇಂದೂ ಎಲ್ಲೋ ಅಲ್ಲೊಬ್ಬರು, ಇಲ್ಲೊಬ್ಬರು ಸರಳ, ಸ್ವಚ್ಛ ಮನಸ್ಸಿನ ಭಕ್ತರಿದ್ದಾರೆ – ಈ ಹಿಂದೆಯೂ ಕೆಲ ಢೋಂಗಿ ಭಕ್ತರಿದ್ದಂತೆ.

ಭಕ್ತರ ಈ ಮನಃಸ್ಥಿತಿಯನ್ನರಿಯಲು ಇಂದು ಚಾಲ್ತಿಯಲ್ಲಿರುವ ಬಹುಪಾಲು ದೇವರುಗಳ ಬಗ್ಗೆಯೇ ಸ್ವಲ್ಪ ಪರಾಮರ್ಶಿಸೋಣ. ದೇವರುಗಳು ಎಂದ ಕೂಡಲೆ ನಮಗೆ ಮೊದಲಿಗೆ ನೆನಪಿಗೆ ಬರುವುದೇ ಗಣಪತಿ ಅಥವಾ ಗಜಾನನ. ಯಾಕೆಂದರೆ ನಮ್ಮೆಲ್ಲ ಆಚರಣೆಗಳಲ್ಲಿ ಪ್ರಥಮ ಪೂಜೆ ಈತನಿಗೇ – ಹಾಗೆಂದು ವೇದಗಳೇ ಹೇಳುತ್ತವೆನ್ನುತ್ತಾರೆ, ಆ ಮಾತು ಬೇರೆ. ಒಂದು ಕ್ಷಣ ಯೋಚಿಸಿ. ಒಂದು ಪಕ್ಷ ಈತನಿಗೆ ವಿಘ್ನೇಶ್ವರ, ವಿಘ್ನಹಾರಿ ಎಂಬ ಪಟ್ಟವಿರದಿದ್ದರೆ ಹೀಗೆ ಈತ ನಮ್ಮಿಂದ ಅಗ್ರಪೂಜೆಗೆ ಪಾತ್ರನಾಗುತ್ತಿದ್ದನೇ ? ಈತ ವಿಘ್ನಗಳನ್ನು ತಂದೊಡ್ಡುವವ. ನಮ್ಮ ಕೆಲಸಗಳಲ್ಲಿ, ನಾವು ಹಿಡಿದ ಕಾರ್ಯದಲ್ಲಿ ಯಾವುದೇ ವಿಘ್ನಗಳು, ಎಂಥದೇ ಅಡಚಣೆಗಳು ಈತನಿಂದ ಬಾರದಿರಲಿ ಎಂಬ ಕಾರಣಕ್ಕೇ ಈತನಿಗೆ ಪ್ರಥಮ ಪೂಜೆಯೇ ಹೊರತು ಈತನ ಮೇಲಿನ ನಮ್ಮ ಅಪರಂಪಾರ ಪ್ರೀತಿ ಅಥವಾ ಭಕ್ತಿಯ ದೆಸೆಯಿಂದಲ್ಲ. ಅಲ್ಲದೆ ಈತನಿಗೆ ವಿಘ್ನಹಾರಿ, ವಿಘ್ನಪರಿಹಾರಿ ಎಂಬ ಹೆಸರೂ ಉಂಟು. ಅಂದರೆ ಬಂದ ವಿಘ್ನಗಳನ್ನೂ ಈತ ಪರಿಹರಿಸುವವ ಎಂಬ ನಂಬಿಕೆಯೊಂದಿದೆ – ಇದು ಎರಡನೆಯ ಮಾತು. ನಮಗೆ ವಿಘ್ನಗಳನ್ನು ತಂದೊಡ್ಡಬಲ್ಲನಲ್ಲ ಎಂಬುದು ಭಯವಾದರೆ, ಹಾಗೆ ವಿಘ್ನಗಳನ್ನು ತಂದೊಡ್ಡಬಾರದೆಂಬ ಕಾರಣಕ್ಕೆ ಪೂಜೆ ಸಲ್ಲಿಸುವುದು ಆಸೆ. ಹೀಗೆ ಬಾರದ ವಿಘ್ನಗಳನ್ನು ಪರಿಹರಿಸಲಿ, ಸಂಕಟವಿಮೋಚನನಾಗಲಿ ಎಂಬುದು ಆಶಯ.

ಈ ಹಿಂದಿನಿಂದಲೂ ನಮ್ಮಲ್ಲಿ ನವಗ್ರಹಗಳ ದೇವಸ್ಥಾನಗಳುಂಟಾದರೂ ಈಚಿನ ದಿನಗಳಲ್ಲಿ ಅವು ಸಂಖ್ಯೆಯಲ್ಲಿ ಹೆಚ್ಚಿವೆ; ಹೆಚ್ಚುತ್ತವೆ. 'ನವಗ್ರಹಗಳ ಕಾಟ' ಎಂಬ ಪರಿಕಲ್ಪನೆ ನಮ್ಮಲ್ಲಿ ಇಲ್ಲದೇ ಹೋಗಿದ್ದರೆ ಹೀಗೆ ಈ ದೇಗುಲಗಳ ಸಂಖ್ಯೆ ಒಮ್ಮೆಲೇ ಹೆಚ್ಚುತ್ತಲಿತ್ತೇ ? ನವಗ್ರಹ ಪೂಜೆಗಳೂ, ಹೋಮ-ಹವನಗಳೂ ಮೊದಲಿನಿಂದಲೂ ನಡೆದುಬಂದವುಗಳೇ ಆದರೂ ಈಚೆಗೆ, ವಿಜ್ಞಾನಯುಗ ಕಾಲಿಟ್ಟಲಾಗಾಯ್ತು ಇವು ಹತ್ತಾರು ಪಟ್ಟು ಹೆಚ್ಚಿವೆ.

ಭಾರತದಾದ್ಯಂತ ಖ್ಯಾತಿವೆತ್ತ, ಇಡೀ ದೇಶಕ್ಕೆ ಏಕೈಕ ಎನ್ನಿಸಿರುವ, ತನ್ನ ನಿಖರ ಮತ್ತು ಉತ್ತಮ ಗುಣಮಟ್ಟದ ಚಿಕಿತ್ಸೆಗಾಗಿ ಹೆಸರು ಮಾಡಿರುವ ರಾಷ್ಟ್ರೀಯ ಮನೋವಿಜ್ಞಾನ ಮತ್ತು ನರರೋಗ ಶಾಸ್ತ್ರದ (ನಿಮ್ಹಾನ್ಸ್) ಬೆಂಗಳೂರಿನ ಆಸ್ಪತ್ರೆಯ ವಿಶಾಲ ಆವರಣದಲ್ಲಿ ನಮಗಿಂದಿಗೂ ಕಾಣಸಿಗುವವು ಎರಡೇ ಎರಡು ದೇವಸ್ಥಾನಗಳು - ಒಂದು ವಿಘ್ನೇಶ್ವರ ಗಜಾನನದಾದರೆ, ಇನ್ನೊಂದು ಈ ನವಗ್ರಹಗಳಿಗೆ ಮೀಸಲು.

ಈ ನವಗ್ರಹಗಳಲ್ಲೂ ಅವೈಜ್ಞಾನಿಕ ಎಂದು ಕರೆಸಿಕೊಳ್ಳುವ ರಾಹು-ಕೇತುಗಳಿಗೆ ವಿಶೇಷ ಪ್ರಾಧಾನ್ಯ. ಈ ರಾಹು-ಕೇತುಗಳೆಂಬ ತಲೆಯ ಮೇಲೆ ಕೊಂಬಿರುವ ಕೋರೆ ಹಲ್ಲುಗಳ ರಾಕ್ಷಸರು ಸೂರ್ಯ-ಚಂದ್ರರುಗಳನ್ನೇ ಆಗಾಗ ನುಂಗಲೆಳಸುವರೆಂದ ಮೇಲೆ ನಮ್ಮಂಥ ಹುಲುಮಾನವರ ಗತಿಯೇನು ? ಅದಕ್ಕೆಂದೇ ಇವುಗಳಿಗೆ ಪ್ರಥಮ ಪ್ರಾಶಸ್ತ್ಯ.

ಈ ನವಗ್ರಹಗಳ ಕೂಟದಲ್ಲಿಯೇ ಇನ್ನೊಂದು ವೈಶಿಷ್ಟ್ಯವನ್ನು ಗಮನಿಸಿದ್ದೀರಾ ? ಇವರಲ್ಲಿ ಸೂರ್ಯ-ಚಂದ್ರರನ್ನು ಬಿಟ್ಟರೆ ಶನಿಗೆ ಮಾತ್ರ ದೇವರ ಪಟ್ಟ. ಈ ಶನಿದೇವರಿಗೆಂದೇ ಸೂರ್ಯ-ಚಂದ್ರರಿಗಿಂತಲೂ ಅದೆಷ್ಟೋ ಪಟ್ಟು ಹೆಚ್ಚಿನ ಸಂಖ್ಯೆಯ ಗುಡಿಗುಂಡಾರಗಳಿವೆ. ಇಂಥ ಪ್ರತ್ಯೇಕ ಪೂಜೆ, ಗುಡಿ ಗೋಪುರಗಳ ಗೌರವ ಹೊಂದುವುದಕ್ಕೆ, ತನ್ನದೇ ಆದ ವಿಶಿಷ್ಟ ವಾಹನ, ಸಿಂಹಾಸನಗಳನ್ನು ಭಕ್ತಗಣದಿಂದ ಗಿಟ್ಟಿಸಿಕೊಂಡಿರುವುದಕ್ಕೆ ಶನಿಕಾಟ, ಈತ ನಮ್ಮ ತಥಾಕಥಿತ ಮೂವತ್ಮೂರು ಕೋಟಿ

ದೇವರುಗಳ ಪೈಕಿ ಅತಿಹೆಚ್ಚು ಕಾಡುವ ದೇವರು ಎಂಬ ನಂಬಿಕೆಯ ಹೊರತು ಬೇರಾವ ಕಾರಣವನ್ನಾದರೂ ಕೊಡಲುಂಟೇ? ಶನಿಮಹಾತ್ಮೆ ಎಂಬ ಈತನಿಗೆಂದೇ ಮೀಸಲಿಟ್ಟ ಪ್ರತ್ಯೇಕ ಚಲನಚಿತ್ರವುಂಟು. ಪುಸ್ತಿಕೆ-ಪುಸ್ತಕಗಳು ವಿಪುಲವಾಗಿ ದೊರೆಯುತ್ತವೆ. ಇನ್ನುಳಿದಂತೆ ಆ-ಈ ಪುಸ್ತಕ, ಉದ್ಗ್ರಂಥ ಸಿನಿಮಾಗಳಲ್ಲಿ ಈ ವಿಷಯ ಆಗಾಗ ಅದೆಷ್ಟೋ ಬಾರಿ ಪ್ರಸ್ತಾಪಿಸಲ್ಪಡುವುದುಂಟು. ಇಂಥ ಭಾಗ್ಯ ಯಾರಿಗುಂಟು, ಯಾರಿಗಿಲ್ಲ! ಕನಿಷ್ಠ ನವಗ್ರಹಗಳ ಮಟ್ಟಿಗಂತೂ ಯಾರ್‍ಯಾರಿಗೂ ಇಲ್ಲವೇ ಇಲ್ಲ.

ಇಂದು ಪ್ರಚಲಿತದಲ್ಲಿರುವ ನಮ್ಮ ಪ್ರಮುಖ ದೇವರುಗಳ ಬಗೆಗೇನೇ ಕೊಂಚ ಪರಾಮರ್ಶಿಸೋಣ. ಇಂದು ನಮ್ಮಲ್ಲಿಯ ಅತಿ ಹೆಚ್ಚು ಜನಪ್ರಿಯ ದೇವರುಗಳಲ್ಲಿ ಬಹುಪಾಲು ದೇವರು ಭಯೋತ್ಪಾದಕರೇ! ದಿಗಿಲು ಬೀಳಬೇಡಿ. ಭಕ್ತಗಣದ ಮನದಲ್ಲಿ ಭಯವನ್ನು ಹುಟ್ಟು ಹಾಕುವವರು ಎಂಬರ್ಥದಲ್ಲಿ ಈ ಪದ ಬಳಸಿದೆನಷ್ಟೇ. ಉದಾಹರಣೆಗೆ, ಮಾರಿದೇವಿ. ಅವಳ ಹೆಸರಿಗೆ ಒಂದು ಭಯಂಕರ ರೋಗವನ್ನೇ ತಗಲು ಹಾಕಿದ್ದೇವಲ್ಲ! ಮಾರಿಬೇನೆ ಎಂದೇ ನಮ್ಮ ದೇಶದಲ್ಲಿ ಕರೆಸಿಕೊಳ್ಳುವ ಮೈಲಿಬೇನೆ ಈ ದೇವಿಯ ಅವಕೃಪೆಯಿಂದಲೇ ತಗಲುತ್ತದೆಂಬ ಪ್ರತೀತಿಯೇ ಉಂಟಲ್ಲ! ಇಂಥ ರೋಗವೊಂದು ಊರನ್ನು ಕೊಳ್ಳೆ ಹೊಡೆಯದಿರಲಿ ಎಂಬ ಅಂಜಿಕೆಗೇ ತಾನೇ ಅವಳಿಗೆ ವಿಶೇಷ ನೈವೇದ್ಯ, ಪೂಜೆ, ವರ್ಷಕ್ಕೊಮ್ಮೆ ಅದ್ದೂರಿಯ ಜಾತ್ರೆ, ಈ ದೇವಿಯ ಸಂತೃಪ್ತಿಗೆಂದು ಕುರಿ-ಕೋಣಗಳ ಬಲಿ... ಇನ್ನೂ ಏನೇನೋ. ಒಂದು ಕ್ಷಣ ಯೋಚಿಸಿ ನೋಡಿ – ಈ ಮಾರಿದೇವಿಗೂ ಮಾರಿಬೇನೆಗೂ ತಳಕು ಹಾಕಿಕೊಂಡಿರದಿದ್ದರೆ? ರೇSS...!

ಇಪ್ಪತ್ತನೆಯ ಶತಮಾನದ ಕೊನೆಗಾಲದಲ್ಲಿ ಹುಟ್ಟಿಕೊಂಡ ಇನ್ನೊಬ್ಬ ದೇವತೆ ಏಡ್ಸಮ್ಮ!

ಇನ್ನುಳಿದ ದೇವರುಗಳ ಪೈಕಿಯೂ ಉಗ್ರ ದೇವತೆಗಳಿಗೆ ನಮ್ಮಲ್ಲಿ ಅಗ್ರ ಪಟ್ಟ. ಕಾಳಿಕಾಮಾತೆಯ ಆ ರುದ್ರರೂಪವನ್ನೇ ಒಂದು ಕ್ಷಣ ಕಲ್ಪಿಸಿಕೊಳ್ಳಿ. ಕೊರಳಲ್ಲಿ ತಲೆಬುರುಡೆಗಳ ಮಾಲೆ, ಎದೆಯಲ್ಲಿ ನಡುಕ ಹುಟ್ಟಿಸುವ ಆ ಉರಿಗಣ್ಣುಗಳು, ರಕ್ತ ತೊಟ್ಟಿಕ್ಕುವ ಆ ಚಾಚಿದ ನಾಲಿಗೆ, ಎಂಟೋ-ಹತ್ತೋ ಕೈಗಳಲ್ಲಿ ಭೀತಿ ಹುಟ್ಟಿಸುವ ವಿಭಿನ್ನ ಆಯುಧಗಳು! ಚಾರ್ವಾಕರಂಥ ನಮ್ಮಲ್ಲಿಯ ಶುದ್ಧ ನಾಸ್ತಿಕರಲ್ಲಿ ಇದು ಭಯ ಹುಟ್ಟುಹಾಕುವ ಶುದ್ಧ ಹುನ್ನಾರವೆನ್ನಿಸಿದರೂ ಆಶ್ಚರ್ಯವಿಲ್ಲ.

ಇನ್ನು ಸಣ್ಣಪುಟ್ಟ ಚರ್ಮರೋಗಗಳು, ಮನೋ ಕಾಯಿಲೆಗಳನ್ನು ಮಾನವನಿಗೆ ತಗುಲಿಸಲೆಂದೇ ಕೆಲ ಸ್ಪೆಶಲಿಸ್ಟ್ ದೇವರುಗಳೂ ನಮ್ಮಲ್ಲಿದ್ದಾರೆ. ಇವರಿಗಿರುವಷ್ಟು ಡಿಮ್ಯಾಂಡು ನಮ್ಮ ಇನ್ನಿತರೇ ದೇವರುಗಳಿಗಿಲ್ಲ ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಇಲ್ಲಿ ಗಮನಿಸಬೇಕಾದ ಒಂದು ಸಂಗತಿ ಎಂದರೆ, ಎಲ್ಲ ದೇವರುಗಳೂ ಹುಲುಮಾನವರ ಮೈಹೊಕ್ಕು 'ನುಡಿ' ನುಡಿಯುವುದಿಲ್ಲ. ಈ ಸೌಲಭ್ಯ ಕೆಲ ವರ್ಗದ ದೇವರುಗಳಿಗಷ್ಟೇ ಮೀಸಲು. ಆಯಾ ದೇವರುಗಳ ಜನಪ್ರಿಯತೆ, ಭಕ್ತ ಮಂಡಲಿಯ ಸಂಖ್ಯೆ ಮತ್ತು ಭಾವೋದ್ವೇಗಗಳಲ್ಲೂ ಅಪರಂಪಾರ ಫರಕು ಉಂಟು-ಆಯಾಯಾ ದೇವನುಡಿಗಳು ಅದೆಷ್ಟು ಉಗ್ರವಾಗಿವೆ, ತೊಡೆಯಲ್ಲಿ ನಡುಕ ಹುಟ್ಟಿಸುವಂತಿವೆ ಎಂಬುದರ ಮೇಲೆ ಅವಲಂಬಿತವಾಗಿದೆ ಎಂಬುದು ನಿತ್ಯಸತ್ಯ.

ಕೆಲ ದಶಕಗಳಿಂದೀಚೆಗೆ ನಮ್ಮ ದೇಶದಲ್ಲಿ ಪತ್ರ ಚಳುವಳಿಯೆಂಬುದು ಅವ್ಯಾಹತವಾಗಿ ಸಾಗಿಬಂದಿದೆ. ಇದು ಒಂದು ರೀತಿಯಲ್ಲಿ ನಮ್ಮ ವ್ಯಾಪಾರ-ವಹಿವಾಟು ದಾರರು ಈಚೆಗೆ ಅನುಸರಿಸುತ್ತಿರುವ ಸರಣಿ ವ್ಯವಸ್ಥೆ ಅಥವಾ ಚೇನ್ ಸಿಸ್ಟಮ್‌ನ ಆದ್ಯ ಪ್ರವರ್ತಕ ಎಂದರೂ ತಪ್ಪಾಗದು. ಇದು ನಮ್ಮ ದೇಶದಲ್ಲಷ್ಟೇ ಅಲ್ಲ, ಪ್ರಪಂಚ ದಾದ್ಯಂತ ಪಸರಿಸಿದೆ ಎಂದೂ ಮೂಢನಂಬಿಕೆಯ ಕೂಪದಲ್ಲಿರುವ ಭಾರತೀಯರಷ್ಟೇ ವಿದೇಶಗಳಲ್ಲಿ ನೆಲೆಸಿರುವ ಹಿಂದೂ ವೈದ್ಯರು, ವಿಜ್ಞಾನಿಗಳು, ಎಂಜಿನಿಯರುಗಳಲ್ಲೂ ಬಾಲಾಜಿ, ಅಯ್ಯಪ್ಪ ಸ್ವಾಮಿ, ಮಂಜುನಾಥ ಇಂತಹವರ ಹೆಸರಿನಲ್ಲಿ ಪ್ರಚಲಿತದಲ್ಲಿ ಇರುವಂತೆ ವಿದೇಶಿಯರಲ್ಲೂ ಜೀಸಸ್-ಅಲ್ಲಾರ ಹೆಸರಿನಲ್ಲಿ ಸಾಗಿದೆ ಎಂಬ ಪ್ರತೀತಿಯೂ ಇದೆ.

ಈ ಪತ್ರಗಳೆಲ್ಲದರ ಏಕಮಾತ್ರ ಉದ್ದೇಶ ಮತ್ತು ಪೂರ್ವ ಕರಾರು ಎಂದರೆ ಇಂಥದೊಂದು ಪತ್ರ ತಲುಪಿದವರು, ಮತ್ತೆ ಇದೇ ಉದ್ದೇಶವನ್ನೊಳಗೊಂಡ ಕನಿಷ್ಠ ಹದಿನಾಲ್ಕೋ, ಇಪ್ಪತ್ನಾಲ್ಕೋ ಅಥವಾ ಐವತ್ನಾಲ್ಕೋ ಪತ್ರಗಳನ್ನು ಬರೆದು, ಅಚ್ಚು ಹಾಕಿಸಿ ತಮ್ಮ ಆಪ್ತರಿಗೋ ಇಷ್ಟ ಬಂದವರಿಗೋ ಕಳಿಸಬೇಕು ಮತ್ತು ಅವರೂ ಈ ಸರಣಿ ಪ್ರಕ್ರಿಯೆಯನ್ನು ಮುಂದುವರಿಸ ಬೇಕು. ಹೀಗೆ ಮಾಡಿ ಇಂಥ ಮೊದಲ ಪತ್ರ ಬರೆದವನ ಇಷ್ಟದೈವವನ್ನು ನಾವೆಲ್ಲ ಹೆಚ್ಚುಹೆಚ್ಚಿಗೆ ಜನಪ್ರಿಯ ಗೊಳಿಸಬೇಕು. ಇಂಥದೊಂದು ಅನನ್ಯ ಭಕ್ತಿ ಚಳುವಳಿಗೆ ನಾವೇಕೆ ವೃಥಾ ಪತ್ರ ಚಳುವಳಿಯೆಂದು ಕೊಂಕು ನುಡಿಯಬೇಕು ಎಂಬುದಲ್ಲವೇ ನಮ್ಮ ಪ್ರಶ್ನೆ? ಹಾಗಿದ್ದರೆ ಈ ಪತ್ರಗಳ ಆಂತರ್ಯದ ಮೇಲೆ ಒಂದಿಷ್ಟು ಕಣ್ಣು ಹಾಯಿಸಬೇಕು. ಇಂಥ ಎಲ್ಲ ಪತ್ರಗಳನ್ನೂ ಕನಿಷ್ಠ ಎರಡರಿಂದ ಮೂರು ವಾಕ್ಯಗಳು ಪ್ರಲೋಭನೆಗೆ ಮತ್ತು ಇನ್ನೊಂದು ಮೂರ್‍ನಾಲ್ಕು ನುಡಿಗಳು ಓದುಗನಲ್ಲಿ ಭಯವನ್ನು ಹುಟ್ಟುಹಾಕುವ ಏಕಮಾತ್ರ ಉದ್ದೇಶದಿಂದ ಸೇರಿಸಲ್ಪಟ್ಟಿರುತ್ತವೆ. ಹೀಗೆ ಪತ್ರ ತಲುಪಿದವರು ಮತ್ತೆ ೧೪, ೨೪, ೫೪ ಪತ್ರ ಬರೆದುದರಿಂದ ಅನೇಕ ವರುಷ ಗಳಿಂದ ಸಂತಾನ ಭಾಗ್ಯವಿಲ್ಲದೇ ನರಳುತ್ತಿದ್ದು, ಪತ್ರ ಬರೆದಾಗ ಒಂದೇ ವರುಷದಂತರದಲ್ಲಿ ಮುದ್ದಾದ ಗಂಡುಮಗುವಿನ ತಾಯ್ತಂದೆಯಾದರು. ಹೀಗೆ ಪತ್ರಿಸಿದ ಮತ್ತೊಬ್ಬ ಇಂತಿಂಥವರಿಗೆ ೫ ಲಕ್ಷ-೫ ಕೋಟಿಯ ಲಾಟರಿ ಹೊಡೆಯಿತು, ಹೀಗೆ ಮಾಡದ ಈತ ಸ್ಕೂಟರ ಅಪಘಾತವಾಗಿ ತಲೆಯೊಡೆದು ಸತ್ತುಹೋದ, ಇನ್ನೊಬ್ಬ ತನ್ನ ಕೋಟ್ಯಂತರ ರೂಪಾಯಿ ವ್ಯವಹಾರದ ಬಿಜಿನೆಸ್‌ನಲ್ಲಿ ಕಾಣದ ಕೈಯ ಕೈವಾಡದಿಂದ ದಿವಾಳಿ ಎದ್ದು ಬೀದಿ ಭಿಕಾರಿಯಾದ – ಇಷ್ಟೆಲ್ಲ ಕೇಳಿ-ಓದಿಯೂ ಪತ್ರ ಬರೆಯಲು ಒಪ್ಪದೆ ಭಂಡತನ ತೋರುವ ಭಕ್ತಿಯ ಲವಲೇಶವಿರುವ ಭಕ್ತರು ಅದೆಷ್ಟು ಜನ ಇದ್ದಾರು! ಏನೋ ಒಂದೆರಡು ಘಂಟೆ ಕುಳಿತು ಇಂಥ ನಿರ್ದಿಷ್ಟ ಸಂಖ್ಯೆಯ ಪತ್ರ ಬರೆದು ನೂರಿನ್ನೂರು ರೂಪಾಯಿ ಖರ್ಚುಮಾಡಿ ಅಂಚೆ ಪೆಟ್ಟಿಗೆಗೆ ಹಾಕಿದರೆ ನನಗೇನು ನಷ್ಟ? ಅದರಿಂದ ಲಕ್ಷ-ಕೋಟಿ ರೂಪಾಯಿಗಳ ಲಾಟರಿ ಹೊಡೆದರಂತೂ ಸರಿಯೇ ಸರಿ ಇಲ್ಲವಾದರೂ ನನಗೆ ಭವಿಷ್ಯದಲ್ಲಿ ಆಗಲಿರುವ ಅಪಘಾತ-ಆರ್ಥಿಕ ನಷ್ಟವನ್ನಾದರೂ ತಪ್ಪಿಸಿದಂತಾದೀತಲ್ಲ. ಇನ್ನೂ ಕೊಂಚ ಹೆಚ್ಚಿಗೆ ಧೈರ್ಯವುಳ್ಳವರಾದರೂ, ಹೀಗಾದೀತೆಂಬ ಮನಃಕ್ಲೇಶದಿಂದ ದಿನ ದೂಡುವುದಕ್ಕಿಂತ ಇದಿಷ್ಟು ಮಾಡಿದರೆ ನಷ್ಟವೇನುಂಟು ಎಂದು ಲಾಭನಷ್ಟದ ಲೆಕ್ಕ ಹಾಕಿಯಾರು. ಆದರೆ ಹೀಗೆ ಮಾಡಿ ಮತ್ತೆ ಛಪ್ಪನ್ನಾರು ಜನರ ಮಾನಸಿಕ ನೆಮ್ಮದಿ ಕೆಡಿಸಿ ಅವರ ಮನದಲ್ಲಿ ಆಸೆಯ ಯಾ ಭಯದ ಬೀಜ ಬಿತ್ತುವಲ್ಲಿ ನಾವು ಅನವಶ್ಯಕ ಪಾತ್ರ ವಹಿಸುತ್ತಿದ್ದೇವೆ ಎಂದು ಮಾತ್ರ ಯಾರೊಬ್ಬರೂ ಭಾವಿಸರು.

> ಒಬ್ಬನೇ ಪ್ರತ್ಯೇಕವಾಗಿ ಉಳಿದರೆ ಅವನಿಂದ ಏನೂ ಮಾಡಲಾಗುವುದಿಲ್ಲ... ಆದರೆ ಮಿಕ್ಕವರೊಡನೆ ಸೇರಿಕೊಂಡರೆ, ನೀನು ಬದಲಾವಣೆಯನ್ನು ತರಬಲ್ಲೆ.
>
> ಭವಿಷ್ಯದಲ್ಲಿ, ಸಾಧ್ಯತೆಯಲ್ಲಿ ಭರವಸೆ ಬೇಕು. ಆದರೆ ಕ್ರಿಯಾಶೀಲನಾಗದೆ ಕೇವಲ ಭರವಸೆ ಹೊಂದಿದ್ದರೆ ಅದು ಈಡೇರುವುದಿಲ್ಲ.
>
> – ನೋಮ್ ಚೋಮ್‌ಸ್ಕಿ

ಒಂದು ಕ್ಷಣ ಆಲೋಚಿಸಿ: ಹೀಗೆ ಇಂತಿಷ್ಟು ಪತ್ರ ಬರೆಯದೆ ಹೋದರೆ ಅಪಘಾತದಲ್ಲಿ ಕಾಲು ಕಳೆದು ಕೊಂಡೀಯ, ನಿನ್ನ ಮಗನನ್ನು ಆಕಸ್ಮಿಕವೊಂದರಲ್ಲಿ ಕಳೆದುಕೊಂಡೀಯಾ, ಎಂಬ ಪರೋಕ್ಷ ಆತಂಕವನ್ನು ಆತನ ಮನದಲ್ಲಿ ಪಡಿಮೂಡಿಸದೆ ಹೋದರೆ ಅದೆಷ್ಟು ಜನ ಈ ಪತ್ರದ ನಕಲು ಪ್ರತಿ ತಯಾರಿಕೆಯಲ್ಲಿ ತೊಡಗಿಸಿ ಕೊಂಡಾರು? ನೂರಾರು ರೂಪಾಯಿ ಬಿಡಿ, ಹತ್ತಾರು ರೂಪಾಯಿಯನ್ನಾದರೂ ಯಾರು ಅಂಚೆವೆಚ್ಚಕ್ಕೆ ಭರಿಸಿ ಯಾರು? ಪತ್ರಗಳು ತಮ್ಮ ಬೆಲೆ ಕಳೆದುಕೊಳ್ಳುತ್ತಿರುವ ಇಂದಿನ ಧಾವಂತದ ಜೀವನ ಶೈಲಿಯಲ್ಲಿ ಎಸ್‌ಎಂಎಸ್ ಗಳು ಇದರ ಸ್ಥಾನ ಪಡೆಯಲೂಬಹುದು. ನನ್ನ ಮನಸ್ಸಿನ ವ್ಯಥೆಯೊಂದೇ - ಭಯಕ್ಕಿರುವ ಬೆಲೆ, ದೇವರುಗಳಿಗಿಲ್ಲದೆ ಹೋಯಿತಲ್ಲ; ಭಕ್ತಿಗೂ ಬಾರದೇ ಹೋಯಿತಲ್ಲ!

ಬುದ್ಧ ಹೇಳಿದ – ಆಸೆಯೇ ದುಃಖಕ್ಕೆ ಮೂಲ. ಹೌದು ಆತ ಹೇಳಿದ್ದು ಸಾರ್ವಕಾಲಿಕ ಸತ್ಯವಾದ ವೈಚಾರಿಕ ಮಾತು. ಆದರೆ ಇದೇ ಆಸೆಯನ್ನೇ ಭಕ್ತಿಗೆ ಮೂಲವಾಗಿ ನಾವು ಅದೆಂತು ಈ ಕಲಿಗಾಲದಲ್ಲಿ ಬಳಸಿಕೊಳ್ಳುತ್ತಿದ್ದೇವೆ ನೋಡಿ: ನಿನಗೆ ಕೋಟ್ಯಂತರ ರೂಪಾಯಿ ಲಾಭ ವಾಗುತ್ತೆ, ಪುತ್ರ ಸಂತಾನಭಾಗ್ಯ ಪ್ರಾಪ್ತಿಯಾಗುತ್ತೆ ಎಂದು ಹೇಳುತ್ತ. ಬಸವ ನುಡಿದ – ದಯೆಯೇ ಧರ್ಮದ ಮೂಲವಯ್ಯಾ! ಈ ದಯೆಯನ್ನು ಬಡಿದಟ್ಟಿ ಬದಿಗೆ ದಬ್ಬಿ ಅದರ ಜಾಗದಲ್ಲಿ ಭಯವನ್ನು ತಂದು ಕೂರಿಸಿದ ಕಲಿಗಳು ನಾವು. ಅದಕ್ಕೆಂದೇ ಹೇಳುವುದು ''ಭಯವೇ ಭಕ್ತಿಗೆ ಮೂಲವಯ್ಯಾ!''

**ಡಾ|| ಅನಿಲ ಕಮತಿ**
ಯಕ್ಸಂಬಿ - ೫೯೧ ೨೪೪



**ಭಾ**ರತ ಅಭಿವೃದ್ಧಿಶೀಲ ರಾಷ್ಟ್ರ. ಅಭಿವೃದ್ಧಿಗಾಗಿಯೇ ನಾವು ಸ್ವಾತಂತ್ರ್ಯ ಪಡೆದದ್ದು. ಒಂದು ದೇಶದ ಅಭಿವೃದ್ಧಿ ಎಂದರೇನು, ಅಭಿವೃದ್ಧಿಯ ಮಾಪಕಗಳಾವುವು ಎಂದು ಒಂದು ಕ್ಷಣ ವಿಚಾರಿಸಿದಾಗ ನಮ್ಮ ಮನದಲ್ಲಿ ಮೊದಲು ಮೂಡುವುದು ಶ್ರೀಸಾಮಾನ್ಯನ ಚಿತ್ರ ಮತ್ತು ಅವನ ಬದುಕು. ಅತಿ ಸಾಮಾನ್ಯ, ಕಟ್ಟಕಡೆಯ ಪ್ರಜೆಯ ಬದುಕು ತೃಪ್ತಿಕರವಾಗಬೇಕು, ಅದಕ್ಕೆ ಬೇಕಾಗುವ ಎಲ್ಲ ಮೂಲಭೂತ ಸೌಕರ್ಯಗಳು ಲಭ್ಯವಿರಬೇಕು. ಪ್ರತಿಯೊಬ್ಬರೂ ನೆಮ್ಮದಿಯ ಜೀವನ ಸಾಗಿಸುವಂತಿರಬೇಕು. ಇದು ಸಾಕಾರವಾಗಲು ಔದ್ಯಮಿಕ, ವಾಣಿಜ್ಯಕ, ಶೈಕ್ಷಣಿಕ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ಬಲಾಢ್ಯ ಪ್ರಗತಿಯಾಗಬೇಕು. ಇದನ್ನೇ ನಮ್ಮ ರಾಷ್ಟ್ರದ ಸಂವಿಧಾನ ಶಿಲ್ಪಿಗಳು ಬಯಸಿದ್ದು. ಸಾರ್ವಭೌಮತ್ವವುಳ್ಳ, ಸಾಮಾಜಿಕ, ಜಾತ್ಯತೀತ ಪ್ರಜಾತಂತ್ರ ದೇಶ ನಮ್ಮದಾಗಬೇಕು, ಎಲ್ಲರಿಗೂ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯ ದೊರಕಬೇಕು. ಪ್ರತಿಯೊಬ್ಬ ಪ್ರಜೆಗೂ ಸಮಾನ ಅವಕಾಶಗಳಿರಬೇಕು ಮತ್ತು ಸಮಾನತೆ ನಮ್ಮ ಜೀವನದ ಉಸಿರಾಗಬೇಕು.

ಯೋಜನೆಗಳು ಅಭಿವೃದ್ಧಿಯ ನೀಲನಕ್ಷೆಗಳು. ಅವು ಸರಕಾರಗಳಿಗೆ ದಾರಿದೀಪಗಳಾದರೆ, ಪ್ರಜೆಗಳಿಗೆ ಪ್ರಗತಿಯ ದಿಕ್ಸೂಚಿಗಳಾಗಿ ರೂಪುಗೊಳ್ಳುತ್ತವೆ. ಆದರೆ ಔದ್ಯಮಿಕ ಪ್ರಗತಿ ಮಂದಗತಿಯಲ್ಲಿ ಸಾಗಿತು. ಹೊರದೇಶಗಳಿಗೆ ರಫ್ತು

# ವಿಶೇಷ ಆರ್ಥಿಕ ವಲಯ – ಕೃಷಿಕರ ಅಂತರಾಳದ ಆರ್ತನಾದಗಳು

ಪ್ರೊ॥ ಆರ್. ಪಿ. ಪುನಗಿನ

**ದೇಶದ ಅಭಿವೃದ್ಧಿಯ ಒಂದು ಭಾಗವಾಗಿರುವ ವಿಶೇಷ ಆರ್ಥಿಕ ವಲಯಗಳ ಸ್ಥಾಪನೆಗೆ ಎಷ್ಟೇ ತಕರಾರುಗಳಿದ್ದರೂ ಈ ಆರ್ಥಿಕ ವಲಯಗಳ ಅನುಷ್ಠಾನದಲ್ಲಿ ಸಾಕಷ್ಟು ಕಾಣದ ಕೈಗಳ ಕೈವಾಡ ಈಗಾಗಲೆ ರೈತರನ್ನು ಕಂಗೆಡಿಸಿದೆ. ಕೈಯಲ್ಲಿದ್ದ ಫಲವತ್ತಾದ ಭೂಮಿಯನ್ನು ಪುಡಿಗಾಸಿಗೆ ಬಿಟ್ಟುಕೊಟ್ಟ ಅವರ ಬಾಳು ನಾಯಿಪಾಡಾಗಿದೆ. ಕಾರಣ ಈ ವಲಯಗಳ ಕಾನೂನಿನಲ್ಲಿ ಕೆಲ ಬದಲಾವಣೆಗಳನ್ನು ತರಬೇಕು, ಪ್ರತಿ ಹಂತದಲ್ಲಿ ಪ್ರಾಮಾಣಿಕತೆ ಇರಬೇಕು, ಪಾರದರ್ಶಕತೆ ಇರಬೇಕು. ಇದು ನಮ್ಮ ರೈತರ ಕೂಗು.**

ಮಾಡಬಹುದಾದ ಉದ್ಯಮಗಳು ಬೆಳೆಯಲೇ ಇಲ್ಲ. ಅಂತರರಾಷ್ಟ್ರೀಯ ಮಟ್ಟದ ಮೂಲಭೂತ ಸೌಲಭ್ಯಗಳು ಕನಸಿನ ಮಾತಾದವು. ಮುಂದುವರಿದ ದೇಶಗಳು ಮುಂದೆ ಸಾಗಿದವು. ನಾವು ಹಿಂದೆ ಉಳಿಯುತ್ತಲೇ ಹೋದೆವು. ನಮ್ಮದು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರ, ಎಂಬ ಆಗ ಕಟ್ಟಿಕೊಂಡ ತಲೆಪಟ್ಟಿಯನ್ನು ಈಗಲೂ ಬದಲಿಸಲು ಇನ್ನೂ ಸಾಧ್ಯವಾಗಿಲ್ಲವಲ್ಲ ಎನ್ನುವುದೇ ಆತಂಕದ ಸಂಗತಿ !!

ಈ ವಾಸ್ತವಾಂಶವನ್ನರಿಯಲು ನಮ್ಮನ್ನಾಳುವ ಧಣಿಗಳಿಗೆ ಎರಡು ದಶಕಗಳೇ ಬೇಕಾದವು. ಆಗ ಭಾರತರತ್ನ ಸರ್ ಎಂ. ವಿಶ್ವೇಶ್ವರಯ್ಯನವರು ''ಇಂಡಸ್ಟ್ರಿಯಲೈಜ್ ಆರ್ ಪೆರಿಶ್'' ಎಂದು ಸಾರಿದರು. ರಾಜಕಾರಣಿಗಳೂ ಎಚ್ಚೆತ್ತರು. ೧೯೬೫ರಲ್ಲಿ ಹೊರದೇಶಗಳಿಗೆ ರಫ್ತು ಮಾಡಬಲ್ಲ ಉದ್ಯಮಗಳನ್ನು ಸ್ಥಾಪಿಸಲು ಅನುಮತಿ ನೀಡುವ ಕುರಿತು ವಿಚಾರಿಸಿದರು. ಗುಜರಾತದ ಕಾಂಡ್ಲಾ ಎಂಬಲ್ಲಿ ಸಂಪೂರ್ಣ ರಫ್ತು ಉದ್ಯಮಗಳು ಸಾವಿರ ಎಕರೆ ಜಾಗದಲ್ಲಿ ನೆಲೆ ಕಂಡವು. ಆಗಲೇ ವಿಶೇಷ ಆರ್ಥಿಕ ವಲಯಗಳ ಕಲ್ಪನೆ ಮೊಳಕೆಯೊಡೆದದ್ದು. ಆದರೆ, ವಿಪರ್ಯಾಸವೆಂದರೆ ಆಗ ಮೊಳಕೆಯೊಡೆದ ಆ ಕಲ್ಪನೆಯು ನೀರು ಮತ್ತು ಆಹಾರವಿಲ್ಲದೆ ೩೫ ವರ್ಷಗಳವರೆಗೆ ಕೇವಲ ಕಲ್ಪನೆಯಾಗಿಯೇ ಉಳಿಯಿತಷ್ಟೆ. ಕೇಂದ್ರ ಸರಕಾರದ ಮೊದಲ ವಿಶೇಷ ಆರ್ಥಿಕ ವಲಯಗಳ ನೀತಿ ಪ್ರಕಟವಾದದ್ದು ಮೂರೂವರೆ ದಶಕಗಳ ನಂತರ, ಏಪ್ರಿಲ್, ೨೦೦೦ನೇ ಇಸವಿಯಲ್ಲಿ. ಈ ನೀತಿಯು ದೇಶದ ಆರ್ಥಿಕ ಪ್ರಗತಿಯ ಗತಿಯನ್ನು ಊರ್ಧ್ವಮುಖಿಯಾಗಿಸುವ ಉದ್ದೇಶ ಹೊಂದಿದ ಮಹಾತ್ವಾಕಾಂಕ್ಷಿ ನೀತಿಯೆಂದೇ ತಿಳಿದು, ಅಂತರರಾಷ್ಟ್ರೀಯ ಗುಣಮಟ್ಟದ ಮೂಲಭೂತ ಸೌಕರ್ಯಗಳನ್ನು ಅಭಿವೃದ್ಧಿಪಡಿಸಲು ಸಹಾಯಕಾರಿಯಾಗಲು, ಅದರಲ್ಲಿ ಏನೆಲ್ಲ ಸವಲತ್ತುಗಳನ್ನು ಒದಗಿಸಲು ಅವಕಾಶಗಳನ್ನು ಕಲ್ಪಿಸಲಾಯಿತು. ಸಂಪೂರ್ಣ ಕರ ಹಾಗೂ ವಾಣಿಜ್ಯ ತೆರಿಗೆ ಮತ್ತು ವರಮಾನ ತೆರಿಗೆ ವಿನಾಯಿತಿ, ವರ್ಷಕ್ಕೆ ೫೦೦ ಮಿಲಿಯನ್ ಡಾಲರ್‌ವರೆಗೆ ನೇರ ವಿದೇಶಿ ಹಣ ಹೂಡಿಕೆಗೆ ಅವಕಾಶ, ಹೀಗೆ ಧನ ಉಳ್ಳವರಿಗೆ ಕೆಂಪು ಜಮಖಾನೆ ಹಾಕಿ ಸ್ವಾಗತಿಸಲು ಅನುವು ಮಾಡಿದರು. ಈ ಘನ ಯೋಜನೆಯು ಸರಳವಾಗಿ, ಶೀಘ್ರಗತಿಯಲ್ಲಿ ಕಾರ್ಯರೂಪದಲ್ಲಿ ಬರಲಿ ಎಂಬ ಉದ್ದೇಶದಿಂದ ಎಲ್ಲ ಅಡೆತಡೆಗಳನ್ನು ಬದಿಗೆ ಸರಿಸಿ, ಒಂದೇ ಕಿಟಕಿಯಲ್ಲಿ ಎಲ್ಲ ಪರವಾನಗಿಗಳನ್ನು ಒಟ್ಟಿಗೆ ಕೊಡುವ 'ಸಿಂಗಲ್ ವಿಂಡೋ' ಪದ್ಧತಿಯನ್ನು ಜಾರಿಗೆ ತಂದರು. ಇದು ಅಧಿಕೃತವಾಗಿ ಕಾಯ್ದೆಯಾಗಿ ಹೊರಬರಲು ಮತ್ತೆ ಐದು ವರ್ಷಗಳೇ ಬೇಕಾದವು. ೨೦೦೫ನೇ ಮೇ ತಿಂಗಳಲ್ಲಿ ಎಸ್.ಇ.ಝಡ್. ಕಾಯ್ದೆ ಜಾರಿಯಾಯಿತು.

ಕೇಂದ್ರ ಸರಕಾರಕ್ಕೆ ಸಲ್ಲಿಸಲಾದ ೫೩೧ ಪ್ರಸ್ತಾಪಗಳನ್ನು ಪರಿಶೀಲಿಸಿ, ಒಟ್ಟು ೨೬೧ ವಿಶೇಷ ಆರ್ಥಿಕ ವಲಯಗಳನ್ನು ಸ್ಥಾಪಿಸಲು ಅನುಮತಿ ನೀಡಲಾಯಿತು. ಅನುಮತಿ ದೊರಕಿದ ಪ್ರಸ್ತಾಪಗಳಲ್ಲಿ, ೧೮೯ ವಿವಿಧ ರಾಜ್ಯ ಸರಕಾರಿ ಸ್ವಾಮ್ಯದ ಪ್ರಸ್ತಾಪಗಳಿದ್ದವು. ಇಲ್ಲಿಯವರೆಗೆ, ಸುಮಾರು ೭೫ ಸಾವಿರ ಕೋಟಿ ಹಣ ಈ ವಲಯಗಳಲ್ಲಿ ವಿನಿಯೋಗವಾಗಿದೆ ಮತ್ತು ಒಂದು ಲಕ್ಷ ಹದಿಮೂರು ಸಾವಿರ ಜನರಿಗೆ ಉದ್ಯೋಗ ಒದಗಿಸಲಾಗಿದೆ. ವಿಶೇಷ ವಲಯಗಳ ಕಂಪನಿಗಳು ರಫ್ತು ಮಾಡಿದ ಮೊತ್ತದ ವಿವರವನ್ನು ಈ ಮುಂದೆ ನಮೂದಿಸಲಾಗಿದೆ :



ರಫ್ತು ಮಾಡಿದ ಮೊತ್ತದ ವಿವರ

| ಅ. ಸ. | ವಿತ್ತ ವರ್ಷ | ರಫ್ತು ಕೋಟಿ ರೂ.ಗಳಲ್ಲಿ | ರಫ್ತು ಅಭಿವೃದ್ಧಿ ದರ |
|---|---|---|---|
| ೧ | ೨೦೦೩-೦೪ | ೧೩,೮೫೪ | ೩೯% |
| ೨ | ೨೦೦೪-೦೫ | ೧೮,೩೧೪ | ೩೨% |
| ೩ | ೨೦೦೫-೦೬ | ೨೨,೮೪೦ | ೨೫% |
| ೪ | ೨೦೦೬-೦೭ | ೩೪,೬೧೫ | ೫೨% |
| ೫ | ೨೦೦೭-೦೮ | ೬೬,೬೩೮ | ೯೨% |

ಚೀನಾ ದೇಶದಲ್ಲಿ ಐದು ದಶಕಗಳ ಹಿಂದೆ, ಶೆನ್‌ಝುನ್ ಎಂಬಲ್ಲಿ ಸ್ಥಾಪಿಸಿದ ವಿಶೇಷ ಆರ್ಥಿಕ ವಲಯಕ್ಕೆ ೩೦ ಬಿಲಿಯನ್ ಡಾಲರ್‌ನಷ್ಟು ಬಂಡವಾಳ ಹರಿದುಬಂತು. ಅಲ್ಲದೆ ಶಾಂಘಾಯಿನಲ್ಲಿ ಸ್ಥಾಪಿಸಿದ ಮತ್ತೊಂದು ಆರ್ಥಿಕ ವಲಯದಲ್ಲಿ ಹೂಡಿದ ಬಂಡವಾಳ ೪೫ ಬಿಲಿಯನ್ ಡಾಲರ್‌ನಷ್ಟು. ಇದಕ್ಕೆ ಹೋಲಿಸಿದರೆ ನಮ್ಮ ದೇಶದಲ್ಲಿ ಸ್ಥಾಪಿಸಿದ ಎಲ್ಲ ವಿಶೇಷ ಆರ್ಥಿಕ ವಲಯಗಳಲ್ಲಿ ಒಟ್ಟು ವಾರ್ಷಿಕ ಅಂದಾಜು ಹಣ ಹೂಡಿಕೆ ೨ ಬಿಲಿಯನ್ ಡಾಲರ್ ಮಾತ್ರ. ಚೀನಾ ದೇಶದ ಕ್ಷಿಪ್ರ ಅಭಿವೃದ್ಧಿಗೆ ಐದು ದಶಕಗಳ ಹಿಂದೆಯೇ ಸ್ಥಾಪಿಸಿದ ವಿಶೇಷ ಆರ್ಥಿಕ ವಲಯಗಳು ಕಾರಣವಾದರೆ, ಅದೇ ತರಹದ ಯೋಜನೆಗಳು ನಮ್ಮ ದೇಶಕ್ಕೆ ಈಗ ಬೇಕಿತ್ತೆ?


**Statement about ownership and other particulars about newspaper**

FORM IV

1. Place of publication : Bangalore
2. Periodicity of its publication : Monthly
3. Printer's Name : R. S. Rajaram
   Nationality : Indian
   Address : Navakarnataka Publications (P) Ltd. Embassy Centre, Crescent Road P. B. No. 5159, Bangalore - 560 001
4. Publisher's Name : R. S. Rajaram
   Nationality : Indian
   Address : Navakarnataka Publications (P) Ltd. Embassy Centre, Crescent Road P. B. No. 5159, Bangalore - 560 001
5. Editor's Name : G. Ramakrishna
   Nationality : Indian
   Address : Navakarnataka Publications (P) Ltd. Embassy Centre, Crescent Road P. B. No. 5159, Bangalore - 560 001
6. Name and address of individuals who own the newspaper and partners and shareholders holding more than one percent of the total capital : Navakarnataka Publications (P) Ltd., Embassy Centre, Crescent Road P. B. No. 5159 Bangalore - 560 001 (Sole Proprietors)

I, R. S. Rajaram, hereby declare that the particulars given above are true to the best of my knowledge and belief.

Sd/-
R. S. Rajaram
Publisher

Date : 28-2-2010


ಒಂದು ದೇಶ ಆರ್ಥಿಕವಾಗಿ ಸಬಲವಾಗಬೇಕಾದರೆ ಮತ್ತು ಆರ್ಥಿಕ ಬೆಳವಣಿಗೆಯ ದರ ಹೆಚ್ಚಬೇಕಾದರೆ, ರಫ್ತಿನ ಮೊತ್ತ ಬೆಳೆಯಬೇಕು. ಉತ್ಪಾದಿಸಿದ ಸರಕುಗಳು ಅಂತರರಾಷ್ಟ್ರೀಯ ಗುಣಮಟ್ಟ ಹೊಂದಿರಬೇಕು. ಪರದೇಶದ ಸರಕುಗಳಿಗಿಂತ ಬೆಲೆ ಕಡಿಮೆ ಇರಬೇಕು. ಹೆಚ್ಚು ಹೆಚ್ಚು ನೇರ ವಿದೇಶಿ ಬಂಡವಾಳ ದೇಶಕ್ಕೆ ಹರಿದುಬರಬೇಕು. ಇದು ಸಾಧ್ಯವಾಗಬೇಕಾದರೆ, ನಮ್ಮಲ್ಲಿಯ ಮೂಲಭೂತ ಸೌಕರ್ಯಗಳು ಅಂತರರಾಷ್ಟ್ರೀಯ ಮಟ್ಟದಲ್ಲಿರಬೇಕು. ನಮ್ಮ ಸರಕಾರಗಳು ಈ ದಿಶೆಯಲ್ಲಿ ಎಚ್ಚರಗೊಂಡದ್ದು ಇತ್ತೀಚಿನ ದಶಕದಲ್ಲಿ ಮಾತ್ರ. ಹೀಗಾಗಿ, ಅಭಿವೃದ್ಧಿ ಹೊಂದುತ್ತಿರುವ ಏಷ್ಯದ ರಾಷ್ಟ್ರಗಳಲ್ಲಿ ನೇರ ವಿದೇಶಿ ಹಣ ಹೂಡಿಕೆಯಲ್ಲಿ ನಮ್ಮ ದೇಶ ೯ನೇ ಸ್ಥಾನ ಪಡೆಯುವಂತಾಯಿತು. (ಜಾಗತಿಕ ಬ್ಯಾಂಕ್ ವರದಿ, ೧೯೯೮). ದೇಶದ ಅಭಿವೃದ್ಧಿಗಾಗಿ ರಚಿಸಿದ ಸರಕಾರದ ಯೋಜನೆಗಳು ಒಳ್ಳೆಯ ಉದ್ದೇಶಗಳನ್ನು ಹೊಂದಿದ್ದರೂ, ಅವುಗಳನ್ನು ಅನುಷ್ಠಾನಗೊಳಿಸುವಲ್ಲಿ ಸ್ವಹಿತ, ಅಪ್ರಾಮಾಣಿಕತೆ ಮತ್ತು ತಾರತಮ್ಯ ತೋರುವ ಗುಂಪು ಅತೀ ಅಪಾಯಕಾರಿ. ಇದಕ್ಕೆ ಪ್ರಮುಖವಾಗಿ ಬಲಿಯಾದುದು ನಮ್ಮ ದೇಶದ ಎಸ್.ಇ.ಝಡ್. ಯೋಜನೆ.

ಈ ಯೋಜನೆಯ ಪ್ರಮುಖ ಭಾಗವೆಂದರೆ ಇದರ ಅಗಾಧವಾದ ಪ್ರಮಾಣ, ಮಿಲಿಯನ್ ಡಾಲರ್ ಹೂಡಿಕೆಯ ಮೊತ್ತ, ವಿದೇಶಿ ವಿನಿಮಯ ಗಳಿಸಬಲ್ಲ ಗುಣಮಟ್ಟದ ಸರಕಿನ ಉತ್ಪಾದನೆ ಮತ್ತು ಎಲ್ಲಕ್ಕಿಂತ ಮಿಗಿಲಾಗಿ ಸಂಪೂರ್ಣ ಸ್ವಾವಲಂಬಿಯಾದ ಅಂತರರಾಷ್ಟ್ರೀಯ ಮಟ್ಟದ ಮೂಲಭೂತ ಸೌಕರ್ಯದ ಅಭಿವೃದ್ಧಿ. ಒಂದು ಆರ್ಥಿಕ ವಲಯಕ್ಕೆ ಬೇಕಾಗುವ ಭೂಮಿ ಕನಿಷ್ಠ ಹತ್ತು ಸಾವಿರ ಹೆಕ್ಟೇರ್. ಉದಾಹರಣೆಗೆ, ಈಗ ಸ್ಥಾಪಿತವಾದ ಕೆಲವು ವಿಶೇಷ ಆರ್ಥಿಕ ವಲಯಗಳು ಆವರಿಸಿದ ಭೂಮಿಯ ಪ್ರಮಾಣವನ್ನು ಈ ಕೆಳಗೆ ನಮೂದಿಸಲಾಗಿದೆ :

| ವಿಶೇಷ ಆರ್ಥಿಕ ವಲಯ | ಭೂಮಿಯ ಪ್ರಮಾಣ | ವಿಶೇಷ ಆರ್ಥಿಕ ವಲಯ | ಭೂಮಿಯ ಪ್ರಮಾಣ |
|---|---|---|---|
| ಮಹಾಮುಂಬೈ ಎಸ್.ಇ.ಝಡ್. | ೧೦,೦೦೦ ಹೆ. | ನವೀ ಮುಂಬೈ ಎಸ್.ಇ.ಝಡ್. | ೫,೦೦೦ ಹೆ. |
| ಮುಂದ್ರಾ, ಗುಜರಾತ್ | ೧೩,೦೦೦ ಹೆ. | ಗುರಗಾಂವ್ ಎಸ್.ಇ.ಝಡ್. | ೧೦,೦೦೦ ಹೆ. |

ಈ ವಲಯಗಳಿಗೆ ಬೇಕಾಗುವ ಭೂಮಿಯ ವಿಸ್ತಾರವೇ ಈ ಯೋಜನೆಗೆ ಮೊದಲ ತೊಡಕು. ಈ ವಲಯಗಳನ್ನು ಸರಕಾರಿ, ಅರೆಸರಕಾರಿ, ಖಾಸಗಿ ಅಥವಾ ವಿದೇಶಿಯರೂ ಸ್ಥಾಪಿಸಬಹುದು. ಯಾರೇ ಸ್ಥಾಪಿಸಿದರೂ ಅದಕ್ಕೆ ಬೇಕಾಗುವ ಭೂಮಿಯು ಸಾವಿರಾರು ಹೆಕ್ಟೇರ್; ಅದೂ ವಿಮಾನ ನಿಲ್ದಾಣಕ್ಕೆ, ನಗರಕ್ಕೆ, ಮತ್ತು ಹೆದ್ದಾರಿಗಳಿಗೆ ಸಮೀಪವಿರಬೇಕೆಂದು ಸ್ಥಾಪಿಸುವವರು ಬಯಸುವರು. ಈ ಯೋಜನೆಗೆ ಇಷ್ಟೊಂದು ಭೂಮಿ ಬೇಕಾಗಿರುವುದಾದರೂ ಯಾಕೆ ಗೊತ್ತೆ? ಈ ವಲಯಗಳು ಸಂಪೂರ್ಣ ಸ್ವಾವಲಂಬಿ ಸೌಕರ್ಯಗಳನ್ನು ಹೊಂದಿರಬೇಕೆಂದು. ಇಲ್ಲಿ ಅಂತರರಾಷ್ಟ್ರೀಯ ಮಟ್ಟದ ಬಹುಪಥ ರಸ್ತೆಗಳು, ಮೇಲುಸೇತುವೆಗಳು, ಕೆಳಮಾರ್ಗಗಳು, ರೆಸ್ಟೋರಾಂಟ್‌ಗಳು, ವ್ಯಾಪಾರಿ ಮಳಿಗೆಗಳು, ಈಜುಗೊಳಗಳು, ಗಾಲ್ಫ್ ಮೈದಾನಗಳು, ಹಣಕಾಸು ಸಂಸ್ಥೆಗಳು, ಸೂಪರ್ ಸ್ಪೆಷಾಲಿಟಿ ಹಾಸ್ಪಿಟಲ್‌ಗಳು, ತಮ್ಮದೇ ಆದ ಹೆಲಿಪ್ಯಾಡ್‌ಗಳು, ಅಷ್ಟೇ ಏಕೆ, ಖಾಸಗಿ ವಿಮಾನ ನಿಲ್ದಾಣಗಳು ಇರಬೇಕು. ಇವನ್ನೆಲ್ಲ ಆಕಾಶದಲ್ಲಿ ಕಟ್ಟಲಾಗದು. ನಮಗಿದ್ದ ಭೂಮಿಯನ್ನೇ ಉಪಯೋಗಿಸಬೇಕು. ಐಷಾರಾಮಿ ಮೂಲಭೂತ ಸೌಕರ್ಯಗಳಿಗೇ ಮುಕ್ಕಾಲು ಪ್ರತಿಶತ ಭೂಮಿ ಖರ್ಚಾದರೆ, ಉತ್ಪಾದನೆಗಾಗಿ ಈ ಯೋಜನೆಗಳು ಕಬಳಿಸಿದ ಭೂಮಿಯಲ್ಲಿ ಉಳಿಯುವ ಭೂಮಿ ಒಂದು ಕಾಲು ಭಾಗ ಮಾತ್ರ. ಇಂಥ ಖಾಸಗಿ ಐಷಾರಾಮಿ ಪಟ್ಟಣಗಳನ್ನು ಕಟ್ಟಲು ಫಲವತ್ತಾದ ಕೃಷಿ ಭೂಮಿಯನ್ನು ಬಳಸಿದರೆ, ರೈತರ ಪಾಡೇನಾದೀತು? ಈ ವಿಷಯವನ್ನು ಎಲ್ಲ ವಿಚಾರವಂತರು, ರಾಷ್ಟ್ರಾಭಿಮಾನಿಗಳು, ರಾಜಕಾರಣಿಗಳು ಮತ್ತು ಜನಸಾಮಾನ್ಯರೂ ಕೂಡ ಗಂಭೀರವಾಗಿ ಪರಿಗಣಿಸುವ ಪರಿಸ್ಥಿತಿ ಈಗ ಉತ್ಪನ್ನವಾಗಿದೆ. ಅದಕ್ಕೆಂತಲೇ ಈ ವಿಷಯಗಳು ಪ್ರತಿದಿನದ ದಿನಪತ್ರಿಕೆಗಳ ಮುಖಪುಟದ ಆಹಾರವಾಗಿವೆ, ಸುದ್ದಿಮಾಧ್ಯಮಗಳ ಪ್ರೈಮ್-ಟೈಮ್ ಉಪಕತೆಗಳ

ಭಾಗಗಳಾಗಿವೆ. ಎಂಬತ್ತು ಪ್ರತಿಶತ ಹಳ್ಳಿಗಳ ನಾಡಾದ ನಮ್ಮ ದೇಶದ ಹಳ್ಳಿಗಳಲ್ಲಿ, ಇನ್ನೂ ಮೂಲಭೂತ ಸೌಕರ್ಯಗಳ ಕೊರತೆ ಸಾಕಷ್ಟಿರುವಾಗ, ಹಳ್ಳಿಗಳ ಕೃಷಿ ಭೂಮಿಯನ್ನು ಕಬಳಿಸಿ, ಅಲ್ಲಿ ಕಾಂಕ್ರೀಟ್ ಕಟ್ಟಡಗಳಿರುವ ಖಾಸಗಿ ಪಟ್ಟಣಗಳನ್ನು ಸೃಷ್ಟಿಸುವುದು ಅದೆಷ್ಟು ಜಾಣತನದ ಯೋಜನೆಯಾದೀತು ?

ಭಾರತದ ಕೃಷಿಗೆ ಹತ್ತು ಸಾವಿರ ವರ್ಷಗಳ ಇತಿಹಾಸವಿದೆ. ಇಂದು ಭಾರತವು ಫಾರ್ಮ್ ಸರಕುಗಳನ್ನು ಉತ್ಪಾದಿಸುವಲ್ಲಿ ಜಗತ್ತಿನಲ್ಲಿಯೇ ಮುಂದಿದೆ. ವರ್ಷ ೨೦೦೭ರಲ್ಲಿ ಜಿಡಿಪಿಯ ೧೬.೬ ಪ್ರತಿಶತ ಕೊಡುಗೆ ಕೃಷಿ ಮತ್ತು ಕೃಷಿ ಆಧಾರಿತ ಕ್ಷೇತ್ರಗಳಿಂದ ದೊರಕಿದೆ. ಭಾರತದ ೬೦ ಪ್ರತಿಶತ ಜನರಿಗೆ ಕೆಲಸ ನೀಡಿದ ಪ್ರಮುಖ ಕ್ಷೇತ್ರವಿದು. ಹಾಲು, ಗೋಡಂಬಿ, ತೆಂಗು, ಚಹ, ಶುಂಠಿ, ಅರಿಶಿಣ ಮತ್ತು ಮೆಣಸು ಮುಂತಾದ ಮಸಾಲೆ ಸಾಮಾನುಗಳನ್ನು ಬೆಳೆಯುವಲ್ಲಿ ನಮ್ಮ ರೈತರು ಅಗ್ರಗಣ್ಯರು. ೨೮೧ ಮಿಲಿಯನ್ ಜಾನುವಾರುಗಳ ಬಳಗ ಭಾರತದಲ್ಲಿದೆ. ಗೋಧಿ, ಭತ್ತ, ಕಬ್ಬು ಮತ್ತು ನೆಲಗಡಲೆ ಬೆಳೆಯುವಲ್ಲಿ ಭಾರತ ಜಗತ್ತಿನಲ್ಲಿಯೇ ಎರಡನೆಯ ಸ್ಥಾನ ಪಡೆದಿದೆ. ತಂಬಾಕು ಬೆಳೆಯುವಲ್ಲಿಯೂ ಸಹ ಮುಂದಿದ್ದೇವೆ. ಜಗತ್ತಿನಲ್ಲಿ ಬೆಳೆಯುವ ಹಣ್ಣು ಹಂಪಲುಗಳಲ್ಲಿ ಭಾರತದ ಕೊಡುಗೆ ಹತ್ತು ಪ್ರತಿಶತದಷ್ಟು. ಹಾಗೆಯೇ ಜನಸಂಖ್ಯೆಯನ್ನು ಬೆಳೆಸುವಲ್ಲಿಯೂ ನಾವೇ ಮುಂದು.

ಇಷ್ಟಾದರೂ, ನಮ್ಮ ಕೇಂದ್ರ ಮತ್ತು ರಾಜ್ಯ ಸರಕಾರಗಳ ಲಕ್ಷ್ಯ ಮಾತ್ರ ದೇಶದ ಅಭಿವೃದ್ಧಿಯಲ್ಲಿ ಮಹತ್ವದ ಪಾತ್ರ ವಹಿಸಬಲ್ಲ ಈ ಕೃಷಿ ಕ್ಷೇತ್ರದ ಕಡೆಗಿರುವುದು ಎಳ್ಳಷ್ಟೂ ಸಾಲದು. ಹಳ್ಳಿಗಳಲ್ಲಿ ಹವಾನಿಯಂತ್ರಿತ ಗೋಡೌನ್‌ಗಳನ್ನು, ಕೃಷಿ ವಾಣಿಜ್ಯ ಆಧಾರಿತ ಸಂಶೋಧನಾ ಕೇಂದ್ರಗಳನ್ನು ಸ್ಥಾಪಿಸುವುದು ಮತ್ತು ಕೃಷಿ ಮಾರುಕಟ್ಟೆಗಳನ್ನು ಅಭಿವೃದ್ಧಿಪಡಿಸುವುದು, ಕೃಷಿಕರಿಗೆ ಯಾವುದಕ್ಕೂ ಸಾಲದ ಅನುದಾನ, ಕಡಿಮೆ ಬಡ್ಡಿದರದಲ್ಲಿ ಸಾಲ, ಎಡೆಬಿಡದ ವಿದ್ಯುತ್ ಸೋವಿ ದರದಲ್ಲಿ ಒದಗಿಸುವುದು, ಮುಂತಾದ ಯೋಜನೆಗಳನ್ನು ಹಾಕಿಕೊಂಡಿದ್ದರೂ, ಅವುಗಳ ಕಾರ್ಯಕ್ಷಮತೆಯು ತೃಪ್ತಿಕರವಾಗಿಲ್ಲ. ಈಗಿನ ಕೃಷಿ ಪದ್ಧತಿಗಳು ಆರ್ಥಿಕವಾಗಿಯಾಗಲಿ, ಪರಿಸರ ಸಂರಕ್ಷಣೆಯಲ್ಲಾಗಲಿ, ಹೆಚ್ಚು ಇಳುವರಿ ಕೊಡುವುದರಲ್ಲಾಗಲಿ ತೃಪ್ತಿಕರವಾಗಿಲ್ಲ. ಬರಿ ಶೇಕಡ ೫೨ ಭೂಮಿ ಮಾತ್ರ ನೀರಾವರಿಗೆ ಒಳಪಟ್ಟಿದೆ. ಇದ್ದ ನೀರಾವರಿ ಯೋಜನೆಗಳು ಹದಗೆಡುತ್ತಿವೆ, ಕೃಷಿ ಕ್ಷೇತ್ರಗಳಲ್ಲಿ ಕೂಡ ಮಾಡಿದ ಅನುದಾನಗಳು ಸರಿಯಾಗಿ ಬಳಕೆಯಾಗುತ್ತಿಲ್ಲ. ಒಬ್ಬ ಕೃಷಿಕನ ಕಡೆಗಿರುವ ಭೂಮಿಯ ವಿಸ್ತಾರ, ಕುಟುಂಬ ಕಲಹಗಳಿಂದ ಚೂರುಚೂರಾಗಿ ಸೊರಗಿದೆ. ಆಧುನಿಕ ಕೃಷಿ ಪದ್ಧತಿಗಳ ಮತ್ತು ತಂತ್ರಜ್ಞಾನದ ಬಳಕೆ ಅಷ್ಟಕ್ಕಷ್ಟೆ. ಇಂಥ ಹಲವಾರು ಕಾರಣಗಳಿಂದ ಕೃಷಿ ಕ್ಷೇತ್ರ ಬಳಲಿ ಬೆಂಡಾಗುತ್ತಿದೆ ಎಂಬುದನ್ನು ವರ್ಲ್ಡ್ ಬ್ಯಾಂಕ್ ತನ್ನ 'ಇಂಡಿಯಾ ಕಂಟ್ರಿ ಓವರ್‌ವ್ಯೂ – ೨೦೦೮'ರ ವರದಿಯಲ್ಲಿ ಉಲ್ಲೇಖಿಸಿದೆ.




ನಮ್ಮ ದೇಶದಲ್ಲಿ ಕೃಷಿ ಕ್ಷೇತ್ರವನ್ನು ಒಂದು ಉದ್ಯಮವೆಂದು ಈವರೆಗೂ ಪರಿಗಣಿಸಿಲ್ಲ. ಈ ಕ್ಷೇತ್ರವೂ ಸಾಕಷ್ಟು ವಿದೇಶಿವಿನಿಮಯ ಗಳಿಸಬಲ್ಲದು ಎಂದು ಇತ್ತೀಚೆಗೆ ನಮ್ಮ ಕೃಷಿಕರು ಕಬ್ಬು, ಹೂವು, ಹಣ್ಣುಗಳನ್ನು ಬೆಳೆದು ತೋರಿಸಿಕೊಟ್ಟಿದ್ದಾರೆ. ಹಾಲಿನ ಉತ್ಪಾದನೆಯಲ್ಲಿ ನಮ್ಮ ದೇಶ, ಜಗತ್ತಿನಲ್ಲಿ ೨ನೇ ಸ್ಥಾನದಲ್ಲಿದೆ. ಆಹಾರ ಧಾನ್ಯ ಬೆಳೆಯುವಲ್ಲಿ, ಐವತ್ತರ ದಶಕಕ್ಕೆ ಹೋಲಿಸಿದರೆ, ೧೯೯೭-೯೮ರಲ್ಲಿ ಇಳುವರಿ ನಾಲ್ಕು ಪಟ್ಟು ಹೆಚ್ಚಾದುದು ಕಂಡುಬರುತ್ತದೆ. ೧೯೫೦-೫೧ರಲ್ಲಿ ೫೧ ಮಿಲಿಯನ್ ಟನ್ ಆಹಾರ ಧಾನ್ಯ ಬೆಳೆದಿದ್ದರೆ, ೧೯೯೭-೯೮ರಲ್ಲಿ ೧೯೯ ಮಿಲಿಯನ್ ಟನ್ ಮತ್ತು ೨೦೦೮-೦೯ರಲ್ಲಿ ೨೨೮ ಮಿಲಿಯನ್ ಟನ್ ಬೆಳೆದು, ರೈತರು ಹೆಚ್ಚಿನ ವಿಶೇಷ ಸರಕಾರಿ ಯೋಜನೆಗಳಿಲ್ಲದೆ ಯಶ ಪಡೆದಿದ್ದಾರೆ. ಆದರೆ, ಕೃಷಿ ಅಭಿವೃದ್ಧಿ ದರ ಮಾತ್ರ ನೆಲಕಚ್ಚಿದೆ. ಇಲ್ಲಿಯವರೆಗೆ ಆಳಿದ ಯಾವುದೇ ಸರಕಾರಗಳು ರೈತರ ಬಗೆಗೆ ಮೊಸಳೆ ಕಣ್ಣೀರು ಸುರಿಸಿದವೇ ಹೊರತು, ಆ ಕ್ಷೇತ್ರ ಬೆಳೆಯಲು ವಿಶೇಷ ಅನುವು ಮಾಡಿಕೊಡಲೇ ಇಲ್ಲ. ಈ ಕ್ಷೇತ್ರವೂ ವಿಶೇಷ ಆರ್ಥಿಕ ವಲಯದ ಒಂದು ಭಾಗವಾಗಬಹುದು ಎಂಬುದನ್ನು ಊಹಿಸಲಿಲ್ಲ. ಅದಕ್ಕೆಂತಲೇ, ನಮ್ಮ ಹಳ್ಳಿಗಳಲ್ಲಿ ನೆಲೆ ನಿಂತ, ವಾರ್ಷಿಕ ಕೃಷಿ ಬೆಳವಣಿಗೆ ದರ ಸ್ವಾತಂತ್ರ್ಯಾನಂತರದ ಐವತ್ತು ವರ್ಷಗಳಲ್ಲಿ ೨.೭ ಪ್ರತಿಶತಕ್ಕಿಂತ ಮೇಲೇಳಲೇ ಇಲ್ಲ. ಕಳೆದ ಐದು ದಶಕಗಳ ಕೃಷಿ ಉತ್ಪನ್ನಗಳ ರಫ್ತು ವಿವರ ಮುಂದೆ ನಮೂದಿಸಲಾಗಿದೆ.

**ಕಳೆದ ಐದು ದಶಕಗಳ ಕೃಷಿ ಉತ್ಪನ್ನಗಳ ರಫ್ತು ವಿವರ**

| ಅ.ನ. | ವಿತ್ತ ವರ್ಷಗಳ ದಶಕ | ಪ್ರತಿಶತ ರಫ್ತು | ಅ.ನ. | ವಿತ್ತ ವರ್ಷಗಳ ದಶಕ | ಪ್ರತಿಶತ ರಫ್ತು |
|---|---|---|---|---|---|
| ೧ | ೧೯೬೦ | ೪೪% | ೪ | ೧೯೮೮ | ೧೮.೫% |
| ೨ | ೧೯೭೦ | ೩.೨% | ೫ | ೧೯೯೩ | ೧೫.೩% |
| ೩ | ೧೯೮೦ | ೩.೧% | - | - | - |

ವಾರ್ಷಿಕ ರಫ್ತು ಕ್ರಮೇಣ ಕಡಿಮೆಯಾದದ್ದು, ಆಂತರಿಕ ಬೇಡಿಕೆ ಹೆಚ್ಚಾಗಿದ್ದು ಒಂದು ಕಾರಣವಾದರೆ, ಜೂಟ್ ಮತ್ತು ಅರಳೆಯ ರಫ್ತಿನ ಬದಲು ನೂಲು ಮತ್ತು ಉಡುಪುಗಳ ಮತ್ತು ಸಿದ್ಧ ಉತ್ಪನ್ನಗಳ ರಫ್ತು ಮಾಡಲು ಪ್ರಾರಂಭಿಸಿದ್ದು ಮತ್ತೊಂದು ಕಾರಣ.

ದೇಶದ ಅಭಿವೃದ್ಧಿಯ ಒಂದು ಭಾಗವಾಗಿರುವ ವಿಶೇಷ ಆರ್ಥಿಕ ವಲಯಗಳ ಸ್ಥಾಪನೆಗೆ ಎಷ್ಟೇ ತಕರಾರುಗಳಿದ್ದರೂ ಈ ಆರ್ಥಿಕ ವಲಯಗಳ ಅನುಷ್ಠಾನದಲ್ಲಿ ಸಾಕಷ್ಟು ಕಾಣದ ಕೈಗಳ ಕೈವಾಡ ಈಗಾಗಲೆ ರೈತರನ್ನು ಕಂಗೆಡಿಸಿದೆ. ಕೈಯಲ್ಲಿದ್ದ ಫಲವತ್ತಾದ ಭೂಮಿಯನ್ನು ಪುಡಿಗಾಸಿಗೆ ಬಿಟ್ಟುಕೊಟ್ಟ ಅವರ ಬಾಳು ನಾಯಿಪಾಡಾಗಿದೆ. ಕಾರಣ ಈ ವಲಯಗಳ ಕಾನೂನಿನಲ್ಲಿ ಕೆಲ ಬದಲಾವಣೆಗಳನ್ನು ತರಬೇಕು, ಪ್ರತಿ ಹಂತದಲ್ಲಿ ಪ್ರಾಮಾಣಿಕತೆ ಇರಬೇಕು, ಪಾರದರ್ಶಕತೆ ಇರಬೇಕು. ಇದು ನಮ್ಮ ರೈತರ ಕೂಗು. ಪ್ರತಿಭಟನೆ ಭಾರತೀಯರ ರಕ್ತದಲ್ಲೇ ಅಡಗಿರುವ ಪರಿಣಾಮಕಾರಿ ಆಯುಧ. ಭಾರತೀಯ ರಿಸರ್ವ್ ಬ್ಯಾಂಕ್ ಕೂಡ ಇಂಥ ಖಾಸಗಿ ಒಡೆತನದ ಪಟ್ಟಣಗಳನ್ನು ಕರವಿನಾಯಿತಿ, ವರಮಾನ ತೆರಿಗೆ ವಿನಾಯಿತಿಯಂಥ ವಿಶೇಷ ಸವಲತ್ತುಗಳುಳ್ಳ ವಲಯಗಳ ಹಣೆಪಟ್ಟಿಯಿಂದ ದೂರವಿಡಬೇಕೆಂದು ಅಭಿಪ್ರಾಯಪಟ್ಟಿತು. ರಾಜಕೀಯ ಮುಖಂಡರೂ ಕೂಡ ರೈತರನ್ನು ಓಲೈಸಲು, ಫಲವತ್ತಾದ ರೈತರ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳುವ ಪ್ರಕ್ರಿಯೆಗೆ ತಡೆಯೊಡ್ಡಬೇಕೆಂದು ಗೊಣಗತೊಡಗಿದರು. ಹಾಗಾದರೆ, ಈ ವಿಶೇಷ ಆರ್ಥಿಕ ವಲಯ ಯೋಜನೆಗಳನ್ನು ಕೈಬಿಡಬೇಕೆಂಬುದು ಪ್ರಸ್ತುತ ಲೇಖಕನ ವಾದವಲ್ಲ. ಭವಿಷ್ಯದಲ್ಲಿ ಮಾಡಬೇಕಾದ ಬದಲಾವಣೆಗಳೇನು ? ಕೈಗೊಳ್ಳಬೇಕಾದ ಕ್ರಿಯಾಯೋಜನೆಗಳಾವುವು ?

೧. ವಿಶೇಷ ಆರ್ಥಿಕ ವಲಯಗಳಿಗಾಗಿ ಫಲವತ್ತಾದ ರೈತರ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳಬಾರದು.

೨. ದೇಶದಲ್ಲಿಯ ಬರಡು ಮತ್ತು ಕೃಷಿಯೇತರ ಭೂಮಿಯನ್ನು ಪತ್ತೆ ಮಾಡಿ ಅಲ್ಲಿ ಆ ವಲಯಗಳನ್ನು ಸ್ಥಾಪಿಸಬೇಕು.

೩. ಈ ದೂರದ ಆರ್ಥಿಕ ವಲಯಗಳಿಂದ ಹೆದ್ದಾರಿಗಳಿಗೆ, ರೈಲುನಿಲ್ದಾಣಗಳಿಗೆ, ಪಟ್ಟಣಗಳಿಗೆ, ವಿಮಾನ ನಿಲ್ದಾಣಗಳಿಗೆ ಸೂಕ್ತ ಸಂಪರ್ಕ ಕಲ್ಪಿಸುವುದು ವಲಯ ಅಭಿವೃದ್ಧಿಪಡಿಸುವವರ ಜವಾಬ್ದಾರಿಯಾಗಬೇಕು.

೪. ಒಂದು ವೇಳೆ ಬೇಕಾದ ಸಾವಿರಾರು ಹೆಕ್ಟೇರ್ ಭೂಮಿಯ ಮಧ್ಯೆ ಬರಬಹುದಾದ ಕೆಲವು ಕೃಷಿಭೂಮಿಯನ್ನು ರೈತರಿಂದ ಖರೀದಿಸಿ ಪಡೆದುಕೊಳ್ಳಬೇಕು. ಸರಕಾರ ಸ್ವಾಧೀನಪಡಿಸಿಕೊಳ್ಳಬಾರದು.

೫. ನಮ್ಮ ದೇಶದ ಜನ ಕರವಿನಾಯಿತಿ ಪಡೆಯಲು ಈಗಿದ್ದ ಕಾರ್ಖಾನೆಗಳನ್ನು ಸ್ಥಳಾಂತರಿಸಲು ಹಿಂಜರಿಯುವುದಿಲ್ಲ. ಅಂಥವರಿಗೆ ಅವಕಾಶ ಕೊಡಬಾರದು.

೬. ಈ ಆರ್ಥಿಕ ವಲಯಗಳು ಕೆಲವೇ ಮಹಾನಗರಗಳ ಸುತ್ತ ಬೆಳೆಯಲು ಬಿಡಬಾರದು. ಅವು ಹಳ್ಳಿಗಳತ್ತ ಮುಖಮಾಡಲು ಪ್ರೋತ್ಸಾಹಿಸಬೇಕು. ಅಂದರೆ, ಈಗಿನ ಲಂಗು ಲಗಾಮಿಲ್ಲದೆ ಬೆಳೆಯುತ್ತಿರುವ ನಗರೀಕರಣಕ್ಕೆ ತಡೆಯೊಡ್ಡಿದಂತಾಗುತ್ತದೆ.

೭. ಈ ಅಭಿವೃದ್ಧಿ ವಲಯಗಳು ದೇಶದ ಉದ್ದಗಲಗಳಲ್ಲಿ ಹಂಚಿಹೋಗಬೇಕು. ದೇಶದ ಎಲ್ಲಾ ಭಾಗಗಳ ಬೆಳವಣಿಗೆಯಲ್ಲಿ ಸಮಾನ ಅವಕಾಶಗಳಿರಬೇಕು.

೮. ಸರಕಾರಗಳು ಪ್ರಾಮಾಣಿಕತೆಗೆ ಒತ್ತುಕೊಡಬೇಕು. ಖಾಸಗಿ ವ್ಯಕ್ತಿಗಳ ಜೊತೆಗೆ ಮತ್ತು ಕಂಪನಿಗಳ ಜೊತೆಗೆ ಕೈಮಿಲಾಪ ಬಂದಾಗಬೇಕು.

೯. ಸ್ಥಾಪಿಸಿದ ವಿಶೇಷ ಆರ್ಥಿಕ ವಲಯಗಳು ಉತ್ಪಾದನೆ ಹೆಚ್ಚಿಸಿ ಮತ್ತು ವಿದೇಶಿ ವಿನಿಮಯ ಗಳಿಸಿ ದೇಶದ ಅಭಿವೃದ್ಧಿಯಲ್ಲಿ ಪಾಲುಗಾರರಾಗುವುದನ್ನು ಸರಕಾರಗಳ ನಿಯಂತ್ರಣಗಳ ಮೂಲಕ ಖಚಿತಪಡಿಸಿಕೊಳ್ಳಬೇಕು.

೧೦. ಕೈಕೆಸರು ಮಾಡಿಕೊಂಡು ದುಡಿಯುವುದಷ್ಟೆ ರೈತರಿಗೆ ಗೊತ್ತಿರುವುದು. ಸ್ವಾಧೀನ ಪಡಿಸಿಕೊಂಡಾಗ ಆಗಲಿ, ರೈತರಿಂದ ಭೂಮಿಯನ್ನು ಖರೀದಿಸಿದಾಗ ಆಗಲಿ, ಅವರಿಗೆ ದೊರೆತ ಲಕ್ಷಾಂತರ ಹಣವನ್ನು, ಅವರು ಮೈಮರೆತು ವೆಚ್ಚಮಾಡಿ ಬೀದಿಗಿಳಿಯುವುದೇ ಹೆಚ್ಚು. ರಂಟೆ, ಕುಂಟೆ ಹೆಗಲಿಗೇರಿಸಿಕೊಂಡು ಹೊಲ ಉಳುವ ರೈತ ಕೈಯಲ್ಲೊಂದು ಬಡಿಗೆ ಹಿಡಿದುಕೊಂಡು ಆರ್ಥಿಕ ವಲಯಗಳ ಬಾಗಿಲು ಕಾಯುವ ಸೆಕ್ಯೂರಿಟಿ ಗಾರ್ಡ್‌ಗಳಾಗುವ ಪರಿಸ್ಥಿತಿ ನಮ್ಮ ರೈತರಿಗೆ ಬರಬಾರದು. ಹೆಗಲಿಗೆ ಬಾರ್ಕೋಲನ್ನು ಹಾಕಿಕೊಂಡು, ದನಕರುಗಳನ್ನು ಕಟ್ಟಿಕೊಂಡು, ಮೈಮುರಿದು ದುಡಿಯುವ ರೈತ ದಾರಿ ಕಾಣದೆ ಬೀದಿಗಿಳಿದಾಗ, ಈ ಸರಕಾರದಿಂದಾಗಲಿ ಅಥವಾ ಭೂಮಿ ಪಡೆದ ಧಣಿಗಳಿಂದಾಗಲಿ, ರೈತರಿಗಾಗಿ ಅವರ ಭವಿಷ್ಯ ರೂಪಿಸಬಹುದಾದ ಯಾವುದೇ ಕಾರ್ಯಕ್ರಮಗಳು ಯೋಜನೆಯ ಕರಡುಗಳಲ್ಲಿ ಗೋಚರವಾಗುತ್ತಿಲ್ಲ. ಭೂಮಿಯನ್ನು ಕಳೆದುಕೊಂಡ ರೈತರಿಗೆ ಬರಿ ಹಣ ಕೊಟ್ಟು ಕೈ ತೊಳೆದುಕೊಳ್ಳುವುದರ ಬದಲು ಕೊಟ್ಟ ಹಣ ಸದುಪಯೋಗಪಡಿಸಿಕೊಳ್ಳಲು ತರಬೇತಿ ನೀಡಬೇಕು. ಹಣ ಬಿತ್ತಿ ಹಣ ಬೆಳೆಯುವುದನ್ನು ರೈತರಿಗೆ ಕಲಿಸಿಕೊಡಬೇಕು. ಭೂಮಿ ಕಳೆದುಕೊಂಡ ರೈತರ ಜೀವನದ ಭವಿಷ್ಯದ ಸಂಪೂರ್ಣ ಜವಾಬ್ದಾರಿಯನ್ನು ಸರಕಾರ ಮತ್ತು ಆರ್ಥಿಕ ವಲಯದ ಧಣಿಗಳು ಜೊತೆಗೂಡಿ ರೂಪಿಸಬೇಕು. ಈ ತರಬೇತಿ ಕಾರ್ಯಕ್ರಮಗಳು ಯೋಜನೆಯ ಒಂದು ಭಾಗವಾಗಿ ನಿರಂತರ ನಡೆಯುತ್ತಿರಬೇಕು.

೧೧. ಕೇಂದ್ರ ಹಾಗೂ ರಾಜ್ಯ ಸರಕಾರಗಳ ಆರ್ಥಿಕ ಮತ್ತು ವಾಣಿಜ್ಯ ಮಂತ್ರಾಲಯಗಳು, ಶಾಸಕರು, ಬುದ್ಧಿಜೀವಿಗಳು, ರೈತರು ಮತ್ತು ರೈತಪ್ರತಿನಿಧಿಗಳ ನಡುವೆ ಸಮನ್ವಯ ಮತ್ತು ಸಾಮರಸ್ಯ ಇರಬೇಕು.

೧೨. ಖಾಸಗಿ ಮಾಲೀಕತ್ವದ ಈ ವಲಯಗಳ ಭೂಮಿಯಲ್ಲಿಯ ಅಂತರ್ಜಲವನ್ನು ಮೇಲೆತ್ತಲು ಹಾಗೂ ಬಳಸಲು ನಮ್ಮ ದೇಶದ ಕಾನೂನಿನಲ್ಲಿ ನಿರ್ಬಂಧಗಳಿಲ್ಲ ಮತ್ತು ಕಟ್ಟಳೆಗಳಿಲ್ಲ. ಆ ಕಾರಣ ಈ ವಿಶೇಷ ಆರ್ಥಿಕ ವಲಯಗಳಿಗೆ ಬೇಕಾಗಬಹುದಾದ ನೀರನ್ನು ಹೇರಳವಾಗಿ ಒದಗಿಸಲು ನೀರಿನ ಹರಿವುಗಳ ಬದಲಾವಣೆಗೆ ಅವಕಾಶ ನೀಡಬಾರದು. ಈ ವಲಯಗಳಲ್ಲಿಯೇ ದೊರೆಯುವ ನೀರನ್ನು ಮತ್ತು ಉತ್ಪಾದಿಸಬಹುದಾದ ವಿದ್ಯುತ್ತನ್ನು, ಸುತ್ತಲಿನ ನಾಗರಿಕರಿಗೂ ಬಳಸಲು ಕೊಡುವ ಔದಾರ್ಯವನ್ನು ಈ ವಲಯಗಳು ಮೈಗೂಡಿಸಿಕೊಳ್ಳಬೇಕು.

೧೩. ಈ ಪ್ರದೇಶಗಳಲ್ಲಿಯ ಕಾರ್ಖಾನೆಗಳಿಂದ ಹೊರಬರುವ ಘನ ಮತ್ತು ದ್ರವ ತ್ಯಾಜ್ಯ ವಸ್ತುಗಳ ಶೇಖರಣೆ, ನಿಯಂತ್ರಣ ಮತ್ತು ವಿಲೇವಾರಿ ಸ್ವತಃ ಆರ್ಥಿಕ ವಲಯಗಳ ಜವಾಬ್ದಾರಿಯಾಗಬೇಕು. ವಲಯದಲ್ಲಿಯ ಮತ್ತು ಸುತ್ತಲಿನ ಹಳ್ಳಿಗಳಲ್ಲಿಯ ನೈರ್ಮಲ್ಯ ಕಾಪಾಡಿಕೊಳ್ಳಲು ಯೋಜನೆಗಳಿರಬೇಕು.

೧೪. ವಲಯಗಳ ಸುತ್ತಲಿನ ಹಳ್ಳಿಗಳನ್ನು ದತ್ತು ಪಡೆದುಕೊಂಡು ಅವುಗಳ ಸರ್ವಾಂಗೀಣ ಅಭಿವೃದ್ಧಿಗೆ ಸರಕಾರ ಹಾಗೂ ವಲಯಗಳೂ ಪಣತೊಡಬೇಕು.

೧೫. ಹಣವು ಹಣವನ್ನು ಸೃಷ್ಟಿಸುವುದಿಲ್ಲ, ಆದ್ದರಿಂದ, ಅಂತರರಾಷ್ಟ್ರೀಯ ಗುಣಮಟ್ಟದ ಉತ್ಪನ್ನಗಳನ್ನು ಈ ವಲಯಗಳಲ್ಲಿ ಅಭಿವೃದ್ಧಿಪಡಿಸುವುದು ಕಡ್ಡಾಯವಾಗಬೇಕು.

೧೬. ಅಂತರರಾಷ್ಟ್ರೀಯ ಮಟ್ಟದಲ್ಲಿ ಸರ್ವೋತ್ಕೃಷ್ಟ ಸೇವೆಯನ್ನು ಒದಗಿಸುವ ಮಾರ್ಗವನ್ನು ಈ ಆರ್ಥಿಕ ವಲಯಗಳು ಅನುಸರಿಸಬೇಕು.

ಒಟ್ಟಾರೆ, ರೈತರ ಫಲವತ್ತಾದ ಭೂಮಿಗೆ ಕೈ ಹಾಕದೆ ಇದ್ದರೆ ಮತ್ತು ಕೃಷಿಯನ್ನು ಇಂಥ ವಲಯಗಳ ಒಂದು ಭಾಗವೆಂದು ಪರಿಗಣಿಸಿದಾಗ, ಕೃಷಿಯು ಕೂಡ ಒಂದು ವಿದೇಶಿ ವಿನಿಮಯ ಗಳಿಸುವ ಒಂದು ಉದ್ಯಮವೆಂದು ಪರಿಗಣಿಸಿ, ಸವಲತ್ತುಗಳನ್ನು ಸರಕಾರ ಒದಗಿಸಿದಾಗ, ದೇಶದ ಸಾಮಾನ್ಯರಿಗೂ ಸಾಕಾಗುವಷ್ಟು ಹಾಗೂ ವಿದೇಶಿ ವಿನಿಮಯ ಗಳಿಸುವಷ್ಟು ದವಸ, ಧಾನ್ಯಗಳನ್ನು ಬೆಳೆಯಲು ನಮ್ಮ ರೈತರು ಸಮರ್ಥರಾಗುವರು. ಆಗ ನಮ್ಮ ದೇಶದ ಹಿಂದಿನ ಪ್ರಧಾನಿ ಲಾಲ್‌ಬಹಾದ್ದೂರ ಶಾಸ್ತ್ರಿಯವರ ಕನಸಾದ ''ಜೈ ಜವಾನ್ ಜೈ ಕಿಸಾನ್'' ಘೋಷಣೆ ಸಾಕಾರವಾದೀತು.

**ಪ್ರೊ|| ಆರ್. ಪಿ. ಪುನಗಿನ**
ನಿವೃತ್ತ ಪ್ರಾಚಾರ್ಯರು, ಕೆ.ಎಲ್.ಇ. ಸಂಸ್ಥೆಯ ಇಂಜಿನಿಯರಿಂಗ್ ಕಾಲೇಜು
ಬೆಳಗಾವಿ - ೫೯೦ ೦೦೮

# ಜಾಗತಿಕ ಹಳ್ಳಿಯಲ್ಲಿ ಲೋಹಿಯಾ ಈ ಹೊತ್ತು

ಡಾ॥ ದಸ್ತಗೀರ್‌ಸಾಬ್ ದಿನ್ನಿ



ರಾಮ ಮನೋಹರ ಲೋಹಿಯಾ ಎನ್ನುವ ಹೆಸರೇ ಒಂದು ಚುಂಬಕ ಶಕ್ತಿಯನ್ನು ಪಡೆದಿರುವಂತಹದ್ದು. ಲೋಹಿಯಾ ಆಧುನಿಕ ಭಾರತ ಕಂಡ ಶ್ರೇಷ್ಠ ಸಮಾಜವಾದಿ ಚಿಂತಕ, ಮಾನವ ಪ್ರೇಮಿ, ಸ್ವಾತಂತ್ರ್ಯ ಹೋರಾಟಗಾರ, ಕ್ರಿಯಾಶೀಲ ರಾಜಕಾರಣಿ, ನೊಂದವರ ದನಿ, ಬಂಡಾಯಗಾರ, ಗಾಂಧೀಜಿಯವರ ಅಪ್ಪಟ ಶಿಷ್ಯ, ತೀವ್ರ ಸಂವೇದನೆಯ ಲೇಖಕ – ಹೀಗೆ ಎಲ್ಲವೂ ಆಗಿದ್ದ ಅವರದು ಬಹುಮುಖ ವ್ಯಕ್ತಿತ್ವ. ಬದುಕಿನುದ್ದಕ್ಕೂ ದೀನ ದಲಿತರ ಪರವಾಗಿ ಹೋರಾಟ ಮಾಡಿ ಸೂಜಿಗಲ್ಲಿನಂತೆ ದೇಶದ ಗಮನ ಸೆಳೆದ ಲೋಹಿಯಾ ಸಮಾನತೆಯ ಸಮಾಜಕ್ಕಾಗಿ ಅವಿರತವಾಗಿ ಶ್ರಮಿಸಿದ ತ್ಯಾಗಜೀವಿ.

ಲೋಹಿಯಾ ಅವರು ಉತ್ತರ ಪ್ರದೇಶದ ಫೈಜಾಬಾದ್ ಜಿಲ್ಲೆಯ ಅಕ್ಬರಪುರದಲ್ಲಿ ೨೩-೩-೧೯೧೦ರಂದು ಜನಿಸಿದರು. ವೈಶ್ಯಕುಲದ ಹೀರಾಲಾಲ್ ಹಾಗೂ ಚಂದಾ ದಂಪತಿಗಳಿಗೆ ಒಬ್ಬನೇ ಮಗನಾಗಿ ಜನಿಸಿದ ಲೋಹಿಯಾ ಎಳೆತನದಲ್ಲಿಯೇ ತಾಯಿಯನ್ನು ಕಳೆದುಕೊಂಡರು. ಗಾಂಧೀಜಿಯ ಶಿಷ್ಯರಾಗಿದ್ದ ತಂದೆ ಹೀರಾಲಾಲ್ ಮರುಮದುವೆಗೆ ಒಪ್ಪಲಿಲ್ಲ. ಅದಕ್ಕಿಂತಲೂ ಮುಖ್ಯವಾಗಿ ಲೋಹಿಯಾ ಮಲತಾಯಿಯ ಆರೈಕೆಯಲ್ಲಿ ಬೆಳೆಯುವುದು ಇಷ್ಟವಿರಲಿಲ್ಲ. ಹೀಗಾಗಿ ಬಾಲಕ ಲೋಹಿಯಾ ಅಜ್ಜಿಯ ಪ್ರೀತಿಯ ಉಡಿಯಲ್ಲಿ ಬೆಚ್ಚಗೆ ಬೆಳೆದು ನಿಂತ. ನೆರೆಮನೆಯ ಸರಯೂ ದೇವಿಯ ಪ್ರೀತಿಯ ತುತ್ತು ಈತನಿಗೆ ದೊರೆಯಿತು. ಈಕೆಯ ಮಗ ರಾಮನಂದನನೊಂದಿಗೆ ಲೋಹಿಯಾ ತನ್ನ ಅಚ್ಚುಮೆಚ್ಚಿನ ಕೊಳಲೂದುತ್ತಾ ಬಾಲ್ಯವನ್ನು ಒಂದು ಸುಂದರ ಭಾವಗೀತೆಯಂತೆ ಕಳೆದ.

ಲೋಹಿಯಾ ಅವರದು ಕಬ್ಬಿಣ ವ್ಯಾಪಾರದ ಕುಟುಂಬ. ಉರ್ದುವಿನಲ್ಲಿ ಕಬ್ಬಿಣಕ್ಕೆ 'ಲೋಹಾ' ಎನ್ನುತ್ತಾರೆ. ಹೀಗಾಗಿ ಅವರ ಹೆಸರಿನೊಂದಿಗೆ ಲೋಹಿಯಾ ಎನ್ನುವ ಪದ ಸೇರಿಕೊಂಡುಬಂದಿದೆ. ಪ್ರಾಥಮಿಕ ಶಿಕ್ಷಣವನ್ನು ಹುಟ್ಟೂರಿನಲ್ಲಿಯೇ ಆರಂಭಿಸಿದ ಲೋಹಿಯಾ ಬಾಲ್ಯದಲ್ಲಿಯೇ ಚುರುಕಿನ ಪ್ರತಿಭಾವಂತ ವಿದ್ಯಾರ್ಥಿಯಾಗಿದ್ದ. ಜೊತೆಗೆ ಆ ವಯೋಮಾನದ ಕಿಲಾಡಿತನವೂ ಇತ್ತು. ೧೯೧೮ರಲ್ಲಿ ಅಹಮದಾಬಾದ್‌ನಲ್ಲಿ ನಡೆದ ಕಾಂಗ್ರೆಸ್ ಅಧಿವೇಶನವನ್ನು ನೋಡಲು ತಂದೆ ಹೀರಾಲಾಲ್‌ರೊಂದಿಗೆ ಹೋದ ಲೋಹಿಯಾ ಸಮಾಜವಾದಕ್ಕೆ ಸಂಬಂಧಿಸಿದ ಕರಪತ್ರವೊಂದನ್ನು ಓದಿ ಪ್ರಭಾವಿತಗೊಂಡರು. ಕೊನೆಗೆ ತಂದೆಯೊಂದಿಗೆ ಮುಂಬೈಯಲ್ಲಿ ಕೆಲವರ್ಷ ವಾಸವಾಗಿದ್ದಾಗ, ಭಾರತದ ದೇಶಭಕ್ತಿಯ ಸಂಕೇತವಾಗಿದ್ದ ಬಾಲಗಂಗಾಧರ ತಿಲಕರು ನಿಧನರಾದ ಸುದ್ದಿ ಇಡೀ ಮುಂಬೈಯನ್ನು ದುಃಖ ಸಾಗರದಲ್ಲಿ ಮುಳುಗುವಂತೆ ಮಾಡಿತು. ಇಡೀ ಮುಂಬೈ ಜನ ತಿಲಕರ ಅಂತ್ಯಕ್ರಿಯೆ ಜರುಗಿದೆಡೆಗೆ ನಡೆದಾಗ ಸ್ವಾತಂತ್ರ್ಯದ ಬಗೆಗೆ ಅಭಿಮಾನ ಪ್ರೀತಿ ಮೂಡಿತು. ಲೋಹಿಯಾರ ಎಳೆಯ ಮನಸ್ಸಿನ ಮೇಲೆ ಗಾಢವಾದ ಪರಿಣಾಮವನ್ನು ಬೀರಿತು. ಅಂದು ತಾನು ಕಲಿಯುತ್ತಿದ್ದ ಶಾಲೆಯನ್ನು ಮುಚ್ಚಿಸಿ ಸಹಪಾಠಿಗಳನ್ನು ತಿಲಕರ ಅಂತ್ಯಕ್ರಿಯೆಯ ಸ್ಥಳಕ್ಕೆ ಕರೆದುಕೊಂಡು ಹೋಗಿ ತನ್ನ ಸಂಘಟನಾ ಶಕ್ತಿಯನ್ನು ಮೆರೆದ.

ಭಾರತದ ಒಂದು ದೊಡ್ಡ ಶಕ್ತಿಯಾಗಿದ್ದ ತಿಲಕರು ಅಸ್ತಂಗತರಾದಾಗ ಅಂತಹುದೇ ಒಂದು ಶಕ್ತಿಯಾಗಿ ಮೂಡಿಬಂದವರು ಮಹಾತ್ಮಾ ಗಾಂಧೀಜಿ. ಖಿಲಾಫತ್ ಚಳವಳಿ, ಚಂಪಾರಣ್ ಸತ್ಯಾಗ್ರಹಗಳ ಮೂಲಕ ದೇಶದ ಗಮನವನ್ನು ಸೆಳೆದ ಗಾಂಧೀಜಿ ವಿದೇಶಿ ವಸ್ತುಗಳನ್ನು ಬಹಿಷ್ಕರಿಸುತ್ತಲೇ ದೇಶೀಯತೆಯನ್ನು ಎತ್ತಿ ಹಿಡಿಯಲು ಪ್ರಯತ್ನಿಸಿದರು. ಅಸಹಕಾರ ಚಳವಳಿ, ಚರಕ-ಖಾದಿಯ ಪ್ರಚಾರವನ್ನು ಕೈಗೊಂಡರು. ಅಲ್ಲದೆ ರಾಷ್ಟ್ರೀಯ ಶಿಕ್ಷಣ ಶಾಲೆಗಳ ಮುಖಾಂತರ ದೇಶದಲ್ಲಿ ಹೊಸ ಸಂಚಲನವನ್ನೇ ಉಂಟುಮಾಡಿದರು. ಲೋಹಿಯಾರಿಗೆ ಗಾಂಧೀಜಿಯ ಪರಿಚಯದಿಂದಾಗಿ ಅವರು ಸಂಘಟಿಸುತ್ತಿದ್ದ ಅನೇಕ ಜನಪರ ಜೀವಪರ ಚಳವಳಿಗಳಲ್ಲಿ ಭಾಗವಹಿಸುತ್ತಲೇ ಅವರ ಅಪ್ಪಟ ಶಿಷ್ಯರಾಗಿ ರೂಪುಗೊಂಡರು.

ಮುಂಬೈನಲ್ಲಿ ಮೆಟ್ರಿಕ್, ವಾರಣಾಸಿಯಲ್ಲಿ ಇಂಟರ್-ಮೀಡಿಯೇಟ್, ಕಲ್ಕತ್ತೆಯಲ್ಲಿ ಬಿ.ಎ. ಪದವಿಯನ್ನು ಪಡೆದುಕೊಂಡ ಲೋಹಿಯಾ ಅವರ ಪ್ರೀತಿಯ ವಿಷಯ ಇತಿಹಾಸವಾಗಿತ್ತು. ಬ್ರಿಟಿಷರು ಬರೆದ ಇತಿಹಾಸವನ್ನು ಗುಮಾನಿಯಿಂದ, ವಿಮರ್ಶಾತ್ಮಕವಾಗಿ ನೋಡಿದ ಅವರು, ವಿದ್ಯಾರ್ಥಿಜೀವನದಲ್ಲೇ ವಿದ್ಯಾರ್ಥಿ ಸಂಘಟನೆಗಳನ್ನು ಕಟ್ಟಿ ಸದಾ ಚಳವಳಿಗಳ ಮುಂಚೂಣಿಯಲ್ಲಿರುತ್ತಿದ್ದರು. ಲೋಹಿಯಾ ಒಳ್ಳೆಯ ಮಾತುಗಾರರಾಗಿದ್ದರು. ಇದರ ಹಿಂದೆ ಅಪಾರವಾದ ಓದು, ಪರಿಶ್ರಮಗಳಿದ್ದವು. ತಂದೆಯ ಸ್ಫೂರ್ತಿಯ ಶಕ್ತಿಯಿತ್ತು. ೧೯೨೮ರ ಕಲ್ಕತ್ತಾ ಕಾಂಗ್ರೆಸ್ ಅಧಿವೇಶನದಲ್ಲಿ ನೆಹರೂ ಅವರ ಪರಿಚಯ ಲೋಹಿಯಾರಿಗೆ ಆಯಿತು. ಬಡತನದ ನಡುವೆಯೂ ಲೋಹಿಯಾ ಉನ್ನತ ವ್ಯಾಸಂಗವನ್ನು ಬರ್ಲಿನ್‌ನಲ್ಲಿ ಮಾಡಲು ನಿರ್ಧರಿಸಿದರು. ವಿಶ್ವದ ಶ್ರೇಷ್ಠ ಅರ್ಥಶಾಸ್ತ್ರಜ್ಞರಾದ ಪ್ರೊ॥ ವರ್ನರ್ ಜೆಂಬಾರ್ಟ್‌ರ ಮಾರ್ಗದರ್ಶನದಲ್ಲಿ 'ಉಪ್ಪು ಮತ್ತು ಸತ್ಯಾಗ್ರಹ' ಎನ್ನುವ

ಮುಂಬೈನಲ್ಲಿ ಮೆಟ್ರಿಕ್, ವಾರಣಾಸಿಯಲ್ಲಿ ಇಂಟರ್-ಮೀಡಿಯೇಟ್, ಕಲ್ಕತ್ತೆಯಲ್ಲಿ ಬಿ.ಎ. ಪದವಿಯನ್ನು ಪಡೆದುಕೊಂಡ ಲೋಹಿಯಾ ಅವರ ಪ್ರೀತಿಯ ವಿಷಯ ಇತಿಹಾಸವಾಗಿತ್ತು. ಬ್ರಿಟಿಷರು ಬರೆದ ಇತಿಹಾಸವನ್ನು ಗುಮಾನಿಯಿಂದ, ವಿಮರ್ಶಾತ್ಮಕವಾಗಿ ನೋಡಿದ ಅವರು, ವಿದ್ಯಾರ್ಥಿ ಜೀವನದಲ್ಲೇ ವಿದ್ಯಾರ್ಥಿ ಸಂಘಟನೆಗಳನ್ನು ಕಟ್ಟಿ ಸದಾ ಚಳವಳಿಗಳ ಮುಂಚೂಣಿಯಲ್ಲಿರುತ್ತಿದ್ದರು. ಲೋಹಿಯಾ ಒಳ್ಳೆಯ ಮಾತುಗಾರರಾಗಿದ್ದರು.

ವಿಷಯವನ್ನು ಕುರಿತು ತಲಸ್ಪರ್ಶಿಯಾದ ಸಂಶೋಧನ ಅಧ್ಯಯನವನ್ನು ಕೈಗೊಂಡು ೧೯೩೨ರಲ್ಲಿ ಡಾಕ್ಟರೇಟ್ ಪದವಿಯನ್ನು ಪಡೆದರು.

ಡಾಕ್ಟರೇಟ್ ಪದವಿಯನ್ನು ಪಡೆದುಕೊಂಡು ಕೊಲಂಬೋ ಮೂಲಕ ಹಡಗಿನಲ್ಲಿ ಸ್ವದೇಶಕ್ಕೆ ಮರಳುತ್ತಿದ್ದಾಗ ಅವರಲ್ಲಿದ್ದ ಪುಸ್ತಕ, ಹಣ ಎಲ್ಲವನ್ನು ಜರ್ಮನ್ ಸರಕಾರ ಕಸಿದುಕೊಂಡಿತ್ತು. ಮದ್ರಾಸ್‌ಗೆ ಇಳಿದಾಗ ಅವರಲ್ಲಿ ಕಲ್ಕತ್ತಕ್ಕೆ ಹೋಗಲು ಹಣವಿರಲಿಲ್ಲ. ಪ್ರಯಾಣದ ಖರ್ಚನ್ನು ಹೇಗೆ ಹೊಂದಿಸುವುದು ಎಂದು ಹಾಗೆಯೇ ತಿರುಗಾಡುತ್ತಿದ್ದಾಗ 'ಹಿಂದೂ' ಪತ್ರಿಕಾಲಯ ಕಾಣಿಸಿತು. ಅಲ್ಲಿನ ಸಹ ಸಂಪಾದಕರೊಂದಿಗೆ ತನ್ನ ಪರಿಚಯವನ್ನು ಮಾಡಿಕೊಂಡ ಲೋಹಿಯಾ "ನಿಮ್ಮ ಪತ್ರಿಕೆಗೆ ಎರಡು ಲೇಖನಗಳನ್ನು ಕೊಡುವೆ" ಎಂದಾಗ "ಎಲ್ಲಿ, ಕೊಡಿ" ಎಂದರು. ಆಗ ಅವರ ಹತ್ತಿರವೇ ಪೆನ್ನು ಕಾಗದಗಳನ್ನು ಪಡೆದು ಒಂದು ತಾಸಿನಲ್ಲಿಯೇ ಆಗಿನ ಅಂತರರಾಷ್ಟ್ರೀಯ ಬೆಳವಣಿಗೆಗಳ ಬಗೆಗೆ ಸೊಗಸಾದ ಎರಡು ಲೇಖನಗಳನ್ನು ಬರೆದು ಸಂಭಾವನೆ ಪಡೆದು ಊರು ಸೇರಿದ್ದು ಅವರ ವಿದ್ವತ್ತಿಗೆ ಹಿಡಿದ ಕನ್ನಡಿ.

೧೯೩೪ರ ಮೇ ೧೭ರಂದು ಸಮಾಜವಾದಿಗಳ ಸಿದ್ಧತಾ ಸಭೆ ಕಾಂಗ್ರೆಸ್ ಅಡಿಯಲ್ಲಿಯೇ ಕಾಂಗ್ರೆಸ್ ಸಮಾಜವಾದಿ ಪಕ್ಷವಾಗಿ ಸ್ಥಾಪಿಸಿಕೊಳ್ಳಲು ನಿರ್ಧರಿಸಿತು. ಪಕ್ಷದ ತತ್ವಸಿದ್ಧಾಂತಗಳನ್ನು ಜನರಿಗೆ ತಲುಪಿಸಲು 'ಕಾಂಗ್ರೆಸ್ ಸೋಷಲಿಸ್ಟ್' ಎಂಬ ಮಾಸ ಪತ್ರಿಕೆ ತರಲು ನಿರ್ಧರಿಸಿದಾಗ ಲೋಹಿಯಾ ಅವರೇ ಸಂಪಾದಕರಾದರು. ಮಾರ್ಕ್ಸ್‌ವಾದ, ಸಮತಾವಾದ, ಗಾಂಧೀಜಿಯ ರಾಷ್ಟ್ರೀಯವಾದ ಮುಂತಾದ ವಿಚಾರಗಳ ದ್ವಂದ್ವಕ್ಕೆ ಸಿಲುಕಿದ ಲೋಹಿಯಾರ ಸಮಾಜವಾದ ಅನೇಕ ಬಿಕ್ಕಟ್ಟುಗಳನ್ನು ಎದುರಿಸುವಂತಾಯಿತು. ಸಮಾಜವಾದಿ ಚಿಂತಕರಲ್ಲೇ ಅನೇಕ ಭಿನ್ನಾಭಿಪ್ರಾಯಗಳು ಹುಟ್ಟಿಕೊಂಡವು. ಸಮಾಜವಾದವನ್ನು ಉಸಿರಾಗಿಸಿಕೊಂಡಿದ್ದ ಲೋಹಿಯಾ ಎಂತಹ ಸಂದರ್ಭದಲ್ಲೂ

## ಅಮ್ಮನ ಬಿಕ್ಕಳಿಕೆ ನಿಲ್ಲಿಸುವಿರಾ ?



ಮೊಗ್ಗಿದ್ದಾಗಲೇ ಉಡಕಿ ಗಂಡನನ್ನು ಕಟ್ಟಿಕೊಂಡು
ಡಜನ್ ಮಕ್ಕಳನ್ನು ಹೆತ್ತರೂ ಲಂಬಾಣಿಯ ಹಚಡಾ
ಕಳ್ಳಭಟ್ಟಿ ಘಾಟಿನಲಿ ಅಪ್ಪ ಮುಳುಗಿದರೂ
ಅಮ್ಮ ಬಿಕ್ಕಳಿಸಿರಲಿಲ್ಲ.

ಹಸಿದ ಮಕ್ಕಳ ಪಾಟೀ ಚೀಲ ಮೂಲೆಗೆಸೆದು
ಚಿನ್ನಿ ದಾಂಡು ಕೊಡುವ ಕೈಗಳಿಗೆ ಹಿಡಿ ನವಿಲುಗರಿ
ಚಮ್ಲಾ-ಜೋಳಿಗೆ ಕೊಟ್ಟು ಭಿಕ್ಷೆಗೆ ಕಳುಹಿಸಿದರೂ
ಅಮ್ಮ ಬಿಕ್ಕಳಿಸಿರಲಿಲ್ಲ

ಬುರ್ಖಾದ ನಕಾಬು ಬೀಸಾಕಿ
ಕುಂಟ ಎತ್ತಿನ ಜೊತೆ ನೊಗ ಹೊತ್ತು
ಹೊಲವ ಉತ್ತಿ ಬಿತ್ತಿದ್ದಾಗಲೂ
ಅಮ್ಮ ಬಿಕ್ಕಳಿಸಿರಲಿಲ್ಲ

ನೂರಾರು ಕನಸುಗಳನ್ನು ನುಚ್ಚಿನ ಗಡಿಗಗೆ ಹಾಕಿ
ಹುಟ್ಟು ತಿರುಗಿಸುವ ಹರೆಯದ ಮಗಳು
ಜೀತಕ್ಕಿದ್ದ ಚೊಚ್ಚಲ ಮಗನನ್ನು ಕಂಡು
ಅಮ್ಮ ಬಿಕ್ಕಳಿಸಿರಲಿಲ್ಲ

ರಂಜಾನ್ ಮಾಸದಲ್ಲಿ ಹಳಸಿದ ಸಂಕ್ಟಿ
ಹಕ್ಕರಕಿ ತಿಂದು ರೋಜಾ ಮುಗಿಸಿ
ಚೌಕಿಮಠದ ಪುರಾಣ ಕೇಳಿದರೂ
ಅಮ್ಮ ಬಿಕ್ಕಳಿಸಿರಲಿಲ್ಲ

ಬಿಸಿಲಿನಲಿ ಬಾಯಾರಿ ಕೆರೆಯದಡದಲಿ
ಬೊಗಸೆ ತಿಳಿ ನೀರು ಕುಡಿಯುವಾಗ
ಪ್ರತಿಬಿಂಬ ಹೇಳುವ ಸಾಂತ್ವನದಿಂದ
ಅಮ್ಮ ಬಿಕ್ಕಳಿಸಿರಲಿಲ್ಲ

ಗೊಬ್ಬರಕ್ಕಾಗಿ ಗುಂಡೇಟು ತಿಂದ
ಮಗನ ಪಾರ್ಥಿವ ಶರೀರ
ತೊಡೆಯ ಮೇಲಿಟ್ಟುಕೊಂಡು
ಅಮ್ಮ ಬಿಕ್ಕಳಿಸುತ್ತಿದ್ದಾಳೆ

ಸೆರಗಿನಂಚಿನಲ್ಲಿದ್ದ ಪುಡಿಗಾಸು
ಪೋಸ್ಟ್ ಮಾರ್ಟಮ್‌ಗಾಗಿ ಸುರಿದು
ಜಮಾತಗೆ ದಂಡ ಕಟ್ಟದೆ ಜನಾಜ ಬರದಿದ್ದಕ್ಕೆ
ಅಮ್ಮ ಬಿಕ್ಕಳಿಸುತ್ತಿದ್ದಾಳೆ

ಕಫನ್ ಚದ್ದರಿಲ್ಲದೆ
ಮೂಗು ಮುಚ್ಚಿಕೊಂಡ ಜನ ಶವ ಎತ್ತಲು
ಚಡಪಡಿಸುತ್ತಿರುವದನು ಕಂಡು
ಅಮ್ಮ ಬಿಕ್ಕಳಿಸುತ್ತಿದ್ದಾಳೆ

ಮಸೀದಿಯ ಇಲಾನ ಕೇಳಿ
ಅಂತ್ಯಕ್ರಿಯೆಗೆ ಜಮಾಯಿಸಿದ ಜನ ಚದುರಿದ್ದಾರೆ

ಏಕಲವ್ಯ ಬಿಟ್ಟ ಬಾಣದಂತೆ ಅಕ್ಷಿಗಳನ್ನು
ಆಕಾಶದತ್ತ ತಿರುಗಿಸಿ ಅಮ್ಮ ಬಿಕ್ಕಳಿಸುತ್ತಿದ್ದಾಳೆ

ಕುಂಟ ಎತ್ತು ಮುದ್ದಿನ ಟಾಮಿ
ಚುಂವ್ ಗುಡುವ ಕೋಳಿಮರಿ
ತೊದಲು ನುಡಿಯ ಮೊಮ್ಮಗಳು
ಅಜ್ಜಿಯ ಬಿಕ್ಕಳಿಕೆ ನಿಲ್ಲಿಸಲು ವಿಫಲರಾಗಿದ್ದಾರೆ

ಅಣ್ಣನ ಅಂತ್ಯ ಸಂಸ್ಕಾರಕ್ಕೆ ಜನಾಜ ಕೊಡಿಸಿ
ಗಂಜಿ ಔಷಧಿ ಗಂಟಲಲಿ ಇಳಿಯುವಂತೆ ಮಾಡಿ
ನನ್ನಮ್ಮನ ಬಿಕ್ಕಳಿಕೆ ನೀವು ನಿಲ್ಲಿಸುವಿರಾ ?
ನೀವು ನಿಲ್ಲಿಸುವಿರಾ ... ?

ಎ. ಎಸ್. ಮಕಾನದಾರ
ದ್ವಿತೀಯ ದರ್ಜೆ ಸಹಾಯಕ, ಪ್ರಧಾನ ದಿವಾಣಿ ನ್ಯಾಯಾಧೀಶರ (ಕಿ.ವಿ.) ನ್ಯಾಯಾಲಯ, ಗದಗ - ೫೮೨ ೧೦೧

ಬದ್ಧತೆಯನ್ನು ಬಿಟ್ಟುಕೊಡಲಿಲ್ಲ. ಒಬ್ಬರೇ ಆದರೂ ಸರಿ ಸಮಾಜವಾದವನ್ನು, ಪಕ್ಷವನ್ನು ಮುಂದುವರಿಸಿಕೊಂಡು ಹೋಗಬೇಕೆನ್ನುವ ದೃಢಸಂಕಲ್ಪ ಹೊತ್ತರು.

೧೯೫೫ರ ಡಿಸೆಂಬರ್ ತಿಂಗಳಲ್ಲಿ ಲೋಹಿಯಾ ಅವರು ತಮ್ಮದೇ ಆದ ಸಮಾಜವಾದಿ ಪಕ್ಷವನ್ನು ರಚಿಸಿ ಅದರ ಅಧ್ಯಕ್ಷರಾದರು. ಪ್ರತಿಭಟನೆ ಕ್ರಿಯಾತ್ಮಕತೆಗಳ ಹಿನ್ನೆಲೆಯಲ್ಲಿ ಪಕ್ಷವನ್ನು ಮುಂದುವರಿಸಿದರು. ಈ ಪಕ್ಷದಲ್ಲಿ ಮಧು ಲಿಮಯೆ, ರಬಿ ರಾಯ್, ರಾಜನಾರಾಯಣ, ಗೋಪಾಲ ಗೌಡ, ಕಿಷನ್ ಪಟ್ನಾಯಕ್, ಕೇಶವರಾವ್ ಮುಂತಾದವರಿದ್ದರು. 'ಮ್ಯಾನ್‌ಕೈಂಡ್' ಪತ್ರಿಕೆಯ ಸಂಪಾದಕರಾಗಿ ಲೋಹಿಯಾ ಸಮಾಜವಾದಿ ಚಿಂತನೆಗಳನ್ನು ಹರಿಯಬಿಟ್ಟರು.

ಜಾತ್ಯತೀತ ರಾಷ್ಟ್ರದ ಕಲ್ಪನೆಯನ್ನಿಟ್ಟುಕೊಂಡು ಅವಿರತವಾಗಿ ಹೋರಾಟ ಮಾಡುತ್ತ, ಭಾಷಣಗಳ ಮೂಲಕ ಜನರಲ್ಲಿ ರಾಷ್ಟ್ರೀಯ ಪ್ರಜ್ಞೆ, ಸಮಾಜವಾದದ ಅರಿವನ್ನು ಮೂಡಿಸಲು ಯತ್ನಿಸಿದ ಲೋಹಿಯಾ ಚುನಾವಣೆಯ ಸಂದರ್ಭದಲ್ಲಿ ನೆಹರೂ ವಿರುದ್ಧ ಲೋಕಸಭೆಗೆ ಸ್ಪರ್ಧಿಸಿ ಒಂದು ಸಲ ಸೋಲಿನ ರುಚಿಯನ್ನು ಉಂಡರೆ ಎರಡನೇ ಸಲ ಫರೂಕಾಬಾದ್ ಉಪಚುನಾವಣೆಯಲ್ಲಿ ಸ್ಪರ್ಧಿಸಿ ಪ್ರಚಂಡ ಬಹುಮತ ಪಡೆದುಕೊಂಡು ಲೋಕಸಭೆಗೆ ಆಯ್ಕೆಯಾದರು. ಸುಮಾರು ಹದಿನೆಂಟು ಬಾರಿಗೂ ಮೀರಿ ಸೆರೆಮನೆಗೆ ಹೋಗಿಬಂದ ಲೋಹಿಯಾರ ಬಂಧನಕ್ಕೆ ಅವರ ಹತ್ತಿರದವರೇ ಕಾರಣರಾಗಿದ್ದರು. ಇದೆಲ್ಲ ಗೊತ್ತಿದ್ದರೂ ವಿಚಲಿತವಾಗದ ಮನಸ್ಸು ಲೋಹಿಯಾರವರದು. 'ಗುದ್ದಲಿ ರಚನಾತ್ಮಕ ಕೆಲಸಗಳಿಗೆ, ಸೆರೆಮನೆ ಅನ್ಯಾಯದ ವಿರುದ್ಧ ಹೋರಾಟಕ್ಕೆ, ವೋಟು ಅಧಿಕಾರಕ್ಕೆ ಸಂಕೇತ' ಎಂದು ಅವರು ನಂಬಿದ್ದರು.

ಲೋಹಿಯಾ ಆಧುನಿಕ ಜಗತ್ತಿನಲ್ಲಿ ಏಳು ರೀತಿಯ ಅನ್ಯಾಯಗಳನ್ನು ಕಂಡುಕೊಂಡಿದ್ದರು. ಅವುಗಳನ್ನು ಸಮಾಜವಾದ ಹೋರಾಟದ ಮೂಲಕ ಹೋಗಲಾಡಿಸಲು ಪ್ರಯತ್ನಿಸಿದರು. ಅವುಗಳನ್ನು ಸಪ್ತಕ್ರಾಂತಿಯ ಕಲ್ಪನೆಯೆಂದು ಹೀಗೆ ಗುರುತಿಸಿದ್ದಾರೆ :

* ಗಂಡು ಮತ್ತು ಹೆಣ್ಣಿನ ನಡುವೆ ಸಮಾನತೆ
* ಎಲ್ಲಾ ರೀತಿಯ ರಾಜಕೀಯ ಗುಲಾಮಗಿರಿ ಹಾಗೂ ಸಾಮ್ರಾಜ್ಯಶಾಹಿಯ ನಾಶ
* ದೇಶದ ಜನತೆಯ ನಡುವೆ ಮತ್ತು ದೇಶ ದೇಶಗಳ ನಡುವೆ ಆರ್ಥಿಕ ಸಮಾನತೆ
* ಸಾಮೂಹಿಕತೆಯ ಅಲೆಗಳ ವಿರುದ್ಧ ಮನುಷ್ಯನ ಖಾಸಗೀತನದ ರಕ್ಷಣೆ
* ವಿಶೇಷ ಪ್ರಾಶಸ್ತ್ಯದ ಮೂಲಕ ಜಾತಿ ನಿರ್ಮೂಲನೆ
* ನಿಶ್ಶಸ್ತ್ರೀಕರಣ ಮತ್ತು ನಾಗರಿಕ ಅಸಹಕಾರ ಸತ್ಯಾಗ್ರಹದ ಬಳಕೆ
* ಎಲ್ಲಾ ಬಣ್ಣಗಳ ಜನತೆಯ ನಡುವೆ ಸಮಾನತೆ ಮತ್ತು ಸೌಂದರ್ಯ ಮೀಮಾಂಸೆಯಲ್ಲಿ ಕ್ರಾಂತಿ

ಲೋಹಿಯಾ ಅವರು ಮಾತೃಭಾಷೆಗೆ ಹೆಚ್ಚು ಒತ್ತುಕೊಟ್ಟಿದ್ದರು. ನಮ್ಮ ಪ್ರಜಾಪ್ರಭುತ್ವಕ್ಕೆ ನಿಜವಾದ ಅರ್ಥ ಬರಬೇಕಾದರೆ ಜನಭಾಷೆಗಳನ್ನೇ ಬಳಸಬೇಕಾದ ಅಗತ್ಯವಿದೆ ಎಂದು ನಂಬಿದ್ದರು. ಭಾರತೀಯ ಸಮಾಜದಲ್ಲಿ ಹಣ, ಇಂಗ್ಲಿಷ್ ಭಾಷೆ ಹಾಗೂ ಮೇಲುಜಾತಿ ಇವು ಮೂರು ಒಂದೆಡೆ ಸೇರಿದರೆ ದೇಶದಲ್ಲಿ ಭಯಾನಕ ಪರಿಸ್ಥಿತಿ ತೋರುವುದರಲ್ಲಿ ಅನುಮಾನವಿಲ್ಲವೆಂದು ಎಚ್ಚರಿಕೆ ನೀಡಿದ್ದರು. ಜೊತೆಗೆ, ಮಹಿಳೆಯರ ಬಗ್ಗೆ ವಿಶೇಷ ಗೌರವ, ಪ್ರೀತಿಗಳನ್ನಿಟ್ಟುಕೊಂಡಿದ್ದರು. ಮಹಿಳೆಯರು ಅನಾದಿಕಾಲದಿಂದಲೂ ಜಗತ್ತಿನೆಲ್ಲೆಡೆ ಕಂಡುಬರುವ ಗಂಡಿನ ದಬ್ಬಾಳಿಕೆಯಿಂದ, ಅದಕ್ಕಿಂತಲೂ ಮುಖ್ಯವಾಗಿ ಉಸಿರುಗಟ್ಟಿಸುವ ಜಾತಿಪದ್ಧತಿಯಿಂದ, ನಿರಂತರವಾಗಿ ಕಷ್ಟಗಳನ್ನೆದುರಿಸುತ್ತಿದ್ದಾರೆ ಎಂದು ಗುರುತಿಸಿದ್ದರು. ಹೀಗಾಗಿ ಮಹಿಳೆಯರು ಹೋರಾಟಗಳಲ್ಲಿ ಪಾಲ್ಗೊಳ್ಳಬೇಕಾದ ಅನಿವಾರ್ಯತೆಯನ್ನು ಪದೇ ಪದೇ ಹೇಳುತ್ತಿದ್ದರು.

ಲೋಹಿಯಾ ಕೃಷಿ ಕ್ಷೇತ್ರದ ಬಗೆಗೆ, ರೈತರ ಬಗೆಗೆ ಅಪಾರ ಕಾಳಜಿಯನ್ನು ಇಟ್ಟುಕೊಂಡಿದ್ದರು. ಅವರ ಪರವಾಗಿ ರೈತ ಚಳವಳಿಯನ್ನು ರೂಪಿಸಿದರು. ಸಣ್ಣ ಯೋಜನೆಗಳಿಗೆ ಆದ್ಯತೆಯನ್ನು ಕೊಡಬೇಕು; ರೈತನ ಬೆಳೆಗೆ ಸರಿಯಾದ ಬೆಲೆ ನಿಗದಿಯಾಗಬೇಕು; ಜಮೀನ್ದಾರಿ ಪದ್ಧತಿ ನಾಶವಾಗಿ ಉಳುವವನೇ ಒಡೆಯನಾಗಬೇಕು; ಹಳ್ಳಿಯ ಹೆಚ್ಚುವರಿ ಭೂಮಿಯ ಹಂಚಿಕೆಯಾಗಬೇಕು ಎಂದು ನಿರೂಪಿಸಿದರು. ಜೊತೆಗೆ ಸಣ್ಣ ಘಟಕಗಳ ತಂತ್ರಜ್ಞಾನವನ್ನು ಕುರಿತು ತಮ್ಮ ಸಿದ್ಧಾಂತವನ್ನು ಪ್ರತಿಪಾದಿಸಿದರು. ಈ ಎಲ್ಲ ಯೋಜನಾಬದ್ಧವಾದ ಆಲೋಚನೆಗಳು ಅವರ ದೂರದೃಷ್ಟಿಗೆ ಉದಾಹರಣೆಗಳಾಗಿದ್ದವು.

ಒಮ್ಮೆ ಲೋಹಿಯಾ ಅವರು ದ್ವಿಚಕ್ರವಾಹನದಲ್ಲಿ ಹೋಗುತ್ತಿರುವಾಗ ತಳ್ಳುಗಾಡಿಯಲ್ಲಿ ಕಾಯಿಪಲ್ಲೆ ಇಟ್ಟುಕೊಂಡು ಬರುವ ವ್ಯಕ್ತಿಯನ್ನು ಆಕಸ್ಮಿಕವಾಗಿ ಅಪಘಾತಗೊಳಿಸುತ್ತಾರೆ. ಆ ವ್ಯಕ್ತಿ ಕೆಳಗೆ ಬಿದ್ದಾಗ ಅಷ್ಟೇನೂ ಗಾಯಗಳಾಗಿರುವುದಿಲ್ಲ. ಆದರೂ ಸಿಟ್ಟಿನಿಂದ

ಉತ್ತಮವಾದ ಒಳ್ಳೆಯ ಸಮಾಜವನ್ನು ರಚಿಸಬೇಕು. ಅದರ ಸಾಧನೆಗೆ ಬಹುಮುಖ್ಯವಾಗಿ ಬೇಕಾದುದು ಸತ್ಯ, ವಾಸ್ತವ ಏನು ಎನ್ನುವ ತಿಳುವಳಿಕೆ. ಬರೇ ಸತ್ಯದ ಅನಾವರಣವಾದರೆ ಅದು ತನ್ನನ್ನು ತಾನು ಸ್ಥಾಪಿಸಿಕೊಳ್ಳುತ್ತದೆ ಎಂದು ಹೇಳಲಾರೆ. ಆದರೆ ಅದನ್ನು ಬಿಟ್ಟು ಇನ್ನೇನು ತಾನೆ ಬೇರೆ ಮಾರ್ಗ ಇದೆ ? ಈಗಾಗಲೇ ಇರುವ ಜನಪ್ರಿಯ ಚಳುವಳಿಗಳಿಗೆ, ಅಲ್ಲಲ್ಲಿ ಇರುವ ಬಿಡಿಬಿಡಿ ಸತ್ಯಾನ್ವೇಷಕ ವ್ಯಕ್ತಿಗಳು ಅವರ ಕಾರ್ಯಕ್ರಮಗಳಿಗೆ ಸಹಾಯವಾಗುವ ಸತ್ಯಗಳನ್ನು ಹೆಕ್ಕಿ ಹೆಕ್ಕಿ ನೀಡುವ ಕೆಲಸ ಮಾಡಬೇಕು. ಅದನ್ನು ನಾನು ಮಾಡುತ್ತೇನೆ. ಸತ್ಯವನ್ನು ಬಿಚ್ಚಿಡುವುದು, ಸುಳ್ಳುಗಳನ್ನು ಬಹಿರಂಗಗೊಳಿಸುವುದು ಬುದ್ಧಿಜೀವಿಯ ಪ್ರಥಮ ಜವಾಬ್ದಾರಿ.

ಭಯೋತ್ಪಾದಕರ ವಿರುದ್ಧ ಯುದ್ಧ ಎಂಬುದು ವಿರೋಧಾಭಾಸದ ಪದ. ತಾರ್ಕಿಕವಾಗಿ ಅದು ಸರಿಯಲ್ಲ.

***ನೋಮ್ ಚೋಮ್‌ಸ್ಕಿ*** *(೨೦೦೨)*
*(ಸಂ : ಯುದ್ಧವೇ ಭಯೋತ್ಪಾದನೆ ಎಂದು ಅರ್ಥ)*

ಲೋಹಿಯಾರನ್ನು ಬೈಯುತ್ತಾನೆ. ಜೊತೆಗೆ, ಪೊಲೀಸರಿಗೆ ಹೇಳಿ ಶಿಕ್ಷೆ ಕೊಡಿಸುತ್ತೇನೆ ಎಂದಾಗ ಲೋಹಿಯಾ "ಅರ್ಧ ಗಂಟೆ ಸಮಯ ಕೊಡುತ್ತೇನೆ. ಪೊಲೀಸರನ್ನು ಕರೆದುಕೊಂಡು ಬಾ. ನಿನಗಾಗಿ ಕಾಯುತ್ತ ನಿಂತಿರುತ್ತೇನೆ" ಎನ್ನುತ್ತಾರೆ. ಪೊಲೀಸರನ್ನು ಕರೆದುಕೊಂಡು ಬರಲು ಹೋದ ಆ ವ್ಯಕ್ತಿ ಅರ್ಧ ತಾಸಿನ ನಂತರ ಒಬ್ಬನೇ ಬರುತ್ತಾನೆ. ಪೊಲೀಸರೆಲ್ಲಿ ಎಂದು ಕೇಳಿದಾಗ ಯಾರೂ ಸಿಗಲಿಲ್ಲ ಎನ್ನುತ್ತಾನೆ. ಆಗ ಲೋಹಿಯಾ "ನಮ್ಮ ವ್ಯವಸ್ಥೆ ಇರೋದೆ ಹೀಗೆ. ಯಾವಾಗ ಪೊಲೀಸರು ಸಿಗಬೇಕೋ ಆಗ ಸಿಗುವುದಿಲ್ಲ, ಯಾವಾಗ ಸಿಗಬಾರದೋ ಆಗ ನಮಗೆ ಸಿಗುತ್ತಾರೆ" – ಎಂದಾಗ ಆ ವ್ಯಕ್ತಿ ಲೋಹಿಯಾರ ಅಭಿಮಾನಿಯಾಗುತ್ತಾನೆ. ಈ ಒಂದು ಪ್ರಸಂಗದಿಂದ ಲೋಹಿಯಾರ ವ್ಯಕ್ತಿತ್ವವನ್ನು ಅರಿಯಬಹುದಾಗಿದೆ.

ಕರ್ನಾಟಕದ ಸಾಂಸ್ಕೃತಿಕ ಲೋಕದ ಮೇಲೆ ಅವರ ವಿಚಾರಗಳು ಈ ಹೊತ್ತಿಗೂ ವ್ಯಾಪಕವಾಗಿ ಪ್ರಭಾವ ಬೀರುತ್ತಿರುವುದನ್ನು ನೋಡಿದರೆ ಅವರ ಸಿದ್ಧಾಂತದ ಅನನ್ಯತೆ ಅರ್ಥವಾಗದೆ ಇರದು. ರಾಮ ಮನೋಹರ ಲೋಹಿಯಾ ಲೇಖಕರಾಗಿದ್ದು, ಇಂಗ್ಲಿಷ್ ಹಾಗೂ ಹಿಂದಿ ಭಾಷೆಗಳಲ್ಲಿ ಸುಮಾರು ಇಪ್ಪತ್ತೈದಕ್ಕೂ ಹೆಚ್ಚು ಮೌಲಿಕ ಕೃತಿಗಳನ್ನು ಪ್ರಕಟಿಸಿದವರು. ಅವರ ಅನೇಕ ಪುಸ್ತಕಗಳು ಮರುಮುದ್ರಣಗೊಂಡು ದೇಶದ ಅಗಣಿತ ಓದುಗರ ಗಮನವನ್ನು ತೀವ್ರವಾಗಿ ಸೆಳೆದಿವೆ. ಕನ್ನಡದಲ್ಲೂ ಕೂಡ ಇವರ ಬರಹಗಳು ಅನುವಾದವಾಗಿವೆ. ಆದರೂ ಈ ನಿಟ್ಟಿನಲ್ಲಿ ಆಗಬೇಕಾದ ಕೆಲಸ ಬಹಳಷ್ಟಿದೆ.

ಜಾತ್ಯತೀತ ಪರಿಕಲ್ಪನೆ, ಮಾತೃಭಾಷೆಯಲ್ಲಿ ಶಿಕ್ಷಣ, ದೇಶೀಯತೆಯ ಪ್ರಜ್ಞೆ, ಸ್ವಾತಂತ್ರ್ಯದ ಆತ್ಮವಿಶ್ವಾಸ, ರೈತಪರಚಿಂತನೆ, ಅಧಿಕಾರ ವಿಕೇಂದ್ರೀಕರಣ ಹೀಗೆ ಹಲವು ಹತ್ತು ವಿಷಯಗಳನ್ನು ಜಾಗತೀಕರಣದ ಈ ಹೊತ್ತಿನಲ್ಲಿ ಏನಾಗಿವೆ ಎಂದು ಪ್ರಶ್ನಿಸಿಕೊಂಡರೆ ದಿಗ್ಭ್ರಮೆಯಾಗುತ್ತದೆ. ಸಮಾಜವಾದದ ಹೆಸರಿನಲ್ಲಿ ನಮ್ಮ ಜನಪ್ರತಿನಿಧಿಗಳು ನಡೆಸುತ್ತಿರುವ ನಾಟಕ ಹೇಸಿಗೆ ಹುಟ್ಟಿಸುವಂತಿದೆ. ಅಧಿಕಾರದ ಹಪಾಹಪಿ, ತಲೆಕೆಳಗಾದ ಮೌಲ್ಯಗಳು, ಸಾಮಾಜಿಕ ವ್ಯವಸ್ಥೆ ಸೂತ್ರ ಹರಿದ ಗಾಳಿಪಟದಂತಾಗಿರುವುದು ದೇಶದ ದೊಡ್ಡ ದುರಂತ. ಇಂತಹ ಪ್ರಕ್ಷುಬ್ಧ ಸನ್ನಿವೇಶದಲ್ಲಿ ಲೋಹಿಯಾರ ವಿಚಾರಗಳನ್ನು ಮುಖಾಮುಖಿ ಮಾಡಿಕೊಳ್ಳುವ, ಸಾಂಸ್ಕೃತಿಕವಾಗಿ ಅನುಸಂಧಾನಗೊಳಿಸುವ ಕೆಲಸ ಎಂದಿಗಿಂತಲೂ ಇಂದು ಜರೂರಾಗಿ ಆಗಬೇಕಿದೆ. ಹದಗೆಟ್ಟಿರುವ ಇಂದಿನ ಸಾಮಾಜಿಕ ವ್ಯವಸ್ಥೆಗೆ ಅವರ ಚಿಂತನೆಗಳು ಖಂಡಿತ ದಿಕ್ಸೂಚಿಯಾಗಬಲ್ಲವು.

**ಡಾ|| ದಸ್ತಗೀರ್‌ಸಾಬ್ ದಿನ್ನಿ**
ಕನ್ನಡ ಉಪನ್ಯಾಸಕರು, ಸರಕಾರಿ ಪ್ರಥಮ ದರ್ಜೆ ಕಾಲೇಜು
ರಾಯಚೂರು - ೫೮೪ ೧೦೧



ನಭಾವಲೋಕನ

# ಯುಗಾದಿಯ ಸಂಭ್ರಮ

ವಸಂತದ ಆಗಮನವನ್ನು ಸೂಚಿಸುವ ಚಿಗುರೆಲೆಗಳು ಮೂಡುತ್ತಿದ್ದ ಹಾಗೆ ಬಿಸಿಲು ಚುರುಕಾಗುತ್ತದೆ. ನೀಲಿಯ ಆಕಾಶ ಬಣ್ಣ ಕಳೆದುಕೊಳ್ಳುತ್ತದೆ. ಬೂದು ಬಣ್ಣಕ್ಕೆ ತಿರುಗುತ್ತದೆ. ಸಂಜೆ ಆದೊಡನೆ ಗಮನ ಸೆಳೆಯುವ ಚುಕ್ಕೆಗಳು ಎರಡು - ಪೂರ್ವದಲ್ಲಿ ಮಂಗಳ - ಕಿತ್ತಲೆ ಬಣ್ಣದ್ದು - ಪಶ್ಚಿಮದಲ್ಲಿ ಶುಕ್ರ. ತಿಂಗಳ ಆರಂಭದಲ್ಲಿ ದಿಗಂತದ ಅಂಚಿನಲ್ಲಿ ಕಂಡೂ ಕಾಣದಂತೆ ಮಾಯವಾಗುವ ಶುಕ್ರ ದಿನೇ ದಿನೇ ಮೇಲೇರುತ್ತದೆ. ತಿಂಗಳ ಕೊನೆಗೆ ಅನುಕೂಲಕರವಾದ ಎತ್ತರದಲ್ಲಿ ಕೋರೈಸುತ್ತದೆ. ೧೭ರ ಸಂಜೆ ರೇಖಾ ಚಂದ್ರನ ಸಹಾಯದಿಂದ ಇದನ್ನು ಹುಡುಕಬಹುದು. ಪೂರ್ವದಲ್ಲಿ ಸ್ವಲ್ಪ ಎತ್ತರದಲ್ಲಿಯೇ ಕಾಣುವ ಮಂಗಳ ಸಾಕಷ್ಟು ಪ್ರಕಾಶಮಾನವಾಗಿದೆ. ಅದರ ಪಕ್ಕದಲ್ಲಿಯೇ ಇರುವ ಪ್ರೆಸಿಪಿ ಎಂಬ ಗುಚ್ಛವನ್ನು ಚಂದ್ರನಿಲ್ಲದಾಗ ದುರ್ಬೀನಿನ ಸಹಾಯದಿಂದ ಕಾಣಬಹುದು. ೨೫ರಂದು ಚಂದ್ರ ಇದರ ಪಕ್ಕದಿಂದ ಹಾದುಹೋಗುವುದು.

ತಿಂಗಳ ಕೊನೆಗೆ ಸಂಜೆ ಕಾಣಲಿರುವ ಇನ್ನೊಂದು ಗ್ರಹ ಶನಿ. ತಿಂಗಳ ಆರಂಭದಲ್ಲಿ ಸುಮಾರು ಎಂಟುಗಂಟೆಗೆ ಉದಯಿಸುವ ಇದು ೨ರಂದು ಮತ್ತು ೨೯ರಂದು ಚಂದ್ರನ ಜೊತೆಗೂಡಲಿದೆ. ೨೨ರಂದು ವಿಯುತಿ, ಅಂದರೆ ರಾತ್ರಿ ಇಡೀ ನೋಡಲು ಸಿಗುವುದು. ಪ್ರಕಾಶವೂ ಗರಿಷ್ಠ. ಉಪಗ್ರಹಗಳನ್ನು ಮತ್ತು ಉಂಗುರಗಳನ್ನು ನೋಡಲು ಒಳ್ಳೆಯ ಅವಕಾಶ.

ಸಾಮಾನ್ಯವಾಗಿ ಸಂಜೆಗೆಂಪಿನಲ್ಲಿ ಕಾಣದಂತಾಗುವ ಬುಧ ಗ್ರಹವನ್ನು ಹುಡುಕಲು ಈ ತಿಂಗಳು ಒಳ್ಳೆಯ ಅವಕಾಶವಿದೆ. ಮಾರ್ಚ್ ೨೨ರ ಹೊತ್ತಿಗೆ ಸಂಜೆ ಕಾಣಿಸಿಕೊಳ್ಳುವ ಈ ಚುಕ್ಕೆ ಬರಬರುತ್ತಾ ಮೇಲೇರಿ ತಿಂಗಳ ಕೊನೆಗೆ ಸ್ಫುಟವಾಗಿ ಶುಕ್ರದ ಜೊತೆ ಕಾಣುವುದು.



೨೯ರ ಸಂಜೆ ಪಶ್ಚಿಮದಲ್ಲಿ ಬುಧ ಮತ್ತು ಶುಕ್ರ

ಬರಿಗಣ್ಣಿಗೆ ಕಾಣುವ ಇನ್ನೊಂದು ಗ್ರಹ ಗುರು. ಅದರ ನೋಟ ಈ ತಿಂಗಳು ಲಭ್ಯವಿಲ್ಲ. ತಿಂಗಳ ಕೊನೆಗೆ ಬೆಳಗಿನ ಜಾವ ದಿಗಂತದ ಅಂಚಿನಲ್ಲಿ ಕಾಣುವುದು.

ಸಂಜೆಯ ಆಕಾಶದಲ್ಲಿ ಕಾಣುವ ನಕ್ಷತ್ರಗಳಲ್ಲಿ ಮುಖ್ಯ ಆಕರ್ಷಣೆ ಆಕಾಶಗಂಗೆ. ಇದು ಒರೆಯನ್ - ಮಹಾವ್ಯಾಧ ನಕ್ಷತ್ರ ಪುಂಜ, ಅದರ ದಕ್ಷಿಣದ ಮಹಾಶ್ವಾನ, ಅತಿ ಪ್ರಕಾಶಮಾನವಾದ ಲುಬ್ಧಕ (ಸಿರಿಯಸ್) ಮತ್ತು ಅಗಸ್ತ್ಯ (ಕೆನೋಪಸ್) ಇರುವ ಕರೀನಾ ಈ ಪುಂಜಗಳ ಮೂಲಕ ಹಾದುಹೋಗುವುದು. ಉತ್ತರದ ಭಾಗ ವಿಜಯಸಾರಥಿ, ಪಾರ್ಥ ಮತ್ತು ಕುಂತಿ ಈ ಪುಂಜಗಳ ಮೂಲಕ ಹಾಯುವುದು.




ಕ್ಷೀಣವಾದ ಉಲ್ಕಾವೃಷ್ಟಿಯೊಂದು ಈ ತಿಂಗಳು ೧೩ರಂದು ಗರಿಷ್ಠ ಮುಟ್ಟಲಿದೆ. ಆದರೆ ಗಂಟೆಗೆ ಕೇವಲ ೫-೧೦ ಉಲ್ಕೆಗಳು ಮಾತ್ರ ಕಾಣಬಹುದು. ದಕ್ಷಿಣದ ನಾರ್ಮಾ ಎಂಬ ಪುಂಜದಿಂದ ಹೊರಟಂತೆ ಕಾಣುವವು. ಇದು ವೃಶ್ಚಿಕ ರಾಶಿಯ ದಕ್ಷಿಣಕ್ಕಿದೆ. ಅಮಾವಾಸ್ಯೆಯ ವೇಳೆಗೆ ಗರಿಷ್ಠ ಮುಟ್ಟುವುದರಿಂದ ನೋಡುವ ಸಾಧ್ಯತೆ ಇದೆ ಎನ್ನಬಹುದು.

ಸಿ ೨೦೦೭ಕ್ಯೂ೩ ಎಂಬ ಧೂಮಕೇತು ಸ್ವಾತಿ ನಕ್ಷತ್ರದ ಸಮೀಪ ಹಾದು ಹೋಗಲಿದೆ. ಆದರೆ ಇದು ಬರಿಗಣ್ಣಿಗೆ ಕಾಣಲಾರದು. ದುರ್ಬೀನಿನಿಂದ ನೋಡುವಾಗ ಪಕ್ಕದಲ್ಲೇ ಇರುವ ಎಂ ೧೦೨ ಎಂಬ ಗೆಲಾಕ್ಸಿ ತಬ್ಬಿಬ್ಬು ಮಾಡಬಹುದು.

### ಖಗೋಳ ದಿನಚರಿ

೨ ಶನಿ ಚಂದ್ರ ಜೋಡಿ*
೭ ಚಾಂದ್ರಮಾಸದ ಕೊನೆಯ ಪಾದ
ಚಂದ್ರ ಜ್ಯೇಷ್ಠಾ ಜೋಡಿ*
೧೧ ಮಂಗಳದ ಹಿನ್ನಡೆ ಮುಕ್ತಾಯ
೧೨ ಚಂದ್ರ - ಭೂಮಿ ನಡುವೆ ಗರಿಷ್ಠ ದೂರ
೧೪ ಬುಧ ಗ್ರಹದ ಯುತಿ
೧೬ ಅಮಾವಾಸ್ಯೆ ೦೦:೩೧ಕ್ಕೆ
ಚಂದ್ರ - ಬುಧ ಜೋಡಿ*
೧೭ ಶುಕ್ರ - ಚಂದ್ರ ನಡುವೆ ಕನಿಷ್ಠ ಕೋನ*
೨೦ ವಸಂತ ವಿಷುವ ೨೩:೦೨ಕ್ಕೆ
೨೧ ರೋಹಿಣಿ ಚಂದ್ರ ಕೃತ್ತಿಕಾ ಜೋಡಿ*
೨೨ ಶನಿಗ್ರಹದ ವಿಯುತಿ
೨೩ ಚಾಂದ್ರ ಮಾಸದ ಮೊದಲ ಪಾದ
೨೪ ಡೆಲ್ಟಾ ಲಿಯೋನಿಡ್ಸ್ ಉಲ್ಕಾವೃಷ್ಟಿ
೨೫ ಮಂಗಳ ಚಂದ್ರ ಜೋಡಿ*
೨೮ ಚಂದ್ರ - ಭೂಮಿ ನಡುವೆ ಕನಿಷ್ಠ ದೂರ
೨೯ ಶನಿ ಚಂದ್ರ ಜೋಡಿ*
೩೦ ಹುಣ್ಣಿಮೆ ೦೭:೫೫ಕ್ಕೆ
(* ಛಾಯಾಗ್ರಹಣಕ್ಕೆ ಸದವಕಾಶ)

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧




# ಕ್ರಾಂತಿಯ ಕೇಂದ್ರ ಕಲ್ಯಾಣ

**ಕ್ರಾ**ಂತಿ ಎಂದರೆ ಬಯಸಿ, ಚಿಂತಿಸಿ ಸಿಡಿದೇಳುವ ಕ್ರಮ, ಆಸ್ಫೋಟ, ಬೆಚ್ಚಿ ಬೀಳಿಸುವಂಥ ಸಂಪೂರ್ಣ ಬದಲಾವಣೆ. ಒಂದು ಅರ್ಥದಲ್ಲಿ ಕ್ರಾಂತಿ ಎಂದರೆ ಯುಗಧರ್ಮ, ಗುಣಾತ್ಮಕ ಬದಲಾವಣೆ.

ಪುರಾಣ ಕಾಲದ ಶ್ರೀಕೃಷ್ಣನಿಂದ ಹಿಡಿದು ನಮ್ಮ ಪಬ್ ಪುರುಷೋತ್ತಮ ಪ್ರಮೋದ ಮುತಾಲಿಕ್‌ವರೆಗೆ ಕ್ರಾಂತಿಕಾರಿ ಬದಲಾವಣೆ ತರಲು ಯತ್ನಿಸಿದವರ ಅನೇಕ ಮಾದರಿಗಳು ನಮ್ಮ ಕಣ್ಣಮುಂದಿವೆ. 'ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ!' ಎಂಬ ಗೀತಾವಾಕ್ಯದ ಮೂಲಕ 'ಲೋಕದಲ್ಲಿ ಧರ್ಮ ಗ್ಲಾನಿಯಾದಾಗಲೆಲ್ಲ ನಾನು ಮತ್ತೆ ಮತ್ತೆ ಹುಟ್ಟಿಬರುತ್ತೇನೆ' ಎಂಬ ಅಭಯ ನೀಡಿದ ಶ್ರೀಕೃಷ್ಣನನ್ನು ಕ್ರಾಂತಿಯ ಹರಿಕಾರ ಎನ್ನಬಹುದೇನೊ. ಒಮ್ಮೆ 'ಸರಿಪಡಿಸಿದ್ದು' ಸದಾಕಾಲಕ್ಕೂ ಸರಿಯಾಗಿರುವಂತೆ ಮಾಡಲು ಅವನಿಗೂ ಸಾಧ್ಯವಾಗಿಲ್ಲ.

ತಾತ್ವಿಕ ಸಂಘರ್ಷ, ವೈಯಕ್ತಿಕ ಹಾಗೂ ಸಾರ್ವತ್ರಿಕ ಆದರ್ಶಗಳ ನಡುವಿನ ಕರ್ಷಣ, ಸಮಷ್ಟಿ ಕೇಂದ್ರಿತ ಸೈದ್ಧಾಂತಿಕ ಕಾಳಜಿ, ಸಮೂಹ ನಪುಂಸಕತ್ವದ ಬಗೆಗಿನ ನೈರಾಶ್ಯ, ದಿಗ್ಭ್ರಮೆ, ಸಂಕಟ ಹಾಗೂ ಗೊಂದಲಗಳ ನಡುವೆಯೂ ಬದಲಾವಣೆಗಾಗಿ ಚಡಪಡಿಕೆ, ಇವು ಕ್ರಾಂತಿಕಾರರ ಲಕ್ಷಣಗಳು.

ಇದುವರೆಗೆ ವಿಶ್ವದ ಯಾವ ದೇಶದಲ್ಲೂ ಸಂಪೂರ್ಣ ಕ್ರಾಂತಿ ಆದದ್ದಿಲ್ಲ; ಆಗಬೇಕಿದೆ ಅಥವಾ ಆಗದೆಯೂ ಇರಬಹುದು. ಯಾಕೆಂದರೆ ಕ್ರಾಂತಿ ಏಕಮುಖಿಯಲ್ಲ, ಇದರ ನಡೆಯನ್ನು ಗುರುತಿಸುವುದು ಸುಲಭವೂ ಅಲ್ಲ. ಕ್ರಾಂತಿಯ ಒಂದು ಮುಖ 'ಪ್ರಜ್ಞೆ'ಯಾದರೆ ಇನ್ನೊಂದು ಮುಖ 'ಪರಿಸರ'. ಹಲವುಬಾರಿ ಪ್ರಜ್ಞೆಯ ಮಟ್ಟದಲ್ಲಿ ಯಶಸ್ವಿಯಾದ ಕ್ರಾಂತಿ ಪರಿಸರಮಟ್ಟದಲ್ಲಿ ನೆಲಕಚ್ಚುವ ಮೂಲಕ ಹೊಳೆಯಲ್ಲಿ ಹುಣಿಸೆಹಣ್ಣು ತೊಳೆದಂತೆ, ಮಹಾಗರ್ಭಪಾತವಾದಂತೆ ಅನ್ನಿಸಿದ್ದೂ ಉಂಟು.

ಕ್ರಾಂತಿ ಬಳ್ಳಿ ಕುಡಿಯ ಬಿಟ್ಟಾದೊಽ
ಆ ಬಳ್ಳಿಮ್ಯಾಗ ಮಂಜ ಹೊಚ್ಯಾದೊ
ಚಿಗುರಿನೆದೆಗೆ ಬೆಂಕಿಬಿದ್ದು
ಕಮರಿ ಹೋಗ್ಯಾದೊ, ಕತ್ತಲಾಗ್ಯಾದೊಽಽ.

ನನ್ನ 'ತತ್ವಾಂತರಪರ್ವ' ಕವಿತೆಯ ಸಾಲುಗಳಿವು. ಇದು ನನ್ನ ಹತಾಶ ಬಡಬಡಿಕೆಯಲ್ಲ. ವಾಸ್ತವದ ನಗ್ನ ಚಿತ್ರ ಇವುಗಳಲ್ಲಿದೆಯೆನ್ನಿಸುವುದಿಲ್ಲವೆ ?

ಹದಿನಾರನೇ ಲೂಯಿಯ ದುರಾಡಳಿತ- ದೌರ್ಜನ್ಯಗಳನ್ನು ವಾಲ್ಟೇರ್, ರೂಸೊ, ರಾಬ್‌ಸ್ಪಿಯರ್ ಮುಂತಾದ ದೈತ್ಯ ಚಿಂತಕರ ನೇತೃತ್ವದಲ್ಲಿ ವಿರೋಧಿಸಿ ಆ ದುರಾಡಳಿತವನ್ನು ಕೊನೆಗಾಣಿಸಿ ವ್ಯಕ್ತಿ ಸ್ವಾತಂತ್ರ್ಯವನ್ನು, ಸಮೂಹ ನಾಯಕತ್ವವನ್ನು ಪ್ರತಿಷ್ಠಾಪಿಸಿದ ೧೭೮೯ರ ಫ್ರೆಂಚ್ ಕ್ರಾಂತಿಯ ಕುರಿತು ಆಂಗ್ಲ ರೋಮ್ಯಾಂಟಿಕ್ ಕವಿ ಕೋಲರಿಜ್ ಹಿಗ್ಗಿ ಹಾಡಿದ್ದು ಹೀಗೆ :

ಇನ್ನು ಮನಸ್ಸಿನ ಮೇಲೆ ಕಡಿವಾಣವಿಲ್ಲ
ಅಭಿವ್ಯಕ್ತಿಯು ನಿರ್ಭೀತವಾಗಿ ಹರಿಯಬಹುದು
ಹ್ಞಾ! ಜೀವನದಾತ್ಮ ಸ್ವಾತಂತ್ರ್ಯ ಪಟ್ಟಕ್ಕೆ ಬಂದಿದೆ
ಒಂದೊಂದು ನಾಡಿ ಮಿಡಿತದಲ್ಲಿ, ಒಂದೊಂದು
ರಕ್ತನಾಳದಲ್ಲಿ, ಅದು ಹರಿದಾಡುತ್ತದೆ!

ಆದರೆ ರಾಬ್‌ಸ್ಪಿಯರ್ ನಾಯಕತ್ವದ ಫ್ರೆಂಚ್ ಸರಕಾರ ದುರ್ಬಲ ರಾಜ್ಯಗಳನ್ನು ಕಬಳಿಸುತ್ತ, ಅಮಾಯಕರನ್ನು ಹಿಂಸಿಸುತ್ತ ಮುಗ್ಧರ ಸ್ವಾತಂತ್ರ್ಯಹರಣಕ್ಕೆ ಮುಂದಾಯಿತು. ಶಾಂತಿಗೆ ಮಾದರಿಯಾಗಿದ್ದ ಪುಟ್ಟ ಸುಂದರ ದೇಶ ಸ್ವಿಟ್ಸರ್‌ಲೆಂಡ್ ಮೇಲಿನ ಫ್ರೆಂಚ್ ಆಕ್ರಮಣ, ಇಂಗ್ಲೆಂಡ್ ಮೇಲಿನ ದೌರ್ಜನ್ಯ ಕಂಡು ಭ್ರಮನಿರಸನಗೊಂಡ ಅದೇ ಕವಿ ಹತಾಶೆಗೊಂಡ.

ದುಷ್ಟತನ ಹಾಗೂ ದುರಾಕ್ರಮಣಗಳಲ್ಲಿ ಅರಸರನ್ನು ಮೀರಿಸಿದ ಢೋಂಗಿ ಆದರ್ಶವಾದಿಗಳ ಚಿತ್ರಣ ಅವನ ಮಾತುಗಳಲ್ಲಿವೆ. ಆದರ್ಶ ಹಾಗೂ ವಾಸ್ತವಗಳ ನಡುವಿನ ಅಂತರ ಅಜಗಜಾಂತರ ಎಂಬುದಕ್ಕೆ ಅವನ ವಿವರಣೆಯೇ ಸಾಕ್ಷಿ. ಮುಂದೆ ಕೆಲವೇ ವರ್ಷಗಳಲ್ಲಿ ರಾಬ್‌ಸ್ಪಿಯರ್‌ನ ಅವಸಾನವಾಗಿ ನೆಪೋಲಿಯನ್ ಫ್ರಾನ್ಸ್‌ನ ಚಕ್ರವರ್ತಿಯಾದ. ಈತನ ಅತಿಮಹತ್ವಾಕಾಂಕ್ಷೆ ಹಾಗೂ ವೈಯಕ್ತಿಕ ಔನ್ನತ್ಯದ ಅಭೀಪ್ಸೆ ಜಗತ್ತಿನ ಚಕ್ರವರ್ತಿಯಾಗಗೊಡಲಿಲ್ಲ. ವಾಟರ್‌ಲೂ ಯುದ್ಧದಲ್ಲಿ ಸೋಲುಂಡ ನೆಪೋಲಿಯನ್ ಜನಮನದಿಂದ ದೂರ-ಬಹುದೂರ ಸರಿದುಹೋದದ್ದು ಯಾರಿಗೆ ಗೊತ್ತಿಲ್ಲ?

ಕೌರವರ ದುರಾಕ್ರಮಣ, ದೌರ್ಜನ್ಯ, ಅತ್ಯಾಚಾರಗಳ ವಿರುದ್ಧ ತಡವಾಗಿಯಾದರೂ ಸಿಡಿದೆದ್ದ ಪಾಂಡವರ ಬೆಂಗಾವಲಾಗಿ ನಿಂತ ಶ್ರೀಕೃಷ್ಣನ (ಕು)ತಂತ್ರದಿಂದಾಗಿ ಗೆದ್ದು ರಾಜ್ಯಪ್ರಾಪ್ತಿ ಮಾಡಿಕೊಂಡ ಪಾಂಡವರು ವಿಶ್ವಶಾಂತಿ (?)ಗಾಗಿ ಅಶ್ವಮೇಧಯಾಗ ಕೈಗೊಂಡರೂ ಸಣ್ಣ-ಪುಟ್ಟ ರಾಜ್ಯಗಳನ್ನು ಕಬಳಿಸುತ್ತ ಹೊರಟರು. ಕೊನೆಗೆ ದುರಹಂಕಾರಿ, ಸ್ವೇಚ್ಛಾಚಾರಿಯಾದ ಪಾರ್ಥನ ಗರ್ವಭಂಗ ಮಾಡಿದ್ದು ಮಣಿಪುರ ಎಂಬ ಪುಟ್ಟ ರಾಜ್ಯದ ನವತರುಣ ಅರಸು ಬಭ್ರುವಾಹನನಲ್ಲವೆ ? ಅಯೋಧ್ಯೆ ಶ್ರೀರಾಮನ ಅಶ್ವಮೇಧದ ಕುದುರೆ ಕಟ್ಟಿಹಾಕಿದ ಕುಶ-ಲವರು, ಅಯೋಗ್ಯ ಅರ್ಜುನನ ಯಾಗದ ಕುದುರೆಯನ್ನು ಕಟ್ಟಿಹಾಕಿದ ಬಭ್ರುವಾಹನ ಇವರ ನಡುವಿನ ಭಾವನಾತ್ಮಕ ಸಂಬಂಧ ಕತೆಯನ್ನು ರೋಚಕಗೊಳಿಸಿದರೂ ವಾಸ್ತವದಲ್ಲಿ ಈ ತಂದೆ-ಮಕ್ಕಳು ಹೊರಗಿಲ್ಲ, ಒಳಗೇ ಇದ್ದಾರೆ ಎನ್ನಿಸುವುದಿಲ್ಲವೆ ? ನನ್ನೊಳಗಿನ ಆಕ್ರಮಣಶೀಲತೆಯನ್ನು, ಅಹಂಕಾರವನ್ನು ವಿರೋಧಿಸುವ ಮನಸಾಕ್ಷಿ ಕುಶ-ಲವರ, ಬಭ್ರುವಾಹನರ ರೂಪಕಾತ್ಮಕ ಅಸ್ತಿತ್ವವೇ ಎಂಬ ಅರಿವು ಮೂಡಿದಾಗ ಇದು ಬಹುದೊಡ್ಡ ಪಾರಲೌಕಿಕ ಕ್ರಾಂತಿಯೆನ್ನಿಸುತ್ತದೆ.

ಇದರರ್ಥ ಕ್ರಾಂತಿ ಹೊರಗಿನ ಯಾರಿಂದಲೂ ಆಗುವುದಿಲ್ಲ, ಆಗುವುದೂ ಅಲ್ಲ ಎಂದು. ಅದು ಒಳಗಿನಿಂದಲೇ ಸಂಭವಿಸುತ್ತದೆ. ಮಾರ್ಚ್ ಎಂಟು ವಿಶ್ವ ಮಹಿಳಾ ದಿನ. ಇದನ್ನು (ಔಪಚಾರಿಕವಾಗಿಯಾದರೂ) ಆಚರಿಸುವ ನಾವು ಆ ದಿನಾಂಕದಂದೇ ಹುಟ್ಟಿ ಸುಮ್ಮನೆ ಸರಿದುಹೋಗದೆ ಹಲವು ರಂಗಗಳಲ್ಲಿ ಕ್ರಾಂತಿ ಮಾಡಿದ ಲಂಕೇಶರನ್ನು ಮರೆತಿದ್ದೇವೆ. ಇದು ದುರಂತ. ಹಲವು ದುರದೃಷ್ಟಕರ ವಿಶೇಷಣಗಳನ್ನು ಅಂಟಿಸಿಕೊಂಡೂ 'ಲಂಕೇಶ ಪತ್ರಿಕೆ'ಯ ಮೂಲಕ ಜನಪರ ಕಾಳಜಿ ಹಾಗೂ ರಾಜಕೀಯ ಸಭ್ಯತೆಯನ್ನು ದಿಟ್ಟವಾಗಿ ಮತ್ತು ಸಾಹಿತ್ಯಿಕವಾಗಿ ಪ್ರತಿಪಾದಿಸಿದ ಲಂಕೇಶ್ ಅಪೂರ್ವವಾದ ಹಾಗೂ ಬಹುಜನ ಅಪೇಕ್ಷಿತ ರಾಜಕೀಯ ಪಲ್ಲಟಕ್ಕೆ ಕಾರಣರಾದುದನ್ನು ಪ್ರಜ್ಞಾವಂತರು ಮರೆಯಬಾರದು.

ಕಾಂಗ್ರೆಸ್‌ನ ರಾಜಕೀಯ ಏಕಸ್ವಾಮ್ಯ ಕರ್ನಾಟಕದ ಪ್ರಗತಿಗೆ ಮಾರಕವಾಗಿ ಪರಿಣಮಿಸಿದಾಗ ನಿರ್ಭೀತ ತನಿಖಾ ವರದಿಗಳು ಹಾಗೂ ನಿರ್ಭಿಡೆಯ ಸಂಪಾದಕೀಯಗಳ ಮೂಲಕ ಈ ಏಕಸ್ವಾಮ್ಯವನ್ನು ಭೇದಿಸಿ ಕಾಂಗ್ರೆಸ್

ಜನವಿರೋಧಿಯಾಗುತ್ತಿದೆಯೆಂದು ಮನವರಿಕೆ ಮಾಡಿ ಕೊಟ್ಟರು. ಇದರ ಪರಿಣಾಮ ಕರ್ನಾಟಕದಲ್ಲಿ ಪ್ರಪ್ರಥಮ ಕಾಂಗ್ರೆಸ್ಸೇತರ ಸರಕಾರ ಅಧಿಕಾರ ಸೂತ್ರ ಹಿಡಿಯಲು ಕಾರಣ ವಾಯ್ತು. ಆದರೆ ಆದರ್ಶದ ಮ್ಯಾನಿಫೆಸ್ಟೋ ಮುಂದಿಟ್ಟು ಅಧಿಕಾರಕ್ಕೆ ಬಂದ 'ಜನತಾ' ಸರಕಾರವೂ ಭ್ರಷ್ಟಗೊಂಡು ಜಡ ಹಾಗೂ ಅಸೂಕ್ಷ್ಮತೆಯ ಹಂತ ತಲುಪಿದಾಗ ಅದರ ಉಚ್ಚಾಟನೆಗೂ ಹಿಂಜರಿಯಲಿಲ್ಲ ಲಂಕೇಶ್ ಹಾಗೂ ಪತ್ರಿಕೆ. ಇದು ಪತ್ರಿಕಾರಂಗದಲ್ಲಿ ಸಂಭವಿಸಿದ ಬಹುದೊಡ್ಡ ಕ್ರಾಂತಿ ಎಂದು ಲಂಕೇಶ್ ವಿರೋಧಿಗಳೂ ಒಪ್ಪಿಕೊಂಡಿದ್ದಾರೆ. ಈ 'ಕ್ರಾಂತಿ'ಗಳು ಅಲ್ಪಕಾಲದ ವೈಭೋಗಗಳು ! ಏಕೆಂದರೆ, ಸೂಕ್ತ ಅಡಿಪಾಯವಿಲ್ಲದೆ ಅವರು ಕಟ್ಟಿದ 'ಕರ್ನಾಟಕ ಕ್ರಾಂತಿರಂಗ' ಮೊಳಕೆಯೂ ಹೊಡೆಯಲಿಲ್ಲ. ಅವರ ರಾಜಕೀಯ ಅನನುಭವದ ಸೀಮಿತತೆಗೆ ಅದು ಸಾಕ್ಷಿಯಾಗಿ ನಿಲ್ಲುತ್ತದೆ.

ಹನ್ನೆರಡನೇ ಶತಮಾನದಲ್ಲಿ ಬಸವಾದಿ ಶರಣರು ಕಲ್ಯಾಣದಲ್ಲಿ ಮಾಡಿದ ಕ್ರಾಂತಿ ಹಲವು ಕಾರಣಗಳಿಂದಾಗಿ ವಿಶ್ವದ ಬಹುದೊಡ್ಡ ಕ್ರಾಂತಿ. ಕಾರಣ ಇದು ಅರಿವು ಹಾಗೂ ಆಚಾರಗಳೆರಡಕ್ಕೂ ಆದ್ಯತೆ ನೀಡಿದ್ದು. ಅಧಿಕಾರಕ್ಕಾಗಿ, ಇನ್ನಾರದೊ ಗರ್ವಭಂಗಕ್ಕಾಗಿ ನಡೆದ ಕ್ರಾಂತಿ ಇದಾಗಿರದೆ ಸಮಾನತೆಗಾಗಿ, ಸಮಷ್ಟಿ ಮಾಧ್ಯಮದಿಂದ ದೂರಸರಿದವರ ಮನಃಪರಿವರ್ತನೆಗಾಗಿ ನಡೆದ ಕ್ರಾಂತಿಯಾಗಿದ್ದುದು. ವರ್ಣಾಶ್ರಮದ ಆಚರಣೆ ತನ್ನ ದುಮುದುಮಿಸುವ ಯೌವನಾವಸ್ಥೆ ತಲುಪಿ ಅದು ಮದ್ದಾನೆಯ ಸ್ವರೂಪ ಪಡೆದುಕೊಂಡಾಗ ಸತ್ಯವೆಂಬ ಕೂರಲಗು ಹಿಡಿದು ಅದನ್ನೆದುರಿಸಿದವ ಬಸವಣ್ಣ :

ಕೊಲ್ಲುವವನೆ ಮಾದಿಗ
ಹೊಲಸು ತಿಂಬುವವನೆ ಹೊಲೆಯ
.................................
ನೆಲನೊಂದೆ ಹೊಲಗೇರಿ ಶಿವಾಲಯಕ್ಕೆ
ಜಲವೊಂದೆ ಶೌಚಾಚಮನಕ್ಕೆ...
.................................
ಅಪ್ಪನು ನಮ್ಮ ಮಾದಾರ ಚೆನ್ನಯ್ಯ
ಬೊಪ್ಪನು ನಮ್ಮ ಡೋಹಾರಕಕ್ಕಯ್ಯ
ಚಿಕ್ಕಯ್ಯನೆಮ್ಮಯ್ಯ ಕಾಣಿರೋ
.................................
ಆನು ಹಾರುವನೆಂದರೆ ಕೂಡಲಸಂಗಯ್ಯ
ನಗುವನಯ್ಯಾ

ಎಂದು ಹೇಳಿದ. ನುಡಿದಂತೆ ನಡೆದು ನಡೆ-ನುಡಿ ಒಂದಾದ ಕೂಡಲಸಂಗನ ಶರಣರೇ ಕುಲಜರು ಎಂಬ ಸತ್ಯವನ್ನು ಮನಗಾಣಿಸಲು ಯತ್ನ ಮಾಡಿದ; ಕೀಳಿಂಗಲ್ಲದೆ ಹಯನು ಕರೆವುದೆ, ಎಂಬ ಪ್ರಶ್ನೆ ಕೇಳಿ ಮೂಲಭೂತ ವಾದದ ಮೂಗಿಗೆ ಖಾರ ಸವರಿದ. ತಾನು ಉಚ್ಚವರ್ಗದಲ್ಲಿ ಜನಿಸಿದ್ದರೂ ಮೇಲಿನ ಮೇಲಿನಿಂದ ಕೆಳಗಿನ ಕೆಳಗೆ ಇಳಿದು ಬಂದು ನೊಂದವರ ಆಕ್ರಂದನಕ್ಕೆ ಇಂಗು ಕಾಗದವಾದ; ಬಿದ್ದವರ ತಾಯಿ-ತಂದೆಯಾದ; ಮೇಲು-ಕೀಳಿನ ಅಸ್ತಿತ್ವ ಅಳಿಸಿಹಾಕುವ ಬಹುದೊಡ್ಡ ಯತ್ನ ಮಾಡಿದ.

# ಗೋಕರ್ಣದ ಮಹಾಬಲನಿಗೆ



ಅಂಬುಧಿಯ ಒಡಲಿಂದ ಹುಟ್ಟಿಬಂದ ಸೂರ್ಯ
ಪಶ್ಚಿಮದ ಗೂಡು ಸೇರುವ ಮುನ್ನ
ನಮಸ್ಕರಿಸಿದ್ದು ನಿನಗೇ ಎಂದು ಗೊತ್ತು
ಅಲೆಗಳ ಸಪ್ಪಳವನಾಲಿಸುತ ಕುಳಿತ
ಅರ್ಧನಿಮೀಲಿತ ಫಾಲನೇತ್ರನೇ... !!

ನಿನ್ನೆದುರಿಗಿನ ತೇರುಬೀದಿಯನ್ನೊಮ್ಮೆ ಕಣ್ದೆರೆದು ನೋಡು
ರಾತ್ರಿಯ ನೀರವ ಮೌನ ಹೆಪ್ಪುಗಟ್ಟಿ
ಅಲೆಅಲೆಗಳ ಹೆಜ್ಜೆ ಸಪ್ಪಳಗಳನೊಂದೊಂದಾಗಿ ಸೇರಿಸಿ
ಸುಕ್ಕುಗಟ್ಟಿದ ಕೈಗಳು ಪೋಣಿಸಿದ ಹೂ ಮಾಲೆಗಳು
ಬೀದಿಯಲ್ಲಿ ಕಾದು ನಿಂತಿವೆ,
ನಿನ್ನ ಕೊರಳು ಸೇರಲು.
ಕಾಯಿ ಕರ್ಪೂರದಂಗಡಿಯ ಮುದುಕ
ಹೂ ಮಾರುವ ಮುದುಕಿ
ಕಾದು ಕುಳಿತಿರುವುದು ನಿನಗಷ್ಟೆ ಅಲ್ಲ... !!

ನೀನು ಕೊರಳ ಮಾಲೆ ಧರಿಸದಿರೆ,
ಕರ್ಪೂರ ಹಚ್ಚಿ ಉರಿಸದಿರೆ
ಹತ್ತಿ ಉರಿಯಬಹುದು
ಅವರ ಮನೆಯ ಹಸಿವು... !!

ನಿನ್ನ ನಾಮದ ಬಲದ ಮೇಲೆ
ನಿಂತ ನೂಪುರ, ಗೋಪುರಗಳ ಕೆಳಗೆ
ನಿನ್ನದೇ ನೆರಳಿದೆ...
ಸಾಲಿಗೆ ಹೋಗಲೊಲ್ಲದೆ ಹಠ ಹಿಡಿದವಗೆ
'ಮಠ'ಕ್ಕೆ ಸೇರಿಸಿಬಿಡುವೆ ಎಂದು
ಹೆದರಿಸಿದ ಅಪ್ಪನ ನೆನಪಾಯ್ತು ಮಹಾಬಲ,
ಗೋಕರ್ಣದ ಬೀದಿಯ ತುಂಬಾ ಪ್ರತಿಧ್ವನಿಸಿದೆ
'ಮಹಾಬಲ ಮಠದ ಪಾಲಾದನಂತೆ'... !!

ಜೋಲಿ ಬೀಳಬಹುದಿನ್ನು
ನಿನ್ನ ಜಾತಿ ಮೀರಿದ ಪ್ರೀತಿಗೆ !
ನಿನ್ನ ಮಠ!

ತಲೆಗೆರಡು ಕೊಟ್ಟು ಬರುವ
ಭಕುತರ ಕೈಗಳಿಗಿನ್ನು
ಬೀಳಬಹುದು ಬೇಡಿ !!

ಬೀದಿ ಬದಿಯ ಅಜ್ಜ-ಅಜ್ಜಿಯರ ಬದಲಿಗೀ
ಟೈ-ಬೂಟು-ಸೂಟುಗಳ ದಂಡು ಬರಬಹುದು ಮಹಾಬಲ !!
ನಿನ್ನ ಹೆಸರಿನ ರಸೀದಿಗಳು
ಹಾರಾಡಬಹುದು ಗಾಳಿಪಟಗಳಂತೆ !!

ನಿನ್ನ ನೂಪುರ ನೋಡಿ ಬಂದವರಲ್ಲ
ನಿನ್ನ ಗೋಪುರ ನೋಡಿ ಬಂದವರಲ್ಲ
ನಿನ್ನೊಳಗಿನ ಪರಾಕ್ರಮಕ್ಕೆ ಸೋತವರಲ್ಲ
ನಿನ್ನೆದುರಿನ 'ಹುಂಡಿ' ಯಾಸೆಗೆ ಬಂದವರು !!

ಯಾವುದಕ್ಕೂ ಬೇಸರಿಸದಿರು ಮಹಾಬಲ
ಅರಬ್ಬಿ ಕಡಲಿನ ಮುಂದೆ ಹಾಗೆ ರೋದಿಸದಿರು
ಉಕ್ಕಿ ಹರಿದೀತು ಕಡಲು !!
ಬರಿದಾದೀತು ಬೀದಿಜನರ ಒಡಲು !!

ಬಿ. ಶ್ರೀನಿವಾಸ
ಶಿರಸ್ತೇದಾರರು, ಜಿಲ್ಲಾ ನ್ಯಾಯಾಲಯ, ಹಾವೇರಿ

ಅಂತೆಯೇ ಬ್ರಾಹ್ಮಣ ಮಧುವರಸ ಹಾಗೂ ಸಮಗಾರ ಹರಳಯ್ಯ ಜಾತಿ-ವಿಚಾರ ತಳ್ಳಿಹಾಕಿ ಶರಣರಾದರು. ಅರಿದು ಬೀಗರೂ ಆಗಲು ಪ್ರೇರೇಪಿಸಿದ ಬಸವಣ್ಣ ಹೊಕ್ಕು-ಬಳಕೆ ಯಿಂದಲ್ಲದೆ, ರಕ್ತಸಂಬಂಧವಾಗದೆ ಜಾತಿ ಭೇದ ಅಳಿಸಿ ಹಾಕುವುದು ಅಸಾಧ್ಯ. ಅಂಗದ ಮೇಲೆ ಲಿಂಗ ಧರಿಸಿ ಅರಿವನ್ನು ಆಚಾರಕ್ಕೆ ತಂದವರೆಲ್ಲರೂ ಕುಲಜರೆ ಎಂದು ಮನಗಾಣಿಸಿದ. ಮಧುವಯ್ಯನ ಮಗಳು (ಕಲಾವತಿ) ಹರಳಯ್ಯನ ಮಗ (ಶೀಲವಂತ)ನ ವಧುವಾದಳು. ಇದು ಕಲ್ಯಾಣಕ್ರಾಂತಿಯ ಸತ್ಫಲ, ಅನುಭವ ಮಂಟಪ ಎಂಬ ಶರಣ ಸಂಸತ್ತಿನ ಬಹುದೊಡ್ಡ ಶಾಸನವಾಯ್ತು. ಜಾತಿವಾದಿಗಳ ದೃಷ್ಟಿಯಲ್ಲಿ ಬಹುದೊಡ್ಡ ಅಪರಾಧ ಪ್ರತಿಲೋಮ ವಿವಾಹ. ಉಕ್ಕಿಬರುವ ಪ್ರವಾಹಕ್ಕೆ ಎದೆಯೊಡ್ಡಿದ ಬಸವಣ್ಣನ ಎದೆಗಾರಿಕೆಯನ್ನು ಕಂಡು ಬೆರಗಾದ ಕಾಶ್ಮೀರದ ಅರಸು, ಕಲ್ಯಾಣದ ಶರಣ ಮೋಳಿಗೆಯ ಮಾರಯ್ಯ ಉದ್ಗರಿಸಿದ್ದು ಹೀಗೆ :

ಅಗ್ರಜ-ಅಂತ್ಯಜ ವರ್ಣಧರ್ಮದ ಎರಡು
ಧ್ರುವಗಳು :
ಒಂದು ಉತ್ತರ ಮತ್ತೊಂದು ದಕ್ಷಿಣ
ನಡುವೆ ದೊಡ್ಡ ಕಮರಿ
ಅನುರಾಗದ ಗಾಳಿ ಬೀಸಿ ಭಕ್ತಿ ಸೂತ್ರ ಬಂಧಿಸಿತ್ತು
ಎರಡನ್ನು
ಅಗ್ರಜನ ಪುತ್ರಿ ಅಂತ್ಯಜನ ಮಗನ ಕೈಹಿಡಿದಳು
ಸಾಧಿಸಿತು ಮಾನವತೆಯ ಮಹಾಸಿದ್ಧಿ ಶರಣರಲ್ಲಿ
ನಿಃಕಳಂಕ ಮಲ್ಲಿಕಾರ್ಜುನಾ, ನೋಡಿ ಬೆರಗಾದೆ ನಾನು.

ಇದು ಪ್ರಜ್ಞೆಯ ಮಟ್ಟದಲ್ಲಿ ಆಗಿರುವ ಬಹುದೊಡ್ಡ ಕ್ರಾಂತಿ. ಆದರೆ ಅಂದಿನ ಸಾಮುದಾಯಿಕ ಚಿಂತನಕ್ಕಿಂತ ಸಹಸ್ರಾರು ವರ್ಷ ಮುಂದೆ ಸಾಗಿದ್ದ ಬಸವನ ತುದಿಯನ್ನು ಅರಿಯದೆ ಹೋದ ಮೂಲಭೂತವಾದಿಗಳು ರಾಜಸತ್ತೆಯನ್ನು ಒತ್ತೆಯಿಟ್ಟುಕೊಂಡಿದ್ದರು. ತಲೆಯಲ್ಲದ ತಲೆಗೆ ಕಿರೀಟ ಧರಿಸಿಕೊಂಡು, ತನ್ನ ದೌರ್ಬಲ್ಯಗಳಿಗೆ ಇವರನ್ನೆ ಶೀಲ್ಡ್ ಮಾಡಿಕೊಂಡಿದ್ದ ಅರಸು (ಬಿಜ್ಜಳ) ಮುನಿದು ಬಸವಣ್ಣನಿಗೆ ಗಡಿಪಾರು ಆಜ್ಞೆ ವಿಧಿಸಿದ. ವಿಧಿಯಿಲ್ಲದೆ ಕೂಡಲಸಂಗಮಕ್ಕೆ ಹೊರಟ ಬಸವಣ್ಣ ವಚನ ಸಂಸ್ಕೃತಿ ಯಾದರೂ ಉಳಿಯಲಿ ಎಂದು ಅಪೇಕ್ಷಿಸಿದನೆಂದೇ ಶರಣರ ಒಂದು ಗಣ ವಚನದ ಕಟ್ಟುಗಳೊಂದಿಗೆ ಉಳವಿಯತ್ತ ಮುಖ ಮಾಡಿತು. ಆದರೆ ಶತಶತಮಾನಗಳಿಂದ ಸನಾತನಿಗಳು ಪ್ರತಿಪಾದಿಸುತ್ತ ಬಂದ ವರ್ಣಾಶ್ರಮ ಧರ್ಮ (?)ದ ನಿರ್ಮೂಲನೆಗೆ ಕೈಹಾಕಿದ ಶರಣರು ಏಕಾಂಗಿತನ ಅನುಭವಿಸಬೇಕಾಯಿತು. ಇದು ಪರಿಸರ ಮಟ್ಟದಲ್ಲಿ ಉಂಟಾದ ಕಲ್ಯಾಣಕ್ರಾಂತಿಯ ವೈಫಲ್ಯ. ಆದರೆ ಅದು ಸಂಪೂರ್ಣ ವೈಫಲ್ಯವಾಗದೆ ಅಂದು ಶರಣರು ಬಿತ್ತಿದ ಬೀಜ ಈಗಲಾದರೂ ಸಸಿಯಾಗಿದೆಯಲ್ಲ!

ಇಪ್ಪತ್ತನೇ ಶತಮಾನದಲ್ಲಿ ಹರಿಜನೋದ್ಧಾರದ ಕನಸು ಕಂಡ ಗಾಂಧಿ, ಭುಲಾಭಾಯಿ ಎಂಬ ಹರಿಜನನ ಮಗಳು ಲಕ್ಷ್ಮಿಯನ್ನು 'ಮಗಳು' ಎಂದು ಕರೆದು ಅಪ್ಪಿಕೊಂಡಾಗ ಆ ಪರಿಸರದಲ್ಲೂ ಹಾಹಾಕಾರ ಉಂಟಾಯಿತಾದರೂ ಗಾಂಧಿ ಅದಕ್ಕೆ ಜಗ್ಗಲಿಲ್ಲ. "ಜಾತಿಗೂ, ಸಮಗ್ರ ಹಿಂದೂ ಧರ್ಮದ ಆಳವಡಿಕೆಗೂ ಆಶ್ರಮದಲ್ಲಿ ಎಡೆಯಿಲ್ಲ, ಸ್ವಧರ್ಮ, ಕುಟುಂಬಧರ್ಮ, ದೇಶಧರ್ಮ ಪ್ರತ್ಯೇಕವಾಗಿಲ್ಲ, ಇರಬಾರದು. ಒಂದಕ್ಕೆ ಅಪಚಾರ ಮಾಡಿ ಇನ್ನೊಂದನ್ನು ಉದ್ಧರಿಸುವುದು ಸಾಧ್ಯವಿಲ್ಲ. ನಮ್ಮೆಲ್ಲರದೂ ವಿಶ್ವ ಧರ್ಮವೇ ಆಗಿರಬೇಕು'' ಎಂದು ಖಡಾಖಂಡಿತವಾಗಿ ಹೇಳಿದ ಗಾಂಧಿ ಜಾತಿವಾದಿಗಳ ಬಾಯಿ ಮುಚ್ಚಿಸಿದರು.

ಗಾಂಧೀಜಿಯ ಸಹವಾಸ ತೊರೆದುಹೋದ ಅನೇಕ ಜನ ಈ ಕ್ರಾಂತಿಯನ್ನು ವಿಫಲಗೊಳಿಸುವ ಸರ್ವ ಪ್ರಯತ್ನ ಮಾಡಿದರೂ ಫಲ ದೊರಕಲಿಲ್ಲ. ಕಾರಣ ಅವರ ಬೆಂಬಲಕ್ಕೆ ರಾಜಸತ್ತೆ ಇರಲಿಲ್ಲ. ಬ್ರಿಟಿಶ್ ಸರಕಾರಕ್ಕೆ ಇಂಥವರ ದೂರು ಕೇಳಿ ಶಿಕ್ಷಿಸುವ ಆಸಕ್ತಿ ಅಥವಾ ಹಿತಾಸಕ್ತಿ ಇರಲಿಲ್ಲ. ಆದ್ದರಿಂದ ಈ ಯತ್ನಕ್ಕೆ ತೀವ್ರ ಪ್ರತಿರೋಧ ಅಥವಾ ಪ್ರತಿಕ್ರಿಯೆ ಕಂಡುಬರಲಿಲ್ಲ. ಬ್ರಿಟಿಶರ ಹೇಯ ವಸಾಹತುಶಾಹಿ ಧೋರಣೆ ಹಾಗೂ ದುರಾಡಳಿತ ಈ ಜಾತಿ ವ್ಯವಸ್ಥೆಗಿಂತ ಅಪಾಯಕಾರಿಯಾಗಿ ಇದ್ದುದರಿಂದ ಗಾಂಧೀಜಿ ನೇತೃತ್ವದಲ್ಲಿ ಸ್ವಾತಂತ್ರ್ಯ ಚಳುವಳಿ ತಂತಾನೇ ಮುಂದುವರಿಯಿತು. ಕ್ರಾಂತಿಯೆಂದರೆ ಕೇವಲ ಸಾಮಾಜಿಕ ಅಥವಾ ರಾಜಕೀಯ ಬದಲಾವಣೆ ಅಲ್ಲ. ಸಹವಾಸ ಹಾಗೂ ಸಹಬಾಳ್ವೆಗೆ ಸಹಕಾರಿಯಾಗಬಲ್ಲ ಪ್ರಗತಿಯೂ ಕ್ರಾಂತಿಯೆ. ಈ ನಿಟ್ಟಿನಲ್ಲಿ ಭಾರತದಲ್ಲಿ ಸಂಭವಿಸಿದ ಹಸಿರುಕ್ರಾಂತಿ ಹಾಗೂ ವೈಜ್ಞಾನಿಕ ಕ್ರಾಂತಿ ಅಪೇಕ್ಷಿತ ಪ್ರಮಾಣಕ್ಕಿಂತ ಮಿಗಿಲಾದವು. ಇದನ್ನು ವಿಶ್ವಸಂಸ್ಥೆ ಮೊದಲುಗೊಂಡು ವಿಶ್ವದ ಎಲ್ಲ ರಾಷ್ಟ್ರಗಳೂ ಕೊಂಡಾಡಿವೆ. ಇವುಗಳಿಗೆ ರಾಷ್ಟ್ರದ ಬೆನ್‌ಬಲ ಹಾಗೂ ಆರ್ಥಿಕ ನೆರವು ದೊರೆಯಿತಲ್ಲದೆ ಯಾರ ವಿರೋಧ ಅಥವಾ ಪ್ರತಿರೋಧವೂ ಇರಲಿಲ್ಲ ವೆನ್ನುವುದರಿಂದ ಇವುಗಳನ್ನು ಕ್ರಾಂತಿಯೆನ್ನದೆ ಅಭಿವೃದ್ಧಿ ಎನ್ನುವುದೆ ಸೂಕ್ತವೇನೊ.

ರಾಜಸತ್ತೆಯನ್ನು ಎದುರು ಹಾಕಿಕೊಂಡು ಕ್ರಾಂತಿ ಮಾಡುವುದು ನೇಣುಗಂಬದ ಮುಂದೆ ನಿಂತು ಮಾಡುವ ಹೋರಾಟ. ಯಾಕೆಂದರೆ ಅಲ್ಲಿ ಹೊರಬೀಳುವ ಆದೇಶಗಳ ಪುನರ್ವಿಮರ್ಶೆಗೆ ಅವಕಾಶವಿರುವುದಿಲ್ಲ. ಆದರೆ ಪ್ರಜಾಸತ್ತೆಯಲ್ಲಿ ಹಾಗಲ್ಲ. ಕಾರಣ ಪ್ರಜಾಸತ್ತೆಯಲ್ಲಿ ನ್ಯಾಯಾಂಗ ವ್ಯವಸ್ಥೆ ಹಲವು ಹಂತಗಳನ್ನೊಳಗೊಂಡಿರುವುದಲ್ಲದೆ ಇದನ್ನು ಮೀರಿಯೂ ರಾಷ್ಟ್ರಾಧ್ಯಕ್ಷರ ಕ್ಷಮಾದಾನದ ಅವಕಾಶವೂ ಇಲ್ಲಿದೆ.

ಪ್ರಮೋದ ಮುತಾಲಿಕ್ ಮತ್ತು ಆತನ ಅನುಯಾಯಿಗಳು ತಾವೇ ತೀರ್ಮಾನಿಸುವ ಕೆಟ್ಟ ಸಂಸ್ಕೃತಿಯ ಹೆಸರಿನಲ್ಲಿ ಅನೇಕ ಉಪಟಳಗಳನ್ನು ನೀಡುವುದು ಒಂದು ಪದ್ಧತಿ ಯಾಗಿಹೋಗಿದೆ. ಮಹಿಳೆಯರಿಗೆ 'ಸಭ್ಯತೆ'ಯ ಪಾಠ ಹೇಳಲು ಇವರ ಅಸಭ್ಯ ವರ್ತನೆಗೆ ಮಿತಿಯಿಲ್ಲ. ಗುಟ್ಟಾಗಿ ಅವರನ್ನು ಪ್ರೋತ್ಸಾಹಿಸುವವರು ಹಲವರಿದ್ದಾರೆಂದು ಹೇಳುತ್ತಾರೆ. ಮಹಿಳೆಯರು ಮಾತ್ರ ಗೌರಮ್ಮಗಳಾಗಿರಬೇಕೆಂದು ಬಯಸುವ, ಅವರನ್ನೇ ಪ್ರಯೋಗಪಶುಗಳನ್ನಾಗಿಸುವ ಯಜಮಾನಿಕೆ ಅಥವಾ ಪುರುಷಕೇಂದ್ರಿತ ಆಸಕ್ತಿಯೂ ಒಂದು ರೀತಿಯ ದೌರ್ಜನ್ಯ ಹಾಗೂ ದೌರ್ಬಲ್ಯವೆ. ಇದು ಹತಾಶ ಮನಸ್ಸಿನ, ಅಧಿಕಾರ ಲಾಲಸೆಯ ಗಿಮಿಕ್ಕೂ ಆಗಿರಬಹುದಲ್ಲ! 'ಶೀಲವು ಹೆಣ್ಣಿಗೆ ಮಾತ್ರ ಮೀಸಲು' ಎಂಬ ಧೋರಣೆ ಏಕಮುಖಿ ಸಂಸ್ಕೃತಿ (?)ಯ ಬಡಬಡಿಕೆ. ದೌರ್ಜನ್ಯ, ದಬ್ಬಾಳಿಕೆ, ಭಯೋತ್ಪಾದನೆಗಳಿಗೆ ಕಾರಣರಾದ ಪುರುಷರ ಆಕ್ರಮಣ ಪ್ರವೃತ್ತಿ ನಿಗ್ರಹಗಳ ಕಡೆಗೆ ಯಾಕೆ ಗಮನಹರಿಸುತ್ತಿಲ್ಲ ಈ ಕ್ರಾಂತಿ(?)ವೀರರು? ಮತ ನೀಡಿದ ಮಾತ್ರಕ್ಕೆ ಮತಿಗೇಡಿಗಳು ಮಾಡುವುದೆಲ್ಲವನ್ನೂ ನುಂಗಿಕೊಳ್ಳುವ ವಿಷಕಂಠ ಅಲ್ಲ ಸರಕಾರ. ಹಾಗಾಗಬಾರದು ಕೂಡ. ಬಂಡಾಯ ಮನುಷ್ಯನ ಪ್ರವೃತ್ತಿಯಲ್ಲೇ ಇದೆ. ಸ್ಥಾಪಿತ ಅವ್ಯವಸ್ಥೆಯ ವಿರುದ್ಧ ದನಿಯೆತ್ತುವ ಪ್ರಜ್ಞಾವಂತರು ಎಲ್ಲ ಯುಗಗಳಲ್ಲೂ ಹುಟ್ಟಿಬರುತ್ತಾರೆ; ಸಾಮಾನ್ಯರೊಳಗಿನಿಂದಲೇ ಮೇಲೆದ್ದು ನಿಲ್ಲುತ್ತಾರೆ. ಅವರು ಹುಟ್ಟುಹಾಕುವ ಕ್ರಾಂತಿಯ ಸಾಫಲ್ಯ ಹಾಗೂ ವೈಫಲ್ಯಗಳ ಹೊಣೆ ಅವರದು ಮಾತ್ರ ಅಲ್ಲ. ಅದು ಸಮಷ್ಟಿ ಪ್ರತಿಕ್ರಿಯೆಯನ್ನವಲಂಬಿಸಿರುತ್ತದೆ. ಅದು ದೊಡ್ಡ ಪ್ರಮಾಣದಲ್ಲಿ ದೊರೆತಾಗ ಮಾತ್ರ ಹುಟ್ಟೀತು ಹೊಸಚರಿತ್ರೆ :

ಬಿಳಿಮುಗಿಲು ಕೆಂಪೇರಿ
ಶಾಂತ ಕಡಲುಕ್ಕೇರುತ್ತದೆ,
ತಲ್ಲಣಿಸುತ್ತದೆ ಜೀವಜಗ,
ನಿಡುಸುಯ್ಯುತ್ತವೆ ನದಿಕಾನನ
ಕ್ರಾಂತಿ ಹುಟ್ಟುವ ಮುನ್ನ.
ನೆಲಮುಗಿಲುಗಳ ನಡುವೆ ಘನಘೋರ ಕದನ
ಎಡಬಲದಲಿ ದೈತ್ಯ ನರ್ತನ!
ಹುಸಿಗಾಳಿಗೆ ಹೆದರುವುದೆ ಹಿಮಾಲಯ?
ಆದರೆತ್ತರ, ಬಿತ್ತರಕೆ ಆದೆ ಸಾಟಿ.
ಕೇಲಿ ಕೊಟ್ಟಾಗ ಕುಣಿವ ದೈತ್ಯಕೋಟಿ
ನೆಲಹಿಡಿದು ನಿದ್ರಿಸುತಲೆ
ಉದಯಿಸುವ ಹೊಸ ಸೂರ್ಯ
ಚರಿತ್ರೆ ಹುಟ್ಟುವ ಮುನ್ನ.
ವಿಜೃಂಭಿಸುತ್ತದೆ ವೃಕ್ಷಕೋಟಿ
ಹೊಸ ಹೂ ಹಣ್ಣು ಹುಟ್ಟಿಸಿ
ಕರೆಯುತ್ತದೆ ಕೈಬೀಸಿ
ಬಾ ಧೀರಾ, ಬಂದು ಬರೆ ಹೊಸದೊಂದು ಚರಿತ
ಎನಲು ಏನಚ್ಚರಿ,
ಬಂದನಲ್ಲಿ ಬಸವಪುತ್ರ ಮಹಂತ
ಅಸಂಖ್ಯ ಶರಣರೊಡಗೂಡಿ ಪ್ರಳಯದೂಡುತ
ಮುಂದೆ
ಶಾಂತ, ಪ್ರಶಾಂತ ಮುಖಮುದ್ರೆ
ಭಕ್ತರ ನಗೆಯ ನಡುವೆ ತುಸು ನಿದ್ರೆ
ಕೈಯಲೊಂದು ಎಚ್ಚರದ ಬಡಿಗೆ
ಬಗಲಿಗದೆ ಮಹಂತ ಜೋಳಿಗೆ
ಅದೆ, ಮತ್ತದೆ ತೂಕದ ನಡಿಗೆ
ಹುಟ್ಟಿತ್ತು ಹೀಗೆ ಹೊಸ ಇತಿಹಾಸ
ಇಳಕಲ್ಲು ಎಂಬ ಕಲ್ಯಾಣದಲ್ಲಿ
ಉತ್ತರಿಯ ಮಗನಾಗಿ
ಭಕ್ತ ಸಂಕುಲದ ಒಕ್ಕೊರಲ ದನಿಯಾಗಿ...

ಹೀಗೆ ಒಂದು ಕ್ರಾಂತಿ ಸುಖಾಂತ ಕಂಡಿತು ಇಳಕಲ್ಲಿನಲ್ಲಿ. 'ನಾಳೆ ಬಪ್ಪುದು ನಮಗಿಂದೆ ಬರಲಿ, ಇಂದು ಬಪ್ಪುದು ನಮಗೀಗಲೆ ಬರಲಿ' ಎಂದು ಕೇಡಿಗೆ ಆಹ್ವಾನ ನೀಡಿದ ಬಸವನ ಕ್ರಾಂತಿ ಮಂತ್ರ ಎಲ್ಲೆಲ್ಲೂ ರಿಂಗಣಿಸಬೇಕು. ಪ್ರತಿ ಕ್ರಾಂತಿಯ ಕೇಂದ್ರವೂ ಕಲ್ಯಾಣವೇ ಆಗಿರಬೇಕು, ಕಲ್ಯಾಣ ಕ್ರಾಂತಿಯಂತೆ.

ಬಿ. ಆರ್. ಪೋಲೀಸ್ ಪಾಟೀಲ
[illegible], ಜೋಧಪ್ರಸಾದ್ ಜಿ. ಮೋದಿ [illegible]
ಕಾಲೇಜ್, ಅಂಬಾಜೋಗೈ, ಭೀಡ್ ಜಿಲ್ಲೆ, ಮಹಾರಾಷ್ಟ್ರ ರಾಜ್ಯ

# ಅಕ್ಷರ ಸಂಸ್ಕೃತಿ:
# ಅಧಿಕಾರ, ಅಗ್ರಹಾರ ಮತ್ತು ಒತ್ತುವರಿ

**ಜಯಪ್ರಕಾಶ್ ಶೆಟ್ಟಿ ಎಚ್.**

**ಹೊಸ ಕಾಲದಲ್ಲಿ ಜನರ ಭಾಗವಹಿಸುವಿಕೆ ಅಧಿಕಗೊಂಡು ಸಂಪೂರ್ಣಸರ್ವಾಧಿಕಾರಗಳು ಕಣ್ಮರೆಯಾದಂತೆ ಕಾಣುವ ಘಳಿಗೆಯಲ್ಲೂ ಕಾಲಬದ್ಧ ಹಾಗೂ ಚಾರಿತ್ರಿಕವಾದ ಪ್ರಮಾಣ ಸಂಹಿತೆಗಳು ಹೊಸ ಮಾದರಿಯಲ್ಲಿ ಮೂಡಿಬಂದು ಹೊಸ ಸಂಕಥನಗಳೊಂದಿಗೆ ಪಾರಂಪರಿಕವಾದ ಆಳುವ ವರ್ಗದ ಹಿತ ಕಾಯುವ ಕೆಲಸ ಮಾಡುತ್ತವೆ. ಶಾಸನಗಳ ಜಾಗದಲ್ಲಿ ಗೆಜೆಟ್‌ಗಳು; ಪಂಡಿತರು, ವಿದ್ವಾಂಸರುಗಳ ಜಾಗದಲ್ಲಿ ವಿಶ್ವವಿದ್ಯಾಲಯಗಳು, ಅಕಾಡೆಮಿಗಳು; ದೇವಾಲಯಗಳ ಜಾಗದಲ್ಲಿ ಮಠಮಂದಿರಗಳೂ, ಮಹಾಕಾವ್ಯಗಳ ಜಾಗದಲ್ಲಿ ಸಾಹಿತ್ಯಿಕ ಭಿನ್ನಮಾದರಿಗಳು, ಪತ್ರಿಕೆಗಳು, ಸಾಹಿತ್ಯಿಕ ಚರ್ಚೆ, ಸಮ್ಮೇಳನ, ಸಂವಾದ ಇತ್ಯಾದಿಗಳು ಜನಮನದ ಅಭಿಪ್ರಾಯ ತಿದ್ದುವ ಕೆಲಸದಲ್ಲಿ ನಿರತವಾಗಿ ಅಗ್ರಹಾರಗಳನ್ನು ಜೀವಂತವಾಗಿ ಉಳಿಸುವಲ್ಲಿ ದುಡಿಯುತ್ತವೆ.**

**ಸಾ**ಹಿತ್ಯ ಎಂದರೇನು? ಎಂಬ ಸರಳ ಪ್ರಶ್ನೆಗೆ ಸರ್ವಸಮ್ಮತವೆಂದು ತೋರುವ ಒಂದು ಉತ್ತರವೆಂದರೆ 'ಅರ್ಥಪೂರ್ಣ, ಸಾಂದ್ರ ಮತ್ತು ಪ್ರಮುಖ ಮಾನವಾನುಭವಗಳ ಭಾಷಿಕ ಅಭಿವ್ಯಕ್ತಿ. ಈ ಮಾತಿನಲ್ಲಿ ಗ್ರಹೀತವಾಗಿರುವ ಅಂಶವೆಂದರೆ ಮಾನವಾನುಭವವೆಂಬುದನ್ನು ನಾವು ಖಚಿತವಾಗಿ ಗುರುತಿಸಬಹುದು; ಮತ್ತು ಇಂತಹ ಖಚಿತ ಮಾನವಾನುಭವಕ್ಕೆ ಶಾಬ್ದಿಕ ರೂಪ ಕೊಡುವವನು ಒಬ್ಬ ಲೇಖಕ; ಅವನು ಕರ್ತೃ'. ಆದರೆ ಈ ವ್ಯಾಖ್ಯಾನ, ವ್ಯಾಖ್ಯಾನಕ್ಕೊಳಗಾದ ಸಾಹಿತ್ಯವನ್ನು ಬೋಧಿಸುವ ಪಠ್ಯಕ್ರಮ ಮತ್ತು ಪರೀಕ್ಷಾ ಪದ್ಧತಿಯನ್ನು ರೂಪಿಸುವ ಸಂಸ್ಥೆಯನ್ನು ಗಮನಿಸಿದರೆ, ತಾತ್ವಿಕ ವ್ಯಾಖ್ಯಾನ ಹಾಗೂ ಸಾಂಸ್ಥಿಕ ಅನುಷ್ಠಾನಗಳ ನಡುವೆ ಅಗಾಧ ಕಂದರವಿರುವುದು ಸ್ಪಷ್ಟವಾಗುತ್ತದೆ. ಯಾಕೆಂದರೆ ಸಾಹಿತ್ಯ ಎನ್ನುವ ಪರಿಕಲ್ಪನೆಯನ್ನು ಬಳಸುವಾಗಲೆಲ್ಲಾ 'ಆಯ್ಕೆ' ಮತ್ತು 'ಪ್ರತ್ಯೇಕತೆ'ಯ ಮೂಲಕ 'ಸಾಂಸ್ಥಿಕ ಹಿತಾಸಕ್ತಿ'ಗಳು ಮಾನ್ಯಮಾಡುವ 'ಒಪ್ಪಿತ' ಮಾನದಂಡಗಳಡಿ ಮಾನ್ಯತೆಗೆ ಒಳಗಾದ ಅಭಿವ್ಯಕ್ತಿ ಕ್ರಮವೊಂದಕ್ಕೆ ಸ್ಥಾನ ಕಲ್ಪನೆ ಮಾಡಲಾಗುತ್ತದೆ. ಈ ಮೂಲಕ ಮಾನವಾಭಿವ್ಯಕ್ತಿಯ ಅನೇಕ ರೂಪಗಳ ನಡುವೆ ಕೆಲವನ್ನು ಆಯ್ಕೆ ಮಾಡಿ, ಅವುಗಳಿಗೊಂದು ಅಸ್ತಿತ್ವ ನೀಡಿ, ಶ್ರೇಷ್ಠ ಸಾಹಿತ್ಯಿಕ ಪರಂಪರೆಯನ್ನು ನಿರ್ಮಿಸುತ್ತೇವೆ. ಹಾಗಾಗಿ ಸಾಹಿತ್ಯ ಎಂಬ ಪರಿಕಲ್ಪನೆಯ ನಿರ್ವಚನ ಸಂದರ್ಭ ದಲ್ಲೆಲ್ಲಾ ಒಳಗೊಳ್ಳುವ ಮತ್ತು ಹೊರಗೊಳಿಸುವ ಎರಡೂ ಪ್ರಕ್ರಿಯೆಗಳಿಗೆ ಒಳಗಾಗುವುದರಿಂದ ಶುದ್ಧಸಾಹಿತ್ಯ, ಪರಂಪರೆ, ಯುಗಧರ್ಮ ಮುಂತಾದ ಪರಿಕಲ್ಪನೆಗಳು ತೀರಾ ಪರಿಕಲ್ಪಿತವೆನಿಸಿಬಿಡುತ್ತವೆ.

ಸಾಹಿತ್ಯವಾಗಲೀ, ಸಾಂಸ್ಕೃತಿಕ ಚಿಂತನೆಯಾಗಲೀ, ಅಥವಾ ವಿದ್ವತ್ಪೂರ್ಣ ಸಂಶೋಧನೆಯಾಗಲೀ, ಯಾವ ವಿಧದ ವಾಙ್ಮಯವೂ 'ರಾಜಕೀಯ ಹಿತಾಸಕ್ತಿ'ಗಳಿಂದ ಮುಕ್ತವಾಗಿರಲು ಸಾಧ್ಯವಿಲ್ಲ; ರಾಜಕೀಯವಾಗಿ ಅಲಿಪ್ತವಾದ ಶುದ್ಧಜ್ಞಾನವೆಂಬುದು ಅಸ್ತಿತ್ವದಲ್ಲಿರಲು ಅಸಾಧ್ಯ. ಯಾಕೆಂದರೆ ಶಾಸ್ತ್ರಜ್ಞರು ಹೇಳುವಂತೆ ಜನರ ಸತ್ಯಾಕಾಂಕ್ಷೆಯನ್ನು ಅಧಿಕಾರಾಕಾಂಕ್ಷೆ ಮೀರುತ್ತದೆಯಾದುದರಿಂದ ಯಾವುದೇ ಸಮಾಜವು ಸತ್ಯದ ಸಾಮಾನ್ಯ ರಾಜಕೀಯದಿಂದ ಹೊರತಾದುದಾಗಿರುವುದಿಲ್ಲ. ಹಾಗಾಗಿ ಅಧಿಕಾರವನ್ನಾಧರಿಸಿದ ಎಲ್ಲಾ ಸಂಬಂಧಗಳನ್ನು 'ರಾಜಕೀಯ'ವೆಂದು ಕರೆಯಬಹುದಾದರೆ 'ಮಾನವನ ಎಲ್ಲಾ ಭೌತಿಕ- ಬೌದ್ಧಿಕ ಕಾರ್ಯಗಳೂ ರಾಜಕೀಯವೇ' ಎಂಬ ಸಿ. ಎನ್. ರಾಮಚಂದ್ರನ್ ಅವರ ಮಾತು ಇಲ್ಲಿ ಉಲ್ಲೇಖನೀಯ. ಈ ಹಿನ್ನಲೆಯಲ್ಲಿ ಸಾಹಿತ್ಯ ರಾಜಕಾರಣಗಳ ಒಳಸಂಬಂಧ, ಅವಲಂಬನೆಗಳನ್ನು ಇದಕ್ಕಿಂತ ಹೆಚ್ಚು ಲಂಬಿಸದೆ, ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಅಕ್ಷರ ಲೋಕದ ಪಠ್ಯಗಳು ರಾಜಕೀಯ ಅಧಿಕಾರ ಮತ್ತು ಸಾಂಸ್ಕೃತಿಕ ಯಜಮಾನಿಕೆಗಳ ಮಾಧ್ಯಮವಾಗಿ ಮತ್ತು ಒತ್ತುವರಿಗೆ ಒಳಗಾಗಿ ಜನರ ರೂಢಿಪ್ರಜ್ಞೆಯನ್ನು ರೂಪಿಸುವ ಸಾಧನವಾದ ಬಗೆಯನ್ನು ಟಿಪ್ಪಣಿ ರೂಪದಲ್ಲಿ ಮುಂದಿಡಲು ಇಲ್ಲಿ ಯತ್ನಿಸಲಾಗಿದೆ.

-೧-

ಕನ್ನಡದ ಮೊದಲ ಶಾಸನವೆಂಬ ಹೆಗ್ಗಳಿಕೆಯಲ್ಲಿ ತೆರೆದುಕೊಳ್ಳುವ ಹಲ್ಮಿಡಿ ಶಾಸನದಿಂದ ತೊಡಗಿ ನಿನ್ನೆ ಮೊನ್ನೆಯ ತನಕದ ವೃತ್ತ ಪತ್ರಿಕೆಗಳು ಸೇರಿದಂತೆ ಸರ್ಕಾರಿ ಗೆಜೆಟ್‌ಗಳೆಂಬ ಅಕ್ಷರಲೋಕದ ಅಭಿವ್ಯಕ್ತಿಯ ಮೇಲೆ ಕಣ್ಣಾಡಿಸಿದಾಗ ಕಾಲಕಾಲಕ್ಕೆ ಬದಲಾದ ಪ್ರಮಾಣ ಸಂಹಿತೆಗಳು ಮತ್ತು ಅವುಗಳಿಂದ ಜನಿತವಾಗುವ ಸಂಕಥನಗಳ ಸರಣಿಯೊಂದನ್ನು ಗುರುತಿಸುತ್ತೇವೆ. ರಾಜಪ್ರಭುತ್ವ ಮತ್ತು ಅದರ ಸಹವರ್ತಿಯಾದ ಸಾಂಸ್ಕೃತಿಕ ಪ್ರಭುತ್ವಗಳು ತಮ್ಮ ಸಾಂಸ್ಥಿಕ ರೂಪಗಳಾದ ಶಾಸನ, ಮಹಾಕಾವ್ಯಗಳು, ಪಂಡಿತ ಮಂಡಲಿ, ಧಾರ್ಮಿಕ ಕೇಂದ್ರ ಇತ್ಯಾದಿಗಳ ಮೂಲಕ ಚಾಲ್ತಿಗೆ ತಂದ ಗೋವುಗಾಳಗ, ಗಡಿಗಾಳಗ, ಹೆಣ್ಣುಹುಯ್ಯಲು, ಮಸೆಮಗ (ಲೆಂಕ), ಮಹಾಸತಿ, ಜೋಳದ ಪಾಳಿ ಇತ್ಯಾದಿ ಪರಿಕಲ್ಪನೆಗಳ ಮೂಲಕ ಬಿತ್ತಿದ 'ವೀರ' ಮತ್ತು 'ಅಮರತ್ವದ' ಗ್ರಹೀತಗಳು ಸರ್ವಾಧಿಕಾರಕ್ಕೆ ಬೇಕಾದ ಜನಸಮ್ಮತಿಯನ್ನು ಸರಳವಾಗಿ ಉತ್ಪಾದಿಸಿಕೊಡುವ ಸಾಧನಗಳಾದುವು. ಅಲ್ಲೆಲ್ಲೂ ಈ ಪಠ್ಯಗಳಲ್ಲಿ ಹೆಣ್ಣುಹುಯ್ಯಲು, ಗೋವುಗಳ ಕಳವು ಯಾಕಾಗುತ್ತಿದ್ದವು? ಯಾರು ಮಾಡುತ್ತಿದ್ದರು? ಹೆಣ್ಣು ಮತ್ತು ಗೋವನ್ನು 'ಮಾತೆ'ಯರೆಂದು ಪೂಜಿಸುವ 'ಪರಂಪರೆ'ಯ ಬೊಬ್ಬೆ ಹಾಕುವಲ್ಲಿ ಇದು ಹೇಗೆ ಸಾಧ್ಯವಾಗುತ್ತಿತ್ತು ಎಂಬ ಪ್ರಶ್ನೆಗಳಿಗೆ ಜಾಗವಾಗಲೀ ಉತ್ತರವಾಗಲೀ ಇಲ್ಲ. ಮಾತ್ರವಲ್ಲ ಸಾಮಾಜಿಕ ಕೊಲೆ, ವೈಯಕ್ತಿಕ ಆತ್ಮಹತ್ಯೆ, ಸಂಪೂರ್ಣದಾಸ್ಯಗಳು ಹೇಗೆ ತ್ಯಾಗ, ಬಲಿದಾನ, ವೇಳೆವಾಳಿತನಗಳಾಗುತ್ತವೆ ಎಂಬ ಪ್ರಶ್ನೆಗಳಿಗೆ ಅವಕಾಶವಿಲ್ಲ. ಯಾಕೆಂದರೆ ಸಂಪೂರ್ಣ ಅಧಿಕಾರದ ಬೆಂಬಲ ಹೊಂದಿದ ಪ್ರಶ್ನಾತೀತ ಪೂರ್ಣಸತ್ಯಗಳಿವು. ಇಂತಹ ಮನಃಸ್ಥಿತಿಯ ಸಮಾಜವೊಂದರಲ್ಲಿ ಈ ಮಾದರಿಯ ಜೊಳ್ಳು ಪ್ರಮಾಣಸಂಹಿತೆಗಳಿಂದಾಗಿ ಸಹಜವಾಗಿಯೇ 'ಜೋಳದಪಾಳಿಯಂ ನೆಱಪಿದವಂ ಗಂಡನಲ್ಲದೆ ಪೆಱಗಂಡನೇ' ಮತ್ತು 'ಗಂಡುತನಮಂ ನೆಱಪದವಂ ಗಂಡನಲ್ಲೆಂತುಂ ಷಂಡಂ' ಎಂಬ ಯೋಧ-ನಪುಂಸಕತ್ವದ ದ್ವಿಮಾನ ವೈರುಧ್ಯದ ಮಾದರಿಗಳು ತಯಾರಾಗುತ್ತವೆ. ಹಾಗೆಯೇ ಯಾರು ಈ ಸಂಕಥನದ ವ್ಯಾಪ್ತಿಯಿಂದ ಹೊರಗುಳಿಯುತ್ತಾರೋ ಅವರುಗಳಿಗೆ ದೇಸಿಗ, ಗಾಂಪ, ಬೆಳ್ಳ ಎಂಬ ಅಣಕಗಳು ಸಿದ್ಧವಾಗಿ ಇರುತ್ತವೆ. ಅಭಿವ್ಯಕ್ತಿ ಲೋಕದ ಸಂಗತಿಗಳಲ್ಲಿಯೂ ಕೆಲವು ಮಹಾಕಾವ್ಯಗಳೆನಿಸಿದರೆ ಇನ್ನು ಕೆಲವು ಬೀದಿವರೆ, ಬೀರನ

ಕತೆಯಾಗಿ ಆಯ್ಕೆ ಮತ್ತು ಪ್ರತ್ಯೇಕತೆಗಳಿಂದ 'ಅನ್ಯ' ವಾಗಿಸಲ್ಪಡುತ್ತವೆ.

ಹೊಸ ಕಾಲದಲ್ಲಿ ಜನರ ಭಾಗವಹಿಸುವಿಕೆ ಅಧಿಕ ಗೊಂಡು ಸಂಪೂರ್ಣಸರ್ವಾಧಿಕಾರಗಳು ಕಣ್ಮರೆ ಯಾದಂತೆ ಕಾಣುವ ಘಳಿಗೆಯಲ್ಲೂ ಕಾಲಬದ್ಧ ಹಾಗೂ ಚಾರಿತ್ರಿಕವಾದ ಪ್ರಮಾಣ ಸಂಹಿತೆಗಳು ಹೊಸ ಮಾದರಿಯಲ್ಲಿ ಮೂಡಿಬಂದು ಹೊಸ ಸಂಕಥನ ಗಳೊಂದಿಗೆ ಪಾರಂಪರಿಕವಾದ ಆಳುವವರ್ಗದ ಹಿತ ಕಾಯುವ ಕೆಲಸ ಮಾಡುತ್ತವೆ. ಶಾಸನಗಳ ಜಾಗದಲ್ಲಿ ಗೆಜೆಟ್‌ಗಳು, ಪಂಡಿತರು; ವಿದ್ವಾಂಸರುಗಳ ಜಾಗದಲ್ಲಿ ವಿ.ವಿ.ಗಳು, ಅಕಾಡೆಮಿಗಳು; ದೇವಾಲಯಗಳ ಜಾಗದಲ್ಲಿ ಮಠಮಂದಿರಗಳೂ, ಮಹಾಕಾವ್ಯಗಳ ಜಾಗದಲ್ಲಿ ಸಾಹಿತ್ಯಿಕ ಭಿನ್ನಮಾದರಿಗಳು, ಪತ್ರಿಕೆಗಳು, ಸಾಹಿತ್ಯಿಕ ಚರ್ಚೆ, ಸಮ್ಮೇಳನ, ಸಂವಾದ ಇತ್ಯಾದಿಗಳು ಜನಮನದ ಅಭಿಪ್ರಾಯ ತಿದ್ದುವ ಕೆಲಸದಲ್ಲಿ ನಿರತವಾಗಿ ಅಗ್ರಹಾರ ಗಳನ್ನು ಜೀವಂತವಾಗಿ ಉಳಿಸುವಲ್ಲಿ ದುಡಿಯುತ್ತವೆ. ಅದರ ಪರಿಣಾಮವಾಗಿ, 'ಮತಾಂತರ ಸತ್ಯದ ಮೇಲಿನ ಹಲ್ಲೆಯಾಗುತ್ತದೆ', ಸಂಸ್ಕೃತ ವಿಶ್ವವಿದ್ಯಾನಿಲಯದ ಸ್ಥಾಪನೆಯು ಭಾರತೀಯ ಪರಂಪರೆಯನ್ನು ಅರ್ಥೈಸಲು ಇರುವ ಏಕೈಕ ಮಾರ್ಗವಾಗುತ್ತದೆ, ದೇಶಪ್ರೇಮ ಎನ್ನುವುದು ಜಾತಿನಿಷ್ಠ ಸಂಗತಿಯಾಗುತ್ತದೆ. ಅದೇ ಘಳಿಗೆಯಲ್ಲಿ ಜನರ ನಿಜವಾದ ಸಮಸ್ಯೆಯಾದ ಅಸ್ಪೃಶ್ಯತೆ, ಅಸಹಾಯಕತೆ, ಅನ್ಯಾಯ, ಹತ್ಯೆಗಳ ಬಗ್ಗೆ ಮಾತನಾಡು ವವರು ಅರಾಜಕತಾವಾದಿಗಳು, ದೇಶದ್ರೋಹಿಗಳು ಎಂಬ ಪರ್ಯಾಯ ಪಟ್ಟಕ್ಕೆ ಅರ್ಹರಾಗುತ್ತಾರೆ. ಈ ಮೂಲಕವಾಗಿ ವರ್ತಮಾನಕ್ಕೆ ಬೆನ್ನುಹಾಕಿದ ಭ್ರಾಮಕ ಜಗತ್ತಲ್ಲಿರಿಸಿದ ಜನರ ರೂಢಿಪ್ರಜ್ಞೆಯ ಒಳಗಡೆ ಅಧಿಕಾರವನ್ನು ವಿರೋಧಿಸುವ ಸಂಗತಿಗಳು ಪ್ರವೇಶ ಪಡೆಯದಂತೆ ತಡೆಯಲಾಗುತ್ತದೆ.

-೨-

ಅಂಟೋನಿಯೋ ಗ್ರಾಮ್ಷಿ ಹೇಳುವಂತೆ ಸರ್ವಾಧಿ ಕಾರತ್ವವಿಲ್ಲದ ಸಮಾಜದಲ್ಲಿಯೂ ಕೆಲವು ಸಾಂಸ್ಕೃತಿಕ ರಚನೆಗಳು ಪ್ರಬಲವಾಗಿರುತ್ತವೆ ಮತ್ತು ಕೆಲವು ಸಾಂಸ್ಕೃತಿಕ ವಿಚಾರಗಳು ಪ್ರಭಾವಶಾಲಿಯಾಗಿರುತ್ತವೆ. ಸಾಮಾಜಿಕ ಸಮ್ಮತಿಯನ್ನು ಪಡೆಯುವ ಕೆಲವು ರಚನೆಗಳ ಪ್ರಾಧಾನ್ಯ ವನ್ನು ಆತ ಸಾಂಸ್ಕೃತಿಕ ಯಾಜಮಾನ್ಯವೆಂದು ಕರೆಯುತ್ತಾನೆ. ಈಗಾಗಲೇ ಪಠ್ಯವೊಂದು ರಾಜಕೀಯದಿಂದ ಅಲಿಪ್ತ ವಾದ ಶುದ್ಧಜ್ಞಾನವಾಗಿ ಇರುವುದಿಲ್ಲ ಎಂಬುದನ್ನು ನಾವು ಒಪ್ಪಿದ್ದೇವೆ. ಹಾಗಾಗಿ ಪಠ್ಯವೊಂದು ಎಂತಹ ಸಾಂಸ್ಥಿಕ ಆವರಣದಲ್ಲಿ ತನ್ನನ್ನು ತೆರೆದುಕೊಳ್ಳುತ್ತದೆ, ಯಾರು, ಯಾವಾಗ, ಯಾಕಾಗಿ ಓದುತ್ತಾರೆ, ಎಂಬ ವಿಚಾರಗಳೂ ಆ ಪಠ್ಯ ರೂಪಿಸುವ ಗ್ರಹೀತಗಳನ್ನು ತಿಳಿಸುತ್ತವೆ. ಪಠ್ಯ ವೊಂದರ ನಿರಂತರ ಪುನರಾವರ್ತಿ, ಬಹು ಆಯಾಮಗಳ ಸಂವಾದಗಳು, ಅದರ ವಸ್ತು, ಪಾತ್ರಗಳನ್ನು ಜನಮನದಲ್ಲಿ ನಿರಂತರವಾಗಿ ಚಾಲ್ತಿಯಲ್ಲಿ ಉಳಿಸುವ ಯತ್ನವಾಗಿರುತ್ತವೆ. ಈ ಮೂಲಕ ಚಾಲ್ತಿಯಲ್ಲಿರುವ ಇಂತಹ ಮಾದರಿಗಳನ್ನು ಬಳಸಿಕೊಂಡು ತನ್ನ ಮೌಲ್ಯಸ್ಥಾಪನೆಯ ದಾರಿಯನ್ನು ಆಳುವ ವರ್ಗ ಬಹುಸುಲಭವಾಗಿ ಕಂಡುಕೊಳ್ಳಬಹುದು. ಸಂವಾದಗಳ ಮೂಲಕ ಪ್ರಶ್ನಾತೀತ ಮಾದರಿಯಾಗಿ ರೂಪಿಸಿ ಅಧಿಕಾರದ ನಿರಂತರತೆಗೆ ಸಾಧನವಾಗಿ ಬಳಸುವ ಈ ಕ್ರಮವನ್ನು ಪಠ್ಯವೊಂದರ ಒತ್ತುವರಿ ಎನ್ನಬಹುದೋ ಏನೋ.

ಉದಾಹರಣೆಗೆ, ಗೋವಿನ ಹಾಡಿನಂತಹ ಜಾನಪದ(?) ಪಠ್ಯವೊಂದು ಪ್ರಾಥಮಿಕ ಶಾಲೆಯಿಂದ ಹಿಡಿದು ಸ್ನಾತಕೋತ್ತರ ಶಿಕ್ಷಣದ ತನಕ ಪಾಠ ಮತ್ತು ಸಂವಾದದಲ್ಲಿ ಪುನರಾವರ್ತನಗೊಳ್ಳುವುದು, ಶೈಕ್ಷಣಿಕ ಆವರಣದ ಅಕಾಡೆಮಿಕ್ ಚರ್ಚೆಗಳ ವಸ್ತುವಾಗುವುದು ನಿರಂತರವಾಗಿ ನಡೆದುಕೊಂಡು ಬಂದಿದೆ. ಹಾಗೆಯೇ ಸಾರ್ವಜನಿಕ ವಲಯದಲ್ಲಿ ನಾಟಕ, ರೂಪಕ, ಸಿನಿಮಾ, ಹಾಡು, ಮೂಕಾಭಿನಯವಾಗಿಯೂ ಈ ವಸ್ತು ನಿರಂತರವಾಗಿ ಚಾಲ್ತಿಯಲ್ಲಿ ಉಳಿದಿದೆ. ಹೀಗೆ ನಿರಂತರವಾಗಿ ಉಳಿಯುವ ಮೂಲಕ ಕಾವ್ಯದ ಬಹುಮುಖ್ಯ ಪಾತ್ರವಾದ ಹುಲಿ-ಹಸುಗಳಲ್ಲಿ ಸಾಮಾಜಿಕ ವಲಯದ ಆಯ್ಕೆಯ ನಿರ್ದೇಶನವೂ ನಡೆದಿದೆ. ಹಸು ಪುಣ್ಯಕೋಟಿಯಾಗಿ, ಕರ್ಮಸಿದ್ಧಾಂತಾಧಾರಿತ ಪುಣ್ಯದ, ಸಾತ್ವಿಕತೆಯ, ಒಳಿತಿನ, ಶಾಕಾಹಾರದ, ವಚನ ಪಾಲನೆಯ ಪ್ರಶ್ನಾತೀತ ಅಚ್ಚಾಗಿ ನೆಲೆ ಕಂಡುಕೊಂಡಿದೆ. ಪಠ್ಯವೊಂದರ ಪಾತ್ರ ಈ ಮೂಲಕ ಜನರ ಭಾವನೆ, ನಡತೆ, ಆಹಾರಕ್ರಮ, ಆಲೋಚನೆಗಳಲ್ಲಿ ಸಾಮಾಜಿಕ ಶ್ರೇಣೀಕರಣದ ಮೇಲ್ತುದಿಯಲ್ಲಿರುವವರು ತಮ್ಮ ಅನುಕೂಲಕ್ಕಾಗಿ ಪ್ರಚುರಪಡಿಸಿದ ಮೌಲ್ಯಗಳನ್ನು ಮಾತನಾಡುವ, ಒಪ್ಪಿಸುವ ಸಾಧನವಾಗಿದೆ.

ತನ್ನ ಕಂದನಿಗೆ ಹಾಲು ನೀಡಿ ಹುಲಿಯ ಬಾಯಿಗೆ ಆಹಾರವಾಗಲು ಹೊರಡುವ ಗೋವು ಅರಿವಿನ ಬೆಳಕಾಗಿ ಹುಲಿಯಲ್ಲಿ ಕೇವಲ ಸಾತ್ವಿಕತೆಯನ್ನು ತಾರದೆ, ಆತ್ಮಹತ್ಯೆಯನ್ನು ಅನಿವಾರ್ಯವಾಗಿಸಿ ಔದಾರ್ಯದ ಸಾವು ತಂದರೂ, ಸಂವಾದದಲ್ಲಿ ಹುಲಿಗಿಂತ ಅಧಿಕವಾಗಿ ಪಾಲು ಪಡೆಯುತ್ತದೆ. ಈ ಹುಲಿ ಯಾರು ? ಈ ಎರಡೂ ಪ್ರಾಣಿಗಳು ನಮ್ಮೆದುರಿನ ಸಮಾಜದಲ್ಲಿ ಸಾಂಸ್ಕೃತಿಕವಾಗಿ ಮತ್ತು ಶಾಸನಾತ್ಮಕವಾಗಿ ಮಾನ್ಯತೆ ಪಡೆದವುಗಳು. ಆದರೆ ಗೋವಿನ ಕಳ್ಳರನ್ನು ರಕ್ಷಿಸಲು ಸೈನಿಕರಿರುವಂತೆ, ಹುಲಿಚರ್ಮ, ಉಗುರುಗಳನ್ನು ಮಾರಾಟಮಾಡುವ ಕದೀಮರಿಗೆ ತಡೆಯೊಡ್ಡುವ ಸಾಂಸ್ಕೃತಿಕ ಆರಕ್ಷಕ ರಿದ್ದಾರೆಯೇ ? ಹಸುವಿನ ಒಡೆಯನಾದ ಗೊಲ್ಲನಿಗೆ (ಹಾಲು ಮಾರುವವನಿಗೆ) ಹಸು ನಿಜವಾಗಿಯೂ ಲಾಭದಾಯಕವಾಗಿ ಉಳಿದಿದೆಯೇ ? ಅದು ಅವನ ಒಡೆತನದಲ್ಲಿದೆಯೆ ? ಅವನ ಹಟ್ಟಿಯಿಂದ ಗೋ ಸಮ್ಮೇಳನ, ಗೋಶಾಲೆಗಳ ದಾರಿ ಹಿಡಿದು ಗೋರಕ್ಷಕರ, ಗೋವಿನ ಬಾಲ ಹಿಡಿದ ಸರ್ಕಾರೇತರ ಅಂಗಸಂಸ್ಥೆಗಳಿಗೆ ಸರ್ಕಾರದ ತೆರಿಗೆ ಹಣ ಹಂಚಿಕೊಳ್ಳುವ ಹಕ್ಕನ್ನು ನೀಡಿದೆಯೇ ?




ಹಸುವಿನ ಮಾಂಸ ತಿನ್ನುವ ಹುಲಿಯ ಸಾವು ಆಹಾರಮಾದರಿಗಳ ಆಯ್ಕೆಯ ಮೇಲೆ ಉಂಟುಮಾಡುವ ಪರಿಣಾಮಕ್ಕೆ ಇರುವ ಜಾತಿ ರಾಜಕಾರಣದ ಆಯಾಮ ವೇನು ? ಗೋಮಾತೆಯಾಗಿ ಸ್ಥಿರೀಕರಿಸಲ್ಪಡುವ ಗೋಸಂಕಥನ ಗೋಮಾಂಸವನ್ನು ದೇಶನಿಷ್ಠೆ, ಸಂಸ್ಕೃತಿ ನಿಷ್ಠೆಯೊಂದಿಗೆ ಬೆಸೆಯುವಲ್ಲಿ ಯಶಸ್ಸುಗೊಳಿಸಿರುವುದಕ್ಕೆ ಇಂತಹ ಪಠ್ಯವೊಂದರ ಬಹುರೂಪಿಯಾದ ಸಂವಾದಾ ವಕಾಶದ ಕೊಡುಗೆ ಇದೆಯೆನ್ನಬಹುದೆ ? ಧರ್ಮಾ ಧಾರಿತವಾಗಿ ಗೋವನ್ನು ಪೂಜ್ಯವೆಂದು ನೋಡುವ ಮತ್ತು ಆಹಾರವಾಗಿ ನೋಡುವ ಮನಃಸ್ಥಿತಿಗಳಲ್ಲಿ ಆಹಾರ ಕ್ರಮದ ತುಚ್ಛೀಕರಣವನ್ನು ಪಠ್ಯದ ಪುನರಾವರ್ತಿತ ಬಳಕೆಯಲ್ಲಿ ಸಾಧ್ಯವಾಗಿಸುವ ಮೂಲಕ ಧಾರ್ಮಿಕ ಧ್ರುವೀಕರಣದ ಸಾಧನವಾಗಿಸಲಾಯಿತೆ ? ಮತ್ತು ಗೋ ಭಕ್ತರೆಲ್ಲರನ್ನು ದೇಶ-ಸಂಸ್ಕೃತಿ ಆರಾಧಕರೆಂಬ ಸಮತಲ ದಲ್ಲಿರಿಸಿ ನೋಡುವ ಯತ್ನಕ್ಕೆ ಚಾಲನೆ ನೀಡಲಾಯಿತೆ ?

ಹಸು-ಹುಲಿಗಳ ಮೂಲಕ ಅನಾವರಣವಾಗುವ ಹಸುವಿನ ವ್ಯಕ್ತಿತ್ವದ ಬಹುಮುಖ್ಯವಾದ ಅಂಶಗಳು ಅದರ ತಾಯ್ತನ, ಸಾತ್ವಿಕತೆಗಳ ಜತೆಗಿನ ಸತ್ಯಪ್ರೀತಿ – ವಚನ ಪಾಲನೆ. ಇವುಗಳಲ್ಲಿ ಯಾವುದು ಸತ್ಯ ? ವಚನಪಾಲನೆ ಎಂದರೇನು ? ವಚನ ಪಾಲಿಸಿ ಬಲಿ ಪಡೆದ ಹಸುವೇ ಯಾಕೆ ಹುಲಿಗಿಂತ ಶ್ರೇಷ್ಠ ಎನಿಸಿಬಿಡುತ್ತದೆ ? ಈ ತೆರನಾದ ಪುಣ್ಯಕೋಟಿಯ ಅಚ್ಚನ್ನು ಕಟ್ಟಿದ ನಾಡಿನ ಜನರೆಂದು ಸಹಜ ಭ್ರಷ್ಟರಾದ ರಾಜಕಾರಣಿಗಳು 'ವಚನಪಾಲನೆ', 'ವಚನ ಭ್ರಷ್ಟತೆ'ಯ ಕೂಗು ಹಾಕಿ ಹಸುವಿನ ಮುಖವಾಡ ಧರಿಸುವುದಕ್ಕೆ ಅಗತ್ಯವಾದ ಭೂಮಿಕೆಯನ್ನು ತಯಾರು ಮಾಡಿಕೊಟ್ಟಿರುವಲ್ಲಿ ಗೋವಿನ ಹಾಡಿನ ಪಠ್ಯದ ಬಹುಬಳಕೆಯ ಪಾಲಿದ್ದೇ ಇದೆ ಎನಿಸುತ್ತದೆ. ಗೋವಿನ ಸಂಕಥನದ ಮೂಲಕ ಚುನಾವಣಾ ರಾಜಕಾರಣದ ಜಯವನ್ನು, ಸಾಂಸ್ಕೃತಿಕ ಯಜಮಾನಿಕೆಯನ್ನು ಹೊಂದುವ ಗೋಭಕ್ತರಿಗೂ ಸದ್ಯದ ಸ್ಥಿತಿಯಲ್ಲಿ ತನ್ನ ಕರುವಿಗೂ ಹಾಲು ನೀಡಲಾರದೆ ಹಾಲು ನೀಡುವ ಹೈಬ್ರೀಡ್ ಯಂತ್ರವಾಗಿ ಮಾರ್ಪಟ್ಟ ಹಸುವಿನ ಕೆಚ್ಚಲ ನೋವಿನ ಸತ್ಯ ಮುಖ್ಯವಾಗುವುದೇ ಇಲ್ಲ. ಮೌಲ್ಯಪ್ರಜ್ಞೆಯನ್ನು ಹರಳುಗಟ್ಟಿಸುವಲ್ಲಿ ಬಳಕೆಗೊಂಡು ರಾಜಕೀಯ ಗುರಿಸಾಧನೆಗೆ ಏಣಿಯಾಗಿರುವ ಹಸು ಈ ಪಠ್ಯದ ನಿರ್ವಚನದ ಮೂಲಕ ಸಂಪೂರ್ಣವಾಗಿ ಒತ್ತುವರಿಗೆ ಒಳಗಾಗಿದೆ.

-೩-

ನಮ್ಮ ಪ್ರಜ್ಞೆಯ ಒಳಗೆ ಬೆರೆತುಹೋದ ಇನ್ನೊಂದು ಬಹುಮುಖ್ಯವಾದ ಸಂಗತಿ ರೈತ ಮತ್ತು ಕೃಷಿಗೆ ಸಂಬಂಧಿ ಸಿದ್ದು, ಭೂಮಿಯ ಹಕ್ಕಿಗಾಗಿ, ಬಗರ್‌ಹುಕುಂ

ಸಾಗುವಳಿಗಾಗಿ, ಬೆಳೆದ ಬೆಳೆಗೆ ಸರಿಯಾದ ಬೆಲೆಗಾಗಿ ನರಗುಂದ, ಈಸೂರು, ಕಾಗೋಡು ಮುಂತಾದ ಹೋರಾಟಗಳ ಸರಣಿ ಇದೆ. ಮುಕ್ತ ವ್ಯಾಪಾರದ ಒಡಂಬಡಿಕೆಯ ಪರಿಣಾಮದಿಂದಾಗಿ ನಮ್ಮ ಕೃಷಿ ರೂಟ್‌ಲೆಸ್ ಆಗಿ ಸೀಡ್‌ಲೆಸ್ ಕೂಡ ಆಗಿಬಿಟ್ಟಿದೆ. ಬೀಜ ಕೆಟ್ಟು ಬೆತ್ತಲಾದ ಭೂಮಿಯೆದುರು, ಬೆಲೆ ಸಿಗದೆ ರಸ್ತೆಗೆ ಸುರಿದ ಬೆಳೆಯೆದುರು ಈಗ ರೈತಮಂದಿ ಕೊರಳಿನ ಕುಣಿಕೆ ಸಿದ್ಧಪಡಿಸಿಕೊಳ್ಳುತ್ತಿದ್ದಾರೆ. ರೈತರಿಂದ ೫ ಲಕ್ಷಕ್ಕೆ ಭೂಮಿ ಖರೀದಿಸಿ ೫೦ ಲಕ್ಷಕ್ಕೆ ಸರ್ಕಾರಕ್ಕೇ ಮಾರುವ ದಲ್ಲಾಳಿಗಳು ತಾವು ವ್ಯಾಪಾರಕ್ಕಾಗಿಯೇ ಇರುವವರೆಂಬುದನ್ನು ಜಾಹಿರಾತುಗೊಳಿಸುತ್ತಿದ್ದಾರೆ. ಗೊಬ್ಬರಕ್ಕಾಗಿ ಆಗ್ರಹಿಸುವ ರೈತರಿಗೆ ಗುಂಡಿನೇಟು ನೀಡಿ ಬಲಿತೆಗೆದುಕೊಳ್ಳುವ ಜತೆಗೆ ಕಣ್ಣುಮುಚ್ಚಾಲೆಯ ವಿದ್ಯುತ್ ಸಮಸ್ಯೆ ಅವರನ್ನು ಹತಾಶ ಸ್ಥಿತಿಯಲ್ಲಿರಿಸಿದೆ. ಅಧಿಕಾರ ಶಕ್ತಿಯು ಹಿಂಸೆ ಇಲ್ಲವೆ ಬಲದ ಮೂಲಕ ಈ ಹತಾಶೆಯನ್ನು ಶಮನಗೊಳಿಸಲಾರದ ಸ್ಥಿತಿಯಲ್ಲಿರುವಾಗ ಅಥವಾ ಅಧಿಕಾರಶಕ್ತಿಗಿರುವ ಹಿಂಸೆ ಅಥವಾ ಬಲದ ಸಂಪನ್ಮೂಲಗಳು ಮಿತವಾದಾಗ, ಆಡಳಿತಕ್ಕೆ ಬೇಕಾದ ಜನರ ಸಮ್ಮತಿಯನ್ನು ಪಡೆಯುವ ಸಲುವಾಗಿ ಉದಾರವಾದಿ, ಪ್ರಗತಿಪರ ಅಭಿಪ್ರಾಯಗಳನ್ನು 'ಸಮ್ಮತಿಯ ಉತ್ಪಾದನಾ' ಸಾಧನಗಳಾಗಿ ಆಶ್ರಯಿಸುವುದು ಅಗತ್ಯವಾಗಿರುತ್ತದೆ. ಯಾಕೆಂದರೆ ಒಂದು ಜನಪ್ರಿಯ ಸರ್ಕಾರವೆನ್ನುವುದು ಸಾರ್ವಜನಿಕ ಅಭಿಪ್ರಾಯಗಳನ್ನು ಪರಿಣಾಮಕಾರಿಯಾಗಿ ನಿಯಂತ್ರಿಸುವುದೇ ಆಗಿರುತ್ತದೆ. ಹಾಗೊಂದು ವೇಳೆ ಅದಕ್ಕೆ ಮಾಡಲಾಗದೇ ಹೋದರೆ ಜನತೆಯ ವಿಧೇಯತೆಯನ್ನು ಪಡೆಯಲಾಗದು. ಈ ಹಿನ್ನೆಲೆಯಲ್ಲಿ ರೈತನ ಜಪ, ರೈತನ ಹೆಸರಿನಲ್ಲಿ ಪ್ರಮಾಣ ವಚನ, ರೈತನ ಮಗನೆಂಬ ಘೋಷಣೆ, ಕೊನೆಗೆ ರೈತಗೀತೆ ಎಲ್ಲವೂ ಇಂತಹ ಸಾಧನಗಳಾಗಿ ಒದಗಿಬರುತ್ತವೆ. ಮಣ್ಣಿನ ಮಕ್ಕಳ ಪಾಡು ಕಂಡು ಪ್ರಗತಿಪರ ಧೋರಣೆಯ ಕುವೆಂಪು ಕಟ್ಟಿದ 'ನೇಗಿಲಯೋಗಿ' ಗೀತೆ ಇಂತಹ ಸನ್ನಿವೇಶದಲ್ಲಿ ತನ್ನೆಲ್ಲಾ ಜನವಿರೋಧಿ ನೀತಿಗಳ ನಡುವೆಯೂ ಜನಪರವೆಂದು ಸಾರಿಕೊಳ್ಳುವ ರಾಜಕಾರಣದ ಆಯುಧವಾಗುತ್ತದೆ. ಮತ್ತೂ ವಿಚಿತ್ರವೆಂದರೆ ಹೀಗೆ ಘೋಷಿಸಿ, ಪೋಷಿಸುವ ಪ್ರಕ್ರಿಯೆಯಲ್ಲೂ ಅದರ ಹಾಡುವ ಉದ್ಯೋಗದ ಫಲಾನುಭವಿಗಳಾಗುವುದು ಕುವೆಂಪು ತಮ್ಮ 'ಗೊಬ್ಬರ' ಕವನದಲ್ಲಿ ಅತ್ಯುಗ್ರವಾಗಿ ಟೀಕಿಸುವ, ಸಂಗೀತ-ಸಾಹಿತ್ಯವನ್ನು ಶಾಸ್ತ್ರೀಯ ಚೌಕಟ್ಟಿನಲ್ಲಿ ಬಂಧಿಸಿಕೊಂಡು ಬಂದ, ರೈತರಲ್ಲದವರು. ಹೀಗೆ ಜನರ ಕಂದಾಯದ ಹಣ ನೇಗಿಲು ಹಿಡಿಯದವರಿಗೆ ಹಂಚಲಾಗುತ್ತದೆ. ಬೆನ್ನಿನ ಬೆನ್ನು ಹತ್ತಿದ ಹೊಟ್ಟೆಯೊಣಗಿದ ರೈತರೇ ಬೇರೆ, ರೈತಗೀತೆಯನ್ನು ಹಾಡುವ ಹೊಟ್ಟೆತುಂಬಿದವರೇ ಬೇರೆ.

ಸಾಹಿತ್ಯಿಕ ಪಠ್ಯವೊಂದರ ಪ್ರತಿಯಾಜಮಾನ್ಯದ ಅವಕಾಶವನ್ನು ಈ ಮಾದರಿಯಲ್ಲಿ ನಿರಸನಗೊಳಿಸುವಂತೆಯೇ ಅಧಿಕಾರವು ಇಂತಹ ಪಠ್ಯಗಳ ನಿರ್ಮಾತೃಗಳನ್ನೂ ಒತ್ತುವರಿ ಮಾಡಿಕೊಳ್ಳುವ ಮೂಲಕವಾಗಿ ಜನಸಮ್ಮತಿಗೆ ಅವಕಾಶ ಮಾಡಿಕೊಳ್ಳುತ್ತದೆ. ಇದರ ಪರಿಣಾಮವಾಗಿ 'ಜನರಿಗಾಗಿ ದಾರಿ ಬಿಡುವಂತೆ ಹೇಳಿ ರಾಜ್ಯ ಕೇಳಿ'ದವರು 'ಬಾ ಗೆಳತಿ ಅಪ್ಪಿಕೋ ಜಗದ ಗೊಡವೆ ನಮಗೇಕೆ', ಎಂದು ಅಧಿಕಾರ ಮುದ್ರೆಯೊಂದಿಗೆ ವಿಚಿತ್ರ ಅಂತರಂಗದ ಸುಖವನ್ನನುಭವಿಸುತ್ತಾರೆ. ಇದರೊಂದಿಗೆ ತಾನು ಪಾರಂಪರಿಕವಾಗಿ ಬತ್ತಳಿಕೆಯಲ್ಲಿ ಕಾಯ್ದಿಟ್ಟುಕೊಂಡು ಬಂದ ಆಯುಧಗಳು ಆವರಣವನ್ನು ಕಟ್ಟಿ ಫೌಜುದಾರಿಕೆ ಮಾಡುತ್ತಾ ಯಾಜಮಾನ್ಯದ ತುತ್ತೂರಿ ಊದುತ್ತಲೇ ಇರುತ್ತವೆ. ಎಲ್ಲೆಲ್ಲಿ ಇಂತಹ 'ಸಜ್ಜನರು' ತಯಾರಾಗುತ್ತಾರೊ ಅಲ್ಲೆಲ್ಲಾ ಪದ್ಮಭೂಷಣ, ಸಾಹಿತ್ಯರತ್ನಗಳಂತಹ ಕಿರೀಟದ ಅಚ್ಚುಗಳು ಠಳಾಯಿಸುತ್ತಲೇ ಹೋಗುತ್ತವೆ.

-೪-

ಸಾಹಿತ್ಯದ ಕಟ್ಟುವಿಕೆ, ಅನುಸಂಧಾನದಲ್ಲಿ ಬೆರೆತಿರುವ ರಾಜಕೀಯದಿಂದಾಗಿ ಯಾಜಮಾನ್ಯ ಮತ್ತು ಪ್ರತಿಯಾಜಮಾನ್ಯಗಳ ಸಂಘರ್ಷವೂ ಅನಿವಾರ್ಯವಾಗುತ್ತದೆ. ಸಿಗರೇಟು ಲಕೋಟೆಯ ಮೇಲೆ ಶಾಸನಾತ್ಮಕ ಘೋಷಣೆ ನೋಡಿಯೂ, ಸಿಗರೇಟು ಸೇವನೆಯ ಅಲಿಖಿತ ಸಂತೋಷ, ಫಲಿತಗಳು ವಿಜೃಂಭಿಸುವಂತೆ, ಜನರ ರೂಢಿಪ್ರಜ್ಞೆಯ ಭಾಗವಾಗಿ ಆಳುವವರ್ಗದ ಮೌಲ್ಯಗಳು ಜನರ ಮನಸ್ಸನ್ನು ಆಳಬಲ್ಲವು. ಈ ಸ್ಥಿತಿಗೆ ತಳ್ಳುವ ರಾಜಕಾರಣಕ್ಕೆ ಪ್ರತಿಯಾಗಿ ಜನರ ರೂಢಿಪ್ರಜ್ಞೆಯ ಅಂತರಂಗದಲ್ಲಡಗಿರುವ ಯಾಜಮಾನ್ಯ ವಿಚಾರಗಳನ್ನು ಎದುರಿಸುವ ಮೂಲಕ 'ಸತ್ವಪೂರ್ಣ ಗ್ರಹಿಕೆ'ಗಳನ್ನಾಗಿಸಬೇಕು. ನಮ್ಮ ಸಹಜ ಭೇದಗಳನ್ನು ಮರೆಮಾಚಿ, 'ನಾವೆಲ್ಲರೂ ಒಂದೇ; ನಾವೆಲ್ಲರೂ ಸಮಾನರು' ಎಂಬ ಕೃತಕ ಘೋಷಣೆಗಳ ಹುಸಿಯನ್ನು ಬಯಲು ಮಾಡುತ್ತಾ, 'ನಾವು ಅಸಮಾನರು ಮತ್ತು ಅಸ್ವತಂತ್ರರು' ಎಂಬ ಸತ್ಯವನ್ನು ದಾಖಲಿಸಬೇಕು. ನಾವು ಏನಾಗಿದ್ದೇವೆಯೋ, ಏನಾಗಬೇಕೆಂದು ನಿರ್ದೇಶಿಸಲಾಗುತ್ತಿದೆಯೋ ಅದರ ನಿರಾಕರಣೆಯ ಮೂಲಕ ಪ್ರಮಾಣ ಸಂಹಿತೆ (ಎಪಿಸ್ಟೀಮ್) ಮತ್ತು ಅದರ ಫಲಿತಗಳಾದ ಸಂಕಥನಗಳು ನಮ್ಮಲ್ಲಿ ಆರೋಪಿಸುವ ಒಂದು ಬಗೆಯ ವ್ಯಕ್ತಿತ್ವದಿಂದ ಕಳಚಿಕೊಳ್ಳುವುದು ನಮ್ಮೆಲ್ಲರ ಕರ್ತವ್ಯವಾಗಬೇಕು. ಯಾಕೆಂದರೆ ರಾಜಕೀಯವೆಂಬುದು ಕೇವಲ ಪ್ರಭುತ್ವವನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ನಡೆಸುವ ಕಾರ್ಯಾಚರಣೆಯಲ್ಲ. ಅದು ನಾವು ನಮ್ಮ ದಿನನಿತ್ಯದ ಅನುಭವಗಳ ಮೂಲಕವೇ ಪ್ರಭುತ್ವ ರೂಪಿಸುವ ಭ್ರಾಮಕ ಸಮುದಾಯದ ದರ್ಶನ ಪಡೆದು, ಹೊಸ ಸಾಮುದಾಯಿಕ ಬದುಕಿನ ವ್ಯಾಕರಣ ಕಟ್ಟಿಕೊಳ್ಳುವಂತೆ ಮಾಡುವ ಪ್ರತಿಯಾಜಮಾನಿಕೆಯನ್ನು ರೂಪಿಸುವ ಹೋರಾಟವೂ ಆಗಿರುತ್ತದೆ. ಇಂತಹ ಹೋರಾಟವನ್ನು ರೂಪಿಸುವಲ್ಲಿ, ಅದರ ಭಾಗವಾಗುವಲ್ಲಿ ನಮ್ಮ ಜವಾಬ್ದಾರಿಗಳೇನಾಗಿರಬೇಕು, ನಮ್ಮನ್ನು ಪ್ರಭುತ್ವದ ಒತ್ತುವರಿಯಿಂದ ಹೊರಗುಳಿಸಿಕೊಳ್ಳಬೇಕೆ, ಒತ್ತುವರಿಗೆ ಒಳಗಾಗಿಸಿಕೊಳ್ಳಬೇಕೆ, ಎಂಬ ಜಿಜ್ಞಾಸೆಗೆ ಪೂರಕ ಎಂಬ ಕಾರಣಕ್ಕಾಗಿ ಪಿ. ಲಂಕೇಶರ 'ದೇಶಭಕ್ತ ಸೂಳೆಮಗನ ಗದ್ಯಗೀತೆ'ಯ ಈ ಸಾಲುಗಳನ್ನು ಉಲ್ಲೇಖಿಸಿ ಲೇಖನಕ್ಕೆ ಕೊನೆ ಹಾಡುತ್ತಿದ್ದೇನೆ :

ಕೈಯಲ್ಲಿ ಕೈಯಿಟ್ಟು ನಡೆಯೋಣವೆ ?
ಸಂದೇಹದಿಂದ ಕಂಡವರ ಜಾತಕ ಓದೋಣವೆ ?
ಜೇಬಲ್ಲಿ ಕೈಯಿಟ್ಟು ಸುಮ್ಮನೆ ಕೂಡೋಣವೆ ?
ಮೀಸೆ ಕತ್ತರಿಸುತ್ತ ಅಥವಾ ಪದ್ಮಶ್ರೀ ಆಗುತ್ತ
ಅಥವಾ ಗೀತೆ ಓದುತ್ತ ಅಥವಾ ರಸ್ತೆಗಳ ಗುಡಿಸುತ್ತ.

**ಜಯಪ್ರಕಾಶ್ ಶೆಟ್ಟಿ ಎಚ್.**
ಆಯ್ಕೆ ಶ್ರೇಣಿ ಉಪನ್ಯಾಸಕರು
ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಹಿರೇಕೆರೂರು




ದಿನಾಂಕ ೨೪-೧-೨೦೧೦ರಂದು ಬೆಂಗಳೂರಿನಲ್ಲಿ ನವಕರ್ನಾಟಕದ ಐದು ಆರೋಗ್ಯ-ವೈದ್ಯಕೀಯ ಕೃತಿಗಳ ಲೋಕಾರ್ಪಣೆ ಕಾರ್ಯಕ್ರಮ ನಡೆಯಿತು. ಡಾ|| ಲೀಲಾವತಿ ದೇವದಾಸ್ ಸಮಾರಂಭದ ಅಧ್ಯಕ್ಷತೆ ವಹಿಸಿ ಪುಸ್ತಕ ಅನಾವರಣ ಮಾಡಿದರು. ಡಾ|| ವಸುಂಧರಾ ಭೂಪತಿ ಕೃತಿಗಳ ಪರಿಚಯ ಮಾಡಿಕೊಟ್ಟರು. ಚಿತ್ರದಲ್ಲಿ: (ಎಡದಿಂದ ಬಲಕ್ಕೆ) ಡಾ|| ನಾ. ಸೋಮೇಶ್ವರ, ಡಾ|| ಎಸ್. ಎನ್. ಓಂಕಾರ್, ಡಾ|| ಲೀಲಾವತಿ ದೇವದಾಸ್, ಡಾ|| ಸಿ. ಆರ್. ಚಂದ್ರಶೇಖರ್, ಶ್ರೀ ಆರ್. ಎಸ್. ರಾಜಾರಾಮ್, ಮಗು ಪರಾಗ, ಡಾ|| ವಸುಂಧರಾ ಭೂಪತಿ.

# ಸಭಾಪರ್ವ

**ಸಭೆಗೆ ಸಭಿಕರೇ ಜೀವಾಳ. ಜನರೇ ಇಲ್ಲದ ಮೇಲೆ ಯಾರನ್ನು ಉದ್ದೇಶಿಸಿ ವೇದಿಕಾರೂಢರು ಭಾಷಣ ಬಿಗಿದಾರು, ಹಾಡು, ನಟನೆ, ಹಾಸ್ಯ, ಜಾದೂ ಒಪ್ಪಿಸಿಯಾರು ? ಬಗೆಬಗೆಯಾಗಿ ಮಂದಿಯನ್ನು ಸೆಳೆಯುವುದು ಅನೇಕ ಸಂದರ್ಭಗಳಲ್ಲಿ ಅಗತ್ಯವೂ, ಅನಿವಾರ್ಯವೂ ಆಗುತ್ತದೆ. ಉಚಿತ ಪ್ರವೇಶ, ಮೊದಲು ಬಂದವರಿಗೆ ಆದ್ಯತೆ ಇತ್ಯಾದಿ ಒಕ್ಕಣೆಗಳು ಪ್ರಭಾವ ಬೀರದಿರಬಹುದು. ಆಮಂತ್ರಣ ಪತ್ರಿಕೆಯಲ್ಲಿ ದಪ್ಪ ಅಕ್ಷರಗಳಲ್ಲಿ ಲಘು ಉಪಾಹಾರ, ಭೋಜನದ ಏರ್ಪಾಟಿದೆ ಎಂಬ ಷರಾವನ್ನು ಖಂಡಿತವಾಗಿಯೂ ಮಂದಿ ಬಯಸಿಯಾರಲ್ಲವೆ ?**

**ಯಾ**ವುದಕ್ಕಾದರೂ ಅಭಾವ, ಬರ ಬಂದೀತು. ಭಾಷಣಕ್ಕಂತು ಎಂದಿಗೂ ಅದು ಬರದು. ಸಭೆಯಿದೆ, ಕವಿಗೋಷ್ಠಿಯಿದೆ, ಪುಸ್ತಕ ಬಿಡುಗಡೆಯುಂಟು ದಯವಿಟ್ಟು ನೀವು ಬನ್ನಿ, ಜೊತೆಯಲ್ಲಿ ಕನಿಷ್ಠ ಒಬ್ಬರನ್ನಾದರೂ ಕರೆದು ತನ್ನಿ ಎಂದೆಲ್ಲಾ ಗೋಗರೆಯುವವರನ್ನು ನಾವು ಸಾಕಷ್ಟು ಕಾಣುತ್ತೇವೆ. ಈಚೆಗೆ ನನ್ನ ಕವಿಮಿತ್ರ ಪಿ.ಶಾ.ಚಿ. (ಪಿರಿಯಾಪಟ್ಟಣ ಶಾಮಣ್ಣ ಚಿದು) ಕವಿಮೇಳಕ್ಕೆ ಆಹ್ವಾನಿಸಿದ. ''ಅಯ್ಯೋ! ಯಾಕಯ್ಯ ಹೇಳಿಕೇಳಿ ಈ ಮಳೆಗಾಲದಲ್ಲಿ? ಯಾರು ಬರ್ತಾರೆ'' ಅಂದೆ. ''ಸುಮ್ನಿರು, ಮಳೆ ಶಾಪ ಮಾತ್ರವಲ್ಲ, ವರವೂ ಆಗಬಹುದು. ಯಾಕಂದ್ರೆ ಹೊರಗಡೆ ಧೋ ಅಂತ ಮಳೆ ಸುರಿತಾಯಿದ್ರೆ ಸಭಾಂಗಣದಿಂದ ಯಾರೂ ಅಳ್ಳಾಡುವುದಿಲ್ಲ. ಇನ್ನು ಮಳೇಲಿ ಸಿಕ್ಕಿಹಾಕಿಕೊಂಡಿರೋರು ಕೂಡ ಒಳಗೆ ಬಂದಾರು. ನಾನೊಂದು ಉಪಾಯ ಮಾಡಿದೀನಿ. ಸರಿಸುಮಾರು ಅಂದಾಜು ನೋಡ್ಕೊಂಡು ಮಳೆ ಆರಂಭವಾಗುವ ಮುನ್ನವೇ ಗೋಷ್ಠಿ ಏರ್ಪಡಿಸ್ತೀನಿ. ಆಗ ಒಳಗೆ ಎಲ್ರೂ ಪ್ಯಾಕ್ ಆಗಿರ್ತಾರೆ. ಸಭಿಕರ ಕೊರತೆ ಇರೋದಿಲ್ಲ ಬಹುತೇಕ'' ಎಂದು ವಿವರಿಸಿದ ಭೂಪ!

ಸಭೆಗೆ ಸಭಿಕರೇ ಜೀವಾಳ. ಜನರೇ ಇಲ್ಲದ ಮೇಲೆ ಯಾರನ್ನು ಉದ್ದೇಶಿಸಿ ವೇದಿಕಾರೂಢರು ಭಾಷಣ ಬಿಗಿದಾರು, ಹಾಡು, ನಟನೆ, ಹಾಸ್ಯ, ಜಾದೂ ಒಪ್ಪಿಸಿಯಾರು ? ಬಗೆಬಗೆಯಾಗಿ ಮಂದಿಯನ್ನು ಸೆಳೆಯುವುದು ಅನೇಕ ಸಂದರ್ಭಗಳಲ್ಲಿ ಅಗತ್ಯವೂ, ಅನಿವಾರ್ಯವೂ ಆಗುತ್ತದೆ. ಉಚಿತ ಪ್ರವೇಶ, ಮೊದಲು ಬಂದವರಿಗೆ ಆದ್ಯತೆ ಇತ್ಯಾದಿ ಒಕ್ಕಣೆಗಳು ಪ್ರಭಾವ ಬೀರದಿರಬಹುದು. ಆಮಂತ್ರಣ ಪತ್ರಿಕೆಯಲ್ಲಿ ದಪ್ಪ ಅಕ್ಷರಗಳಲ್ಲಿ ಲಘು ಉಪಾಹಾರ, ಭೋಜನದ ಏರ್ಪಾಟಿದೆ ಎಂಬ ಷರಾವನ್ನು ಖಂಡಿತವಾಗಿಯೂ ಮಂದಿ ಬಯಸಿಯಾರಲ್ಲವೆ ? ಭಾಷಣ ಪಟುಗಳು ಜನ ತೃಪ್ತಿಕರವಾಗಿ ಜಮಾಯಿಸದಿದ್ದರೆ ಉತ್ಸಾಹ, ಲವಲವಿಕೆ ಕಳೆದುಕೊಳ್ಳುವುದು ಸಹಜವೆ. ''ನೋಡು, ಮೂರು ದಿನದಿಂದ ಭಾಷಣದ ತಯಾರಿ ನಡೆಸಿದ್ದೆ, ಕಂಡ ಕಂಡ ಲೈಬ್ರರಿಗೆ ಹೋಗಿದ್ದೆ. ಇಲ್ಲಿ ವೇದಿಕೆಯ ಮೇಲೆ ಹೆಚ್ಚು ಜನ ಇದ್ದಾರಲ್ಲ! ಹೇಗೆ ತಾನೆ ಮಾತಾಡಲಿ'' ಮುಂತಾಗಿ ಅವರು ತಮ್ಮ ಆಪ್ತರಲ್ಲಿ ಅಳಲು ತೋಡಿಕೊಳ್ಳುತ್ತಾರೆ. ಸಭಾಂಗಣದಲ್ಲಿ ಜನರು ಸಾಕಷ್ಟಿಲ್ಲದೆ ಭಣ ಭಣ ಅನ್ನಬಾರದೆಂಬ ಉದ್ದೇಶದಿಂದ ಕಾರ್ಯಕರ್ತರು ನಾನಾ ತಂತ್ರಗಳನ್ನು ಹೂಡುತ್ತಾರೆ. ಕುರ್ಚಿಗಳು ಅನಾಥವಾಗಬಾರದೆಂದು ಅವನ್ನೆಲ್ಲ ಒಂದು ಮೂಲೆಯಲ್ಲಿ ಒಪ್ಪೋರಣವಾಗಿಡುತ್ತಾರೆ. ಒಬ್ಬೊಬ್ಬರೇ ಸಭೆಗೆ ಆಗಮಿಸುವವರು ಕುರ್ಚಿಯನ್ನು ಹಾಕಿಕೊಂಡು ಕೂರುವಂತಹ ವ್ಯವಸ್ಥೆ! ಇದರಿಂದ ನೋಡುವವರಿಗೆ ಪರ್ವಾಗಿಲ್ಲ ಕುರ್ಚಿಗಳೆಲ್ಲ ಭರ್ತಿಯಾಗಿವೆ ಎಂಬ ಅಭಿಪ್ರಾಯ ಮೂಡುತ್ತದೆ. ಟಿ.ವಿ., ಪತ್ರಿಕೆಗಳಲ್ಲೂ ಆ ದೃಶ್ಯಗಳು ವಾಹ್! ಸಭೆಯೆಂದರೆ ಹೀಗೆ ತುಂಬಿರಬೇಕು ಅನ್ನಿಸುತ್ತದೆ.

ನನ್ನ ಕೋಬ್ರದರ್ ನಾಣಿ ತಾನಿರುವ ಬಡಾವಣೆಯಲ್ಲಿ ಕವಿಗೋಷ್ಠಿ ವ್ಯವಸ್ಥೆ ಮಾಡುತ್ತಿರುತ್ತಾನೆ. ತಿಂಗಳ ಮೊದಲ ಭಾನುವಾರ ಸಂಜೆ ಸರ್ಕಾರಿ ಮಾಧ್ಯಮಿಕ ಶಾಲೆಯ ಜಗಲಿ ಮೇಲೆ ರಸಿಕರು ಜಮಾಯಿಸುತ್ತಾರೆ. ಹೆಡ್‌ಮಾಸ್ಟರ್ ಅನಂತು ಅಪರೂಪಕ್ಕೆ ಶಾಲೆಯ ಬೀಗ ತೆಗೆದು, ''ಬನ್ನಿ ಒಳಗಡೆ. ಈ ಕೊಠಡಿಯಲ್ಲೇ ಎಲ್ರೂ ಕವನ ಓದ್ರಿ'' ಅಂತ ಆರು ತಿಂಗಳಿಗೊಮ್ಮೆಯಾದರೂ ಉದಾರತೆ ಮೆರೆಯುತ್ತಾರೆನ್ನಿ. ಕಳೆದ ಸಭೆಯಲ್ಲಿ ಎಂದೂ ಇಲ್ಲದಷ್ಟು ಜನ ಜಮಾಯಿಸಿದ್ದರು. ನಾಣಿ ಮೂಕವಿಸ್ಮಿತನಾಗಿ ನನ್ನ ಕಿವಿಯಲ್ಲಿ ''ಪಾಪ! ಇವೊತ್ತು ಇವರಿಗೆಲ್ಲ ಮನೇಲಿ ಅದೇನು ತರ್ಲೆ ತಾಪತ್ರಯಗಳೊ ಕಾಣೆ'' ಅಂದ! ''ಹೌದೌದು, ಹೇಗೂ ಸಂಬಳ, ಪಿಂಚಣಿ ಬಂದ ವಾರ. ಹಣದ ವಿಷಯಕ್ಕೆ ತಾನೆ ಹೆಚ್ಚಾಗಿ ಜಗಳ, ವಿವಾದ ಮನೇಲಿ ಆಗೋದು'' ಎಂದೆ. ಹೀಗೆ ಉದ್ಗರಿಸುವ ನಾಣಿಗೆ ವೇದಿಕೆಯಲ್ಲಿ ಹೊಸ ಹೊಸ, ಅರ್ಥಾತ್ ಉದಯೋನ್ಮುಖ ಕವಿ ಪುಂಗವರಿಗೇ ಹೆಚ್ಚು ಉತ್ತೇಜಿಸುವ ಜಾಯಮಾನವಿದೆ. ಅದಕ್ಕೆ ಕಾರಣವೂ ಇದೆ. ಹೊಸ ಕವಿಗಳೂ ಹೆಚ್ಚು ಮಿಂಚುವ ಸಲುವಾಗಿ ಮನೆಯವರನ್ನೆಲ್ಲ ಕರೆದುಕೊಂಡು ಬಂದು ಸಭಾಂಗಣ ತುಂಬಲು ವಿಶಿಷ್ಟವಾಗಿ ಕಾರಣೀಭೂತರಾಗುತ್ತಾರೆ, ಅದಕ್ಕೆ!

''ಅಯ್ಯೋ ಇದೇನಿದು ? ಹೋಗಿ ಹೋಗಿ ಸಿಟಿಯಿಂದ ಐದಾರು ಕಿಲೋಮೀಟರ್ ದೂರದಲ್ಲಿದೆಯಲ್ಲ ನಿಮ್ಮ ಕವಿಗೋಷ್ಠಿ ತಾಣ'' ಅಂತ ಪ್ರಶ್ನಿಸಿದೆ ಒಬ್ಬ ಕಾರ್ಯಕರ್ತನನ್ನು. ಅದಕ್ಕೆ ಆತ ''ಏನೂ ಚಿಂತೆ ಮಾಡ್ಬೇಡ್ರಿ ಸಾರ್. ಅಲ್ಲಿ ಬಂದು ತೂಕಡಿಸಿದ್ರೂ ಓ.ಕೆ. ಒಟ್ನಾಗೆ ನಮ್ಗೆ ನಿಮ್ಮಂಥ



ಬಿಂಡಿಗನವಿಲೆ ಭಗವಾನ್

ಮಂದಿ ಬೇಕ್ರಿ'' ಅನ್ನೋದೆ, ಸಭಿಕರನ್ನು ಬೇಟೆಯಾಡುವಂತೆ! ಸಂಬಂಧವಿರಲಿ ಇಲ್ಲದಿರಲಿ ಒಬ್ಬಬ್ಬರು ಸಿನಿಮಾ ನಟರು, ವಿವಾದಾಸ್ಪದ ರಾಜಕಾರಣಿಗಳು, ಅಧಿಕಾರಿಗಳೂ ವೇದಿಕೆಯಲ್ಲಿದ್ದರೆ ಜನರ ಜಮಾವಣೆ ಹಲವು ಮಡಿ ಹೆಚ್ಚುತ್ತದೆ ಎನ್ನುವುದು ಅತಿಶಯವೇನಲ್ಲ. ಯಾವುದೇ ಸಭೆ, ಮೇಳ ಇರಲಿ ಆಯಾ ಬಡಾವಣೆಯ ಸಮಾಜ ಘಾತುಕರೆಂಬ ಹಣೆಪಟ್ಟಿ ಹೊತ್ತವರಿಗೆ ವೇದಿಕೆಯಲ್ಲಿ ಕನಿಷ್ಠ ಮೂರು ಆಸನಗಳಾದರೂ ಮೀಸಲಿಡಿ. ಗಾಬರಿಯಾಗದಿರಿ ನನ್ನ ಸಲಹೆಗೆ. ಅದರಿಂದ ನಿಮ್ಮ ಸಭೆ ಸುಸೂತ್ರವಾಗಿ ಸಾಗೀತು. ಏಕೆಂದರೆ ಉಪದ್ರವಕಾರರಲ್ಲಿ ಇಬ್ಬರಾದರೂ ನಿಮ್ಮ ಕಣ್ಮುಂದೆ ಇದ್ದು ಅಷ್ಟರಮಟ್ಟಿಗೆ ಅಡ್ಡಿ ಆತಂಕಗಳ ಸಂಭಾವ್ಯತೆ ತಗ್ಗುತ್ತದೆ. ಏನಂತೀರಿ? ಈ ಉಪಾಯ ಹೇಗೆಂದರೆ ಒಬ್ಬಾತ ನಮ್ಮ ಮೇಲೆ ರೋಷಾವೇಶದಿಂದ ಕಲ್ಲು ಒಗೆಯಲು ಮುಂದಾಗುತ್ತಾನೆ. ಆತನನ್ನು ನೇರ ನಾವೇ ಹೋಗಿ ತಬ್ಬಿಕೊಳ್ಳುವುದು. ಇದರಿಂದ ಆತನಿಗೆ ತಕ್ಕಷ್ಟು ರಭಸ ಲಭ್ಯವಾಗದೆ ಕೈಗಳು ಬಿಗಿದು ತೆಪ್ಪಗಾದಾನು. ಮನಃಪರಿವರ್ತನೆಯೂ ಆಗಬಹುದೆನ್ನೋಣ.

ಇನ್ನು ನಗೆ ಹಬ್ಬಗಳು, ಹಾಸ್ಯ ಮೇಳಗಳು, ವಿನೋದೋತ್ಸವಗಳು, ಅಬ್ಬಬ್ಬ! ಅವು ಜೀರ್ಣಿಸಿಕೊಳ್ಳಲಾಗದಷ್ಟು ಕಂಡಕಂಡಲ್ಲಿ ನೆರವೇರುತ್ತವೆ. ಜನ ನಕ್ಕು ನಕ್ಕು ಸುಸ್ತಾಗ್ತಾರೆ. ಹೊಸ ಜೋಕುಗಳನ್ನು ಎಲ್ಲಿಂದ ಆಮದು ಮಾಡಿಕೊಳ್ಳುವುದು ಎನ್ನುವುದು




...ನಿಂ 'ಬೈಗುಳ'ಗಳದ್ದೇ ಒಂದು ಪುಸ್ತಕ ಬರೆಯಿರಿ ಸಾರ್... ನಿಂಗೆ ಡಾಕ್ಟರೇಟ್ ಗ್ಯಾರಂಟಿ...!!

ಬಹುಮಂದಿ ನಗೆ ಸಿದ್ಧರ ಪೇಚು. ನಗಲಿ, ನಗದಿರಲಿ ಗದ್ದಲ ಮಾಡದೆ ನಮ್ಮ ಸಭೆಗಳಲ್ಲಿ ಕೂತರಾಯಿತು. ಹೇಗೊ ಒಂದಷ್ಟು ಚಟಾಕಿಗಳನ್ನು ಸದ್ಯಕ್ಕೆ ಸಿಡಿಸೋಣ. ಹೊಸ ಜೋಕುಗಳನ್ನು ನಿಧಾನವಾಗಿ ತಡಕಾಡಿದರಾಯಿತು ಅನ್ನುತ್ತಾರೆ, ಸಹನೆಯನ್ನು ಹಾಸ್ಯದಷ್ಟೆ ಮೈಗೂಡಿಸಿಕೊಂಡಿರುವ ನನ್ನ ಹಿರಿಯ ಗೆಳೆಯ ಹಯವದನರಾವ್. ಜೋಕುಗಳನ್ನು ಮರೆತು ಬನ್ನಿ, ಹೊಸದಾಗಿ ನಗಿರಿ ಎಂಬ ಸೂಚನೆಯನ್ನು ಅಲ್ಲಲ್ಲ... ಯಾಚನೆಯನ್ನು ಆಮಂತ್ರಣ ಪತ್ರಿಕೆಯೊಂದರಲ್ಲಿ ಓದಿದೆ. ಅಂದ ಹಾಗೆ ನಗೆಪಟಾಕಿಯೊಂದನ್ನು ಸಿಡಿಸುವ ಮುನ್ನ ಅದರ ಸೃಷ್ಟಿಕರ್ತ (?) ಸಭೆಯಲ್ಲಿರದಿರುವುದನ್ನು ಖಾತರಿಯಾಗಿಸಿಕೊಳ್ಳುವುದು ಕ್ಷೇಮ. ಇಲ್ಲದಿದ್ದರೆ ವಾದ, ಪೇಟೆಂಟ್, ಜಿಜ್ಞಾಸೆ, ಜಟಾಪಟಿ ಸಂಭಾವ್ಯ... ಡಿ.ವಿ.ಜಿ.ಯವರ ನುಡಿ ನೆನಪಾಗುತ್ತದೆ:

ಸುರಪಸಭೆಯಲಿ ಗಾಧಿಸುತ ವಸಿಷ್ಠ ಸ್ಪರ್ಧೆ।
ಧರೆಯೊಳದರಿಂ ಹರಿಶ್ಚಂದ್ರಂಗೆ ತಪನೆ॥
ಬರುವುದಿಂತೆತ್ತಣಿನೊ ಬೇಡದ ಪ್ರಾರಬ್ಧ।
ಕರುಮಗತಿ ಕೃತ್ರಿಮವೊ - ಮಂಕುತಿಮ್ಮ॥

ಬಂಡಿಗನವಿಲೆ ಭಗವಾನ್
೩೬ ಬಿ, ೯ನೇ ಮುಖ್ಯರಸ್ತೆ
ಬನಶಂಕರಿ ೧ನೇ ಹಂತ, ೨ನೇ ಬ್ಲಾಕ್, ಬೆಂಗಳೂರು - ೫೬೦ ೦೫೦

# ಸಾದರ ಸ್ವೀಕಾರ

**ಸ್ವಪ್ನ ಸಾರಸ್ವತ** (ಕಾದಂಬರಿ) ಗೋಪಾಲಕೃಷ್ಣ ಪೈ
ಪುಟ: ೪೯೦ ಬೆಲೆ: ರೂ. ೨೭೫
**ಭಾಗ್ಯಲಕ್ಷ್ಮೀ ಪ್ರಕಾಶನ**, ೮೨, ೩ನೇ ಕ್ರಾಸ್, ೪ನೇ ಬ್ಲಾಕ್, ಬನಶಂಕರಿ ೩ನೇ ಸ್ಟೇಜ್, ೩ನೇ ಫೇಸ್
ಬೆಂಗಳೂರು - ೫೬೦ ೦೮೫

**ಗೊಂಬೆಯಾಟ** (ಕವನ ಸಂಕಲನ) ಶಂಕರಗೌಡ ಸಾತ್ಮಾರ
ಪುಟ: ೬೪ ಬೆಲೆ: ರೂ. ೩೫
**ಲಡಾಯಿ ಪ್ರಕಾಶನ**, ೨೧, ಪ್ರಸಾದ ಹಾಸ್ಟೆಲ್, ಗದಗ

**ಕಣ್ಣೊಳಗಿನ ಕನಸು** (ಕಥಾ ಸಂಕಲನ)
ಎ. ಎಸ್. ಗೀತಾ ಕುಬೇರಪ್ಪ
ಪುಟ: ೧೨೮ ಬೆಲೆ: ರೂ. ೮೦
**ನೇಕಾರ ಪ್ರಕಾಶನ**, ಗುರುಮಂದಿರ ರಸ್ತೆ
ಸೊರಬ - ೫೭೭ ೪೨೯

**ಸಾವೇ, ನೀ ಸಾಯುವಿ..!** ಉಷಾ ಶೇಟ್
ಅನು: ರಾಮಚಂದ್ರ ಎಸ್. ಕುಲಕರ್ಣಿ
ಪುಟ: ೧೯೪ ಬೆಲೆ: ರೂ. ೧೦೦

**'ಪುಟ'ಕ್ಕಿಷ್ಟು ಕತೆಗಳು** (ನೂರೊಂದು ಕಿರುಗತೆಗಳು)
ರಾಮಚಂದ್ರ ಎಸ್. ಕುಲಕರ್ಣಿ
ಪುಟ: ೧೩೮ ಬೆಲೆ: ರೂ. ೮೦

**ಹಾಯ್...! ಹಾಯ್ಕು...!!** (ಭಾಗ II)
ರಾಮಚಂದ್ರ ಎಸ್. ಕುಲಕರ್ಣಿ
ಪುಟ: ೬೮ ಬೆಲೆ: ರೂ. ೪೦

**ತುಂತುರು ಕತೆಗಳು** (ಹನಿಚಿಂತನೆ)
ರಾಮಚಂದ್ರ ಎಸ್. ಕುಲಕರ್ಣಿ
ಪುಟ: ೧೧೨ ಬೆಲೆ: ರೂ. ೭೦
ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು
**ಚೈತ್ರ-ಲಹರಿ ಪ್ರಕಾಶನ**, ಎಫ್-೩, ಲಕ್ಷ್ಮಿ ಅಪಾರ್ಟ್‌ಮೆಂಟ್ಸ್, ಸಾರಸ್ವತಪುರ, ಧಾರವಾಡ - ೨

**ಕಾಳವ್ವನ ಕೋಳಿ** (ಕಥಾ ಸಂಕಲನ) ತಂಬ್ರಹಳ್ಳಿ ಡಿ. ರಾಮನಮಲಿ
ಪುಟ: ೧೨೨ ಬೆಲೆ: ರೂ. ೬೫
**ಅನ್ನಪೂರ್ಣ ಪಬ್ಲಿಷಿಂಗ್ ಹೌಸ್**, ೧೭೬, ೧೨ನೇ ಕ್ರಾಸ್, ನೆಲಮಹಡಿ, ಮಾಗಡಿ ಮುಖ್ಯರಸ್ತೆ, ಅಗ್ರಹಾರ ದಾಸರಹಳ್ಳಿ, ಬೆಂಗಳೂರು

**ಹಿಂದುತ್ವ ಮತ್ತು ದಲಿತರು** ಸಂ: ಆನಂದ ತೇಲ್‌ತುಂಬ್ಡೆ
ಅನು. ಸಂಯೋಜನೆ: ಪ್ರೊ॥ ಬಿ. ಗಂಗಾಧರಮೂರ್ತಿ
ಪುಟ: ೨೧೬ ಬೆಲೆ: ರೂ. ೧೨೦

**ನೀವು ಬಿತ್ತಿದ್ದೀರಿ, ಅದಕ್ಕೆ ಅಳುತ್ತೀರಿ ಪಿ. ಸಾಯಿನಾಥ್ (ರೈತರ ಬವಣೆಗಳ ಬಗ್ಗೆ)** ಕನ್ನಡಕ್ಕೆ: ಟಿ. ಎಲ್. ಕೃಷ್ಣೇಗೌಡ
ಪುಟ: ೧೮೦ ಬೆಲೆ: ರೂ. ೧೦೦

**ಅಂಬೇಡ್ಕರೋತ್ತರ ದಲಿತ ಸಂಘರ್ಷ ದಾರಿ-ದಿಕ್ಕು**
ಆನಂದ್ ತೇಲ್‌ತುಂಬ್ಡೆ, ಅನು: ರಾಹು
ಪುಟ: ೧೭೬ ಬೆಲೆ: ರೂ. ೧೦೦
ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಚಿಂತನ ಪುಸ್ತಕ**, ನಂ. ೧೮೬೩, ೧೧ನೇ ಮುಖ್ಯರಸ್ತೆ, ೩೮ನೇ ಅಡ್ಡರಸ್ತೆ, ೪ನೇ 'ಟಿ' ಬ್ಲಾಕ್, ಜಯನಗರ, ಬೆಂಗಳೂರು - ೫೬೦ ೦೪೧

**ಸಂಪಾದಕೀಯ ಸಂಹಿತ** (ಸಂಪಾದಕೀಯ ಲೇಖನಗಳ ಸಂಗ್ರಹ)
ರತ್ನಾಕರ ಶೆಟ್ಟಿ
ಪುಟ: ೧೫೭ ಬೆಲೆ: ರೂ. ೧೫೦
**ಬಂಟ್ಸ್ ಸಂಘ**, ಬಂಟರ ಭವನ, ಬಂಟರಭವನ ಮಾರ್ಗ, ಕುರ್ಲಾ (ಪೂರ್ವ), ಮುಂಬಯಿ - ೪೦೦ ೦೭೦

**ದಕ್ಷಿಣ ಕನ್ನಡ ಜಿಲ್ಲೆಯ ಮಕ್ಕಳ ಸಾಹಿತ್ಯ**
ಸಂ. ಡಾ॥ ಸಬೀಹಾ ಭೂಮೀಗೌಡ
ಪುಟ: ೧೨೦ ಬೆಲೆ: ರೂ. ೫೦
**ಡಾ॥ ಕೆ. ಶಿವರಾಮ ಕಾರಂತ ಪೀಠ**, ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳಗಂಗೋತ್ರಿ

**ಗುಲಗುಂಜಿ** (ಜನಮುಖಿ ಕವಿತೆಗಳು)
ಅಲ್ಲಮಪ್ರಭು ಬೆಟ್ಟದೂರು
ಪುಟ: ೬೦ ಬೆಲೆ: ರೂ. ೩೦
**ಶ್ರೀ ಸಿದ್ಧಲಿಂಗೇಶ್ವರ ಬುಕ್ ಡಿಪೋ ಮತ್ತು ಪ್ರಕಾಶನ**, ಮುಖ್ಯಬೀದಿ, ಗುಲಬರ್ಗಾ - ೫೮೫ ೧೦೧

**ಹಾಲತೊರೆಗೆ** (ಲೇಖನಗಳು) ಮಹೇಶ ತಿಪ್ಪಶೆಟ್ಟಿ
ಪುಟ: ೧೧೮ ಬೆಲೆ: ರೂ. ೧೦೦
**ದಾಳಿಂಬೆ ಪ್ರಕಾಶನ**, ಹುನಗುಂದ - ೫೮೭ ೧೧೮, ಬಾಗಲಕೋಟೆ ಜಿಲ್ಲೆ

**ಗಿಲೋಟಿನ್** (ಪ್ರವಾಸ ಕಥನ) ಡಾ॥ ಶಿವಾನಂದ ಕುಬಸದ
ಪುಟ: ೧೩೨ ಬೆಲೆ: ರೂ. ೧೦೦
**ಸಂಗಮ ಪ್ರಕಾಶನ**, ಹುನಗುಂದ - ೫೮೭ ೧೧೮, ಬಾಗಲಕೋಟೆ ಜಿಲ್ಲೆ

**ಬದುಕು ಬದಲಿಸಿದ ಹಳೆ ಸ್ಕೂಟರ್** (ಕರಾವಳಿ ನುಡಿಚಿತ್ರಗಳು)
ಗಣೇಶ ಅಮೀನಗಡ
ಪುಟ: ೨೬೨ ಬೆಲೆ: ರೂ. ೧೨೦
**ಕಾಂತಾವರ ಕನ್ನಡ ಸಂಘ (ರಿ)**, ಕಾಂತಾವರ ಅಂಚೆ - ೫೭೪ ೧೨೯, ಕಾರ್ಕಳ, ಉಡುಪಿ

# ಗಾಂಧೀಜಿ ಮತ್ತು ಶ್ರಮಜೀವನ

ಬಿ. ಆರ್. ಶಶಿಧರ

ಕೆಲವು ವರ್ಷಗಳ ಹಿಂದೆ ಯಾವುದೋ ಒಂದು ಸಾಹಿತ್ಯ ಸಮ್ಮೇಳನದಲ್ಲಿ ಅಧ್ಯಕ್ಷತೆ ವಹಿಸಿ ಮಾತನಾಡುತ್ತಿದ್ದ ನಾಡಿನ ಖ್ಯಾತ ಚಿಂತಕ, ಸಾಹಿತಿ, ಬುದ್ಧಿಜೀವಿ ಡಾ|| ಹಾ. ಮಾ. ನಾಯಕ - 'ಓದುವ ಸುಖ'ದ ಬಗ್ಗೆ ಸುದೀರ್ಘ ಉಪನ್ಯಾಸ ನೀಡಿದ್ದರು. ಇದೇ ರೀತಿ ಮಹಾತ್ಮ ಗಾಂಧೀಜಿಯವರು ಸಹ ತಮ್ಮ ಹರಿಜನ, ಯಂಗ್ ಇಂಡಿಯಾ ಮುಂತಾದ ಪತ್ರಿಕೆಗಳಲ್ಲಿ 'ದುಡಿಮೆಯ ಸುಖ'ದ ಬಗ್ಗೆ ಸಾಕಷ್ಟು ಬರೆದಿದ್ದಾರೆ. ದೈಹಿಕ ಶ್ರಮದ ಮಹತ್ವವನ್ನು ಗಾಂಧೀಜಿಯವರು ಸ್ಪಷ್ಟವಾಗಿ, ಅರ್ಥಪೂರ್ಣವಾಗಿ ಪ್ರತಿಪಾದಿಸಿದ್ದಾರೆ. ವ್ಯಕ್ತಿಯ ವೈಯಕ್ತಿಕ ಏಳಿಗೆಗೆ ಹಾಗೂ ರಾಷ್ಟ್ರದ ಪ್ರಗತಿಗೆ ಕೂಡ ದೈಹಿಕ ಶ್ರಮ ಅಗತ್ಯ. ಆದರೆ ಆಧುನಿಕ ಜಗತ್ತು ದೈಹಿಕ ಶ್ರಮಕ್ಕೆ ಕಡಿಮೆ ಆದ್ಯತೆ ನೀಡಿ ಮಾನಸಿಕ ಶ್ರಮಕ್ಕೆ ಹೆಚ್ಚಿನ ಮಹತ್ವ ನೀಡಿದೆ. ಆದರೆ ದೈಹಿಕ ಶ್ರಮದಿಂದ ಮಾನವನ ದೇಹಾರೋಗ್ಯ ಸುಧಾರಣೆಯಾಗುವುದಲ್ಲದೆ 'ದುಡಿಮೆಯ ಸುಖ'ವನ್ನು ಅನುಭವಿಸಿದವರು ಅದರಿಂದ ವಿಮುಖರಾಗುವುದು ಕಷ್ಟ ಹಾಗೂ ಅಪರೂಪ ಸಹ. ದೈಹಿಕ ದುಡಿಮೆಯನ್ನೇ ನಂಬಿ ಜೀವನ ಸಾಗಿಸುತ್ತಿರುವ ಜನ ಇತರ ವರ್ಗಗಳ ಜನರಂತೆ ಸದಾ ವಿಶ್ರಾಂತಿಗಾಗಿ ಹಾತೊರೆಯುವುದಿಲ್ಲ, ಅದೇ ಕೆಲಸವಿಲ್ಲದ ದಿನಗಳಲ್ಲಿ ಬೇಸರದಿಂದ ಚಡಪಡಿಸುತ್ತಿರುತ್ತಾರೆ.

೨೧ನೇ ಶತಮಾನದಲ್ಲಿ ಗಾಬರಿ ಹುಟ್ಟಿಸುವಷ್ಟರ ಮಟ್ಟಿಗೆ ಬೆಳೆಯುತ್ತಿರುವ ನಗರೀಕರಣ, ಹಳ್ಳಿಗಳಿಂದ ಪಟ್ಟಣಗಳತ್ತ ನಾನಾ ಕಾರಣಗಳಿಂದ ಯುವ ಜನರ ನಿರಂತರ ವಲಸೆ ಇತ್ಯಾದಿಗಳ ಪರಿಣಾಮವಾಗಿ ದೈಹಿಕ ಶ್ರಮವನ್ನು ಇಡೀ ಸಮಾಜ ಒಟ್ಟಾಗಿ ಕಡೆಗಣಿಸುತ್ತಿದೆಯೇನೋ ಎನಿಸುತ್ತದೆ. ಏಕೆಂದರೆ ನಗರ, ಪಟ್ಟಣಗಳೇ ಅಲ್ಲದೆ ಹಳ್ಳಿಗಳಲ್ಲೂ ಸಹ ಬೃಹತ್ ಯಂತ್ರಗಳು ಲಕ್ಷಾಂತರ ದುಡಿಯುವ ಕೈಗಳ ಅನಿವಾರ್ಯತೆಯನ್ನು ಅನಗತ್ಯಗೊಳಿಸುತ್ತಿವೆ. ದೈಹಿಕ ಶ್ರಮದಿಂದ ತಾತ್ಕಾಲಿಕವಾಗಿ ಬಳಲಿಕೆಯ ಅನುಭವ ಉಂಟಾದರೂ ಒಳ್ಳೆಯ ಹಸಿವು ಮತ್ತು ಸುಖನಿದ್ರೆಗಳ ಲಾಭಗಳ ಮುಂದೆ ಆ ಸುಸ್ತು, ಬಳಲಿಕೆಗಳು ನಗಣ್ಯವೆನಿಸುವುದು ಸತ್ಯ. ಸಾಕಷ್ಟು ಹಸಿವು, ನಿದ್ರೆಯ ಕೊರತೆಯಿಂದ ವಂಚಿತವಾಗಿರುವ ಒತ್ತಡದ ಆಧುನಿಕ ಬದುಕಿನ ಜನಾಂಗ ಶ್ರಮಜೀವನದ ಬದುಕಿನತ್ತ ಹೊರಳುವುದು ಸಮಂಜಸ ಅನಿಸುತ್ತದೆ.

ಇದೇನೇ ಇರಲಿ, ಆಧುನಿಕ ಮಾನವ ಶ್ರಮ ಪಡದೇ ಸಂಪತ್ತನ್ನು ಗಳಿಸಬೇಕು, ಇದು ನಾಗರಿಕತೆಯ ಕುರುಹು ಎಂದು ಭಾವಿಸಿ ಸಂಪತ್ತಿನ ಬೆನ್ನ ಹಿಂದೆ ಬಿದ್ದಿರುವುದು ನಿಜಕ್ಕೂ ಶೋಚನೀಯ ಅಂಶ. ಏಕೆಂದರೆ ಮಹಾತ್ಮ ಗಾಂಧೀಜಿಯವರ ಪ್ರಕಾರ ದೈಹಿಕ ಶ್ರಮವಿಲ್ಲದ ಸಂಪತ್ತಿನ ಗಳಿಕೆ ಮನುಷ್ಯನಿಗೆ ಪೂರ್ಣ ಸುಖವನ್ನು ನೀಡಲಾರದು. ಮಾನಸಿಕ ಶ್ರಮದಷ್ಟೇ ದೈಹಿಕ ಶ್ರಮವೂ ಮನುಷ್ಯನಿಗೆ ಅನಿವಾರ್ಯ. ಏಕೆಂದರೆ ಆತನ ದೇಹರಚನೆ ದೈಹಿಕಶ್ರಮಕ್ಕೆ ಅನುಗುಣವಾಗಿ ರೂಪುಗೊಂಡಿದೆ. ಪ್ರಾಚೀನ ಕಾಲದಲ್ಲಿ ಮನುಷ್ಯ ಇತರ ಪ್ರಾಣಿಗಳಂತೆ ತನ್ನ ಅನ್ನವನ್ನು ತಾನೇ ಗಳಿಸಿಕೊಳ್ಳಬೇಕಾದ ಅನಿವಾರ್ಯತೆ ಇದ್ದಿತು. ಆದರೆ ಕಾಲಾನಂತರ ಬೇರೊಬ್ಬರ ದೈಹಿಕ ಶ್ರಮದಿಂದ ಕುಳಿತು ತಿನ್ನುವ ವರ್ಗ ಸೃಷ್ಟಿಯಾಯಿತು. ಅಲ್ಲದೆ ಮಾನಸಿಕ ಶ್ರಮವನ್ನು ಶ್ರೇಷ್ಠವೆಂದೂ, ದೈಹಿಕ ಶ್ರಮವನ್ನು ನಿಕೃಷ್ಟವೆಂದೂ ಪರಿಗಣಿಸುವ ಪರಿಪಾಠ ಆರಂಭವಾಯಿತು. ಇಂತಹ ಅರ್ಥಹೀನವೂ, ಅಪಾಯಕಾರಿಯೂ ಆದ ವಿಚಾರ ಜಗತ್ತಿನ ಹೆಚ್ಚಿನ ದೇಶಗಳಲ್ಲೆಲ್ಲಾ ವ್ಯಾಪಕವಾಗಿ ಹರಡಿದೆಯಲ್ಲದೆ ೨೧ನೇ ಶತಮಾನದಲ್ಲಂತೂ ಯಂತ್ರ ನಾಗರಿಕತೆ ಮಾನವನ ಶ್ರಮಜೀವನವನ್ನು ಸಂಪೂರ್ಣವಾಗಿ ತೊಡೆದುಹಾಕುವ ಗುರಿಯನ್ನಿಟ್ಟುಕೊಂಡು ಭರದಿಂದ ಮುನ್ನುಗ್ಗುತ್ತಿದೆ.



ವಿಜ್ಞಾನ ತಂತ್ರಜ್ಞಾನಗಳ ನಿರಂತರ ಬೆಳವಣಿಗೆಯನ್ನು ಯಾರಿಂದಲೂ ತಡೆಯಲು ಸಾಧ್ಯವಿಲ್ಲ. ಮನುಷ್ಯನ ಅವಶ್ಯಕತೆಗಳೇ ಸಂಶೋಧನೆಗಳ ಮೂಲ. ಹೀಗಾಗಿ ಮನುಷ್ಯ ದುರಾಸೆಗೆ ಒಳಗಾಗಿ ತನ್ನ ಅವಶ್ಯಕತೆಗಳನ್ನು ಹೆಚ್ಚಿಸಿಕೊಳ್ಳುತ್ತಾ ಹೋದಂತೆ ಹೊಸ ಹೊಸ ಭೌತಿಕ ಸಂಪತ್ತುಗಳನ್ನು ಸೃಷ್ಟಿಸುವ ಕಾಯಕದಲ್ಲಿ ವಿಜ್ಞಾನ ತಂತ್ರಜ್ಞಾನಗಳು ನಿರತವಾಗಿವೆ. ಆದ್ದರಿಂದ ಗಾಂಧೀಜಿಯವರು ಈ ಬಗ್ಗೆ ಗಂಭೀರ ಎಚ್ಚರಿಕೆಯನ್ನು ನೀಡಿ ಮನುಷ್ಯ ಅತಿ ಆಸೆಯ ಬೆನ್ನು ಹತ್ತಿ ಯಂತ್ರಗಳ ಗುಲಾಮನಾಗುತ್ತಿದ್ದಾನೆ; ಇದರಿಂದ ವೈಯಕ್ತಿಕವಾಗಿ ಅವನಿಗೆ ಅಪಾರ ಹಾನಿಯಾಗುವುದೇ ಅಲ್ಲದೆ ಒಂದು ಸಮಾಜದ ಆರೋಗ್ಯಕರ ಪರಿಸರವೂ ಹದಗೆಡುತ್ತದೆ, ಏಕೆಂದರೆ ಯಂತ್ರ ನಾಗರಿಕತೆ ಎಂದರೆ ಬೃಹತ್ ಕೈಗಾರಿಕೆಗಳು ಅಸ್ತಿತ್ವಕ್ಕೆ ಬರುವುದು ಅನಿವಾರ್ಯ; ಕೈಗಾರಿಕೆಗಳನ್ನು ಅನುಸರಿಸಿ ದೊಡ್ಡ ನಗರಗಳು ಹುಟ್ಟಿಕೊಳ್ಳುತ್ತವೆ; ಆ ಮೂಲಕ ಅನೇಕ ಸಾಮಾಜಿಕ, ಆರ್ಥಿಕ, ರಾಜಕೀಯ ಸಮಸ್ಯೆಗಳೂ ತಲೆದೋರುತ್ತವೆ; ಆದ್ದರಿಂದ ಇದನ್ನೆಲ್ಲಾ ತಡೆಯುವ ಏಕೈಕ ಮಾರ್ಗ ಎಂದರೆ ಮನುಷ್ಯ ಉದ್ದೇಶಪೂರ್ವಕವಾಗಿ ತನ್ನ ಆವಶ್ಯಕತೆಗಳಿಗೆ ಕಡಿವಾಣ ಹಾಕುತ್ತಾ ಸಾಗಬೇಕು, ಎಂಬುದಾಗಿ ಹೇಳಿದ್ದರು.

ಮನುಷ್ಯ ದೈಹಿಕ ದುಡಿಮೆಯನ್ನು ಸಂಪೂರ್ಣವಾಗಿ ತ್ಯಜಿಸುವುದರಿಂದ ಆಗುವ ಹಾನಿಯೇನು ಎಂಬ ಪ್ರಶ್ನೆ ಸಹಜ. ಈ ಬಗ್ಗೆ ವಿಶ್ವವ್ಯಾಪಿಯಾದ ಯಾವುದೇ ಅಧ್ಯಯನ ನಡೆದಹಾಗಿಲ್ಲ. ಏಕೆಂದರೆ ಶ್ರಮಜೀವನವನ್ನೇ ಕೀಳಾಗಿ ಕಾಣುವ ಆಧುನಿಕ ಜಗತ್ತು 'ದುಡಿಮೆಯ ಮಹತ್ವ'ದ ಬಗ್ಗೆ ಸಂಶೋಧನೆ ಯಾಕಾದರೂ ನಡೆಸುತ್ತದೆ? ಪಾಶ್ಚಾತ್ಯ ಹಾಗೂ ಇನ್ನಿತರ ಕೆಲವು ಮುಂದುವರಿದ ರಾಷ್ಟ್ರಗಳು ಕೃಷಿಯನ್ನು ಒಂದು ಉದ್ಯಮವಾಗಿ ಪರಿಗಣಿಸಿ ಅದನ್ನೊಂದು ಕೈಗಾರಿಕೆಯನ್ನಾಗಿಸುವ ಯತ್ನದಲ್ಲಿವೆ. ಜಪಾನ್ ಈ ಹಾದಿಯಲ್ಲಿ ಮುಂಚೂಣಿಯಲ್ಲಿದೆ. ಅಂದರೆ ಫ್ಯಾಕ್ಟರಿಗಳಲ್ಲಿ ಕೃಷಿ ಉತ್ಪನ್ನಗಳನ್ನು ಸೃಷ್ಟಿಸುವ ಕಾರ್ಯ ದೊಡ್ಡ ಮಟ್ಟದಲ್ಲಿ ಪ್ರಾರಂಭವಾಗಿದೆ. ಆಹಾರವು ಮಾನವನ ಮೂಲಭೂತ ಆವಶ್ಯಕತೆಯಾದ್ದರಿಂದ ಶ್ರೀಮಂತ ರಾಷ್ಟ್ರಗಳು ಕೃಷಿಯನ್ನು ಒಂದು ಲಾಭದಾಯಕ ಉದ್ಯಮವನ್ನಾಗಿಸಿ ಬೃಹತ್ ಪ್ರಮಾಣದ ಬಂಡವಾಳ ಹೂಡಿರುವುದು ಸಹಜ. ಆದರೆ ಇದರಿಂದ ನೈಸರ್ಗಿಕ ಪರಿಸರದ ಮೇಲೆ ಈಗಾಗಲೇ ಆಗಿರುವ, ಭವಿಷ್ಯದಲ್ಲಿ ಆಗಬಹುದಾದ ಹಾನಿ ಕಲ್ಪನಾತೀತವೇ ಸರಿ. ತಕ್ಷಣದ ಹಾನಿಗಳು ಗಮನಕ್ಕೆ ಬರದಿದ್ದರೂ, ದೂರಗಾಮಿ ಪರಿಣಾಮಗಳು ಈ ಜಗತ್ತನ್ನು ಸರ್ವನಾಶ ಮಾಡಬಲ್ಲವು ಎಂದು ಈಗಾಗಲೆ ಬೆರಳೆಣಿಕೆಯ ಬುದ್ಧಿಜೀವಿಗಳು, ಪರಿಸರ ತಜ್ಞರು ಜಗತ್ತನ್ನು ಎಚ್ಚರಿಸಿದ್ದಾರೆ. ಆದರೆ ಇವರ ಈ ಎಚ್ಚರಿಕೆಗಳು ಬಂಡವಾಳಶಾಹಿ ರಾಷ್ಟ್ರಗಳ ಧನಬಲದ ಪ್ರಭಾವದಲ್ಲಿ ಕೊಚ್ಚಿಹೋಗುತ್ತಿವೆ. ಇಡೀ ಜಗತ್ತು ಬಂಡವಾಳಶಾಹಿ ಶಕ್ತಿಯ ಅಡಿಯಲ್ಲಿ ಸಿಲುಕಿ ವ್ಯಾಪಾರೀಕರಣಗೊಳ್ಳುತ್ತಿರುವುದರಿಂದ ಜಗತ್ತನ್ನು ಈ ಎಲ್ಲಾ ವಿಪತ್ತುಗಳಿಂದ ಕಾಪಾಡುವ ಶಕ್ತಿ ಯಾವುದು, ಎಂಬ ಪ್ರಶ್ನೆಗೆ ಗಾಂಧೀಜಿ ಸ್ವಲ್ಪಮಟ್ಟಿಗೆ ಉತ್ತರವಾಗಬಲ್ಲರು ಎನಿಸುತ್ತದೆ. ಏಕೆಂದರೆ ಗಾಂಧೀಜಿಯವರ ಗ್ರಾಮ ಸ್ವರಾಜ್ಯ, ಸರ್ವೋದಯಗಳಂತಹ ತತ್ವಗಳ

# ನೋಮ್ ಚೋಮ್‌ಸ್ಕಿ ವಿಚಾರಗಳು



**ಪ್ರಶ್ನೆ**: ಪ್ರಭುತ್ವವನ್ನು, ಬಂಡವಾಳ ವ್ಯವಸ್ಥೆಯನ್ನು ಕಟುವಾಗಿ ಟೀಕಿಸುತ್ತೀರಿ. ಆದರೆ ಪರ್ಯಾಯ ಏನು ಎಂದು ಸೂಚಿಸುವ ಜವಾಬ್ದಾರಿ ನಿಮ್ಮದಲ್ಲವೋ ?

**ಉತ್ತರ** : ಈ ಕುರಿತು ಸಲಹೆ ನೀಡಲು ನನಗೆ ಒಲವಿಲ್ಲ; ಏಕೆಂದರೆ ಪ್ರತಿಯೊಬ್ಬರೂ ಈ ಕುರಿತು ತಮ್ಮ ಕ್ರಿಯಾ ಯೋಜನೆಯನ್ನು ತಾವೇ ಯೋಚಿಸಿಕೊಂಡು ನಿರ್ಧರಿಸಿಕೊಳ್ಳಬೇಕು, ಕ್ರಿಯಾಶೀಲರಾಗಬೇಕು. ಅದನ್ನು ಸಾಧಿಸಲು ಬೇರಾರೋ ಅವನ್ನು ನಮಗಾಗಿ ನಿರ್ಧರಿಸುತ್ತಾರೆ, ನಾನು ಅದಕ್ಕಾಗಿ ಕಾಯುತ್ತಾ, ಪರಿಸ್ಥಿತಿಯ ಕೇವಲ ಅವಲೋಕನದಲ್ಲಿ ನಿರತನಾಗಿರುತ್ತೇನೆ ಎನ್ನುವುದು ಗುಲಾಮತನದ ಲಕ್ಷಣ.

ನಮ್ಮ ವ್ಯಕ್ತಿ ಸ್ವಾತಂತ್ರ್ಯಕ್ಕೆ ಇರುವ ತೀರ ಅಪಾಯಕಾರಿ ಆಪತ್ತೆಂದರೆ ಆರ್ಥಿಕವಾಗಿ ಶೋಷಣೆಗೆ ಒಳಗಾಗಿಸಿ, ರಾಜಕೀಯವಾಗಿ ಮತ್ತು ಸಾಮಾಜಿಕವಾಗಿ ಬಂಧನಕ್ಕೊಳಗಾಗಿಸುತ್ತದೆ. ಪ್ರಭುತ್ವಕ್ಕೆ ಕೊನೆಯ ಪಕ್ಷ ಮತದಾರರ ಎಗ್ಗಾದರೂ ಇದೆ. ಪ್ರಮುಖ ಬಹುರಾಷ್ಟ್ರೀಯ ಕಂಪನಿಗಳ ಸಂಪನ್ಮೂಲ ಪ್ರಭುತ್ವದ ಸಂಪನ್ಮೂಲಗಳಿಗಿಂತ ಬಹುಪಾಲು ಹೆಚ್ಚಿನದು... ಅವು ತಮ್ಮ ಲಾಭವನ್ನು ಹೆಚ್ಚಿಸಿಕೊಳ್ಳಲು ಏನು ಬೇಕಾದರೂ ಮಾಡುತ್ತವೆ. ಪ್ರಭುತ್ವದ ಅಧಿಕಾರವನ್ನು ಬುಡಮೇಲು ಮಾಡುತ್ತವೆ. ಅಮೆರಿಕಾದ ಕೃಷಿ ಇಲಾಖೆ ಮಿಸಿಸಿಪ್ಪಿಯ ಕಂಪನಿಯೊಂದಕ್ಕೆ ಬೀಜವನ್ನು ಬಂಜೆಯಾಗಿಸುವ ಕ್ರಮಕ್ಕೆ ಪೇಟೆಂಟ್ ನೀಡಿತು. ಅಂಥ ಬೀಜದಿಂದ ಒಂದು ಫಸಲು ಬೆಳೆದರೂ, ಮರುಫಸಲಿಗೆ ಬೀಜ ದೊರೆಯುವುದಿಲ್ಲ. ಆಗ ರೈತ ಪ್ರತಿ ವರುಷವೂ ಈ ಕಂಪನಿಯಿಂದ ಬೀಜ ಕೊಳ್ಳುವಂತಾಯ್ತು. ಜನತೆಗೆ ಬಡತನ ನೀಡುತ್ತಾ, ಅದೇ ಸಮಯದಲ್ಲಿ ಕಂಪನಿಗೆ ಲಾಭ ನೀಡುವ ಖಾಸಗಿ ಉದ್ಯಮಗಳ ಹುನ್ನಾರಕ್ಕೆ ಇದೊಂದು ಉದಾಹರಣೆ.

ಸಂದರ್ಶಿಸಿದವರು : ಕೆ. ಎಸ್. ಪಾರ್ಥಸಾರಥಿ

ಹಿನ್ನೆಲೆಯಲ್ಲಿ ಶ್ರಮ ದುಡಿಮೆಯ ಮಹತ್ವವನ್ನು ಕಾಣಬಹುದಾಗಿದೆ.

೧೮ನೇ ಶತಮಾನದ ಕೈಗಾರಿಕಾ ಕ್ರಾಂತಿ ಹಾಗೂ ಅದರ ಪರಿಣಾಮವಾಗಿ ಇಂಗ್ಲೆಂಡನ್ನು ಮಾದರಿಯಾಗಿಟ್ಟುಕೊಂಡು ಜಗತ್ತಿನ ಅನೇಕ ದೇಶಗಳು ಬೃಹತ್ ಕೈಗಾರಿಕೆಗಳನ್ನು ಸ್ಥಾಪಿಸತೊಡಗಿ ದಿಢೀರನೆ ಶ್ರೀಮಂತವಾಗಿದ್ದು, ಅಪಾರ ಮೊತ್ತದ ಸಂಪನ್ಮೂಲ ಹಾಗೂ ಬಂಡವಾಳ ಸಂಗ್ರಹಣೆಗೆ ತೊಡಗಿದ್ದು, ಇವುಗಳ ದೆಸೆಯಿಂದಲೇ ಜಗತ್ತು ಎರಡು ವಿನಾಶಕಾರಿ ಮಹಾಯುದ್ಧಗಳನ್ನು ಎದುರಿಸಬೇಕಾಗಿ ಬಂದದ್ದು ಹಾಗೂ ಕೈಗಾರಿಕಾಭಿವೃದ್ಧಿಯ ನೆಪದಲ್ಲಿ ಸಾಮ್ರಾಜ್ಯಶಾಹಿ, ವಸಾಹತುಶಾಹಿ ನೀತಿಗಳ ವಿಸ್ತರಣೆಯ ಪ್ರಕ್ರಿಯೆ ಈಗಲೂ ಮುಂದುವರಿಯುತ್ತಿರುವುದು ಅತ್ಯಂತ ವಿಷಾದನೀಯ ಅಂಶವೇ ಸರಿ. ಅದರಿಂದಾದ ಪರಿಸರ ನಾಶ, ಸಾಂಸ್ಕೃತಿಕ ಪರಂಪರೆಗಳ ನಾಶ ಹಾಗೂ ಪ್ರಭುತ್ವ ಪ್ರೇರಿತ ಮಾನವ ಹಕ್ಕುಗಳ ಉಲ್ಲಂಘನೆ ಮತ್ತು ಸ್ವಾತಂತ್ರ್ಯಹರಣಗಳು ಇತಿಹಾಸದ ದೊಡ್ಡ ಕಪ್ಪು ಚುಕ್ಕಿಗಳಾಗಿ ದಾಖಲಾಗಿವೆ. ಒಟ್ಟಿನಲ್ಲಿ ಅಭಿವೃದ್ಧಿಯ ಹೆಸರಿನಲ್ಲಿ ನಿರಂತರವಾಗಿ ಕೃಷಿಭೂಮಿಯ ನಾಶ, ಪರಿಸರದ ಮೇಲೆ ವಿವೇಚನಾರಹಿತ ದಾಳಿ, ಅತಿಯಾಸೆಯ ಬೆನ್ನು ಹತ್ತಿ ಮಾನವೀಯ ಮೌಲ್ಯಗಳನ್ನು ಕಡೆಗಣಿಸಿ ಇಡೀ ಮಾನವನ ಬದುಕನ್ನೇ ಎಲ್ಲಾ ರಂಗಗಳಲ್ಲೂ ಆವರಿಸುತ್ತಿರುವ ವ್ಯಾಪಾರೀ ಬುದ್ಧಿಯ ಚಟುವಟಿಕೆಗಳು ಜಗತ್ತನ್ನು ತಲ್ಲಣಗೊಳಿಸುತ್ತಿವೆ. ಪ್ರತಿಭಟನೆಯ ಶಕ್ತಿಯನ್ನೇ ಉಡುಗಿಸುವ ಅಥವಾ ನಿರರ್ಥಕಗೊಳಿಸುವ ಚಮತ್ಕಾರಿಕ ವಂಚನೆಯ ಅಸ್ತ್ರಗಳು ಬಂಡವಾಳಶಾಹಿ ಶಕ್ತಿಗಳ ಕೈಯಲ್ಲಿರುವುದು ೨೦ನೇ ಶತಮಾನದ ಮಾನವನ ಬದುಕಿನ ದುರಂತಗಳಲ್ಲಿ ಒಂದು ಎನ್ನುವುದರಲ್ಲಿ ಸಂಶಯವಿಲ್ಲ. ವಿವೇಚನಾರಹಿತ ಅಭಿವೃದ್ಧಿಯ ಹಾದಿಯಲ್ಲಿ ಪ್ರತಿಭಟಿಸುವವರನ್ನು ಪ್ರಗತಿ ವಿರೋಧಿಗಳೆಂಬ ಹಣೆಪಟ್ಟಿ ಹಚ್ಚಿ ಹೀಗಳೆದು ನಿರ್ದಯವಾಗಿ ಹತ್ತಿಕ್ಕುವುದು ಸುಲಭ ಸಾಧ್ಯವಾಗಿದೆ. ಇದರಿಂದ ಇಡೀ ಜಗತ್ತು ಇಂದು ದಿಕ್ಕೆಟ್ಟು ಕುಳಿತಿದೆ. ಭೌತಿಕ ಸಂಪತ್ತನ್ನು ಬೆನ್ನತ್ತಿ ಸಹಜ ಜೀವನವನ್ನು ಕಡೆಗಣಿಸಿ ಸಾಗುವ ಆಧುನಿಕ ಬದುಕನ್ನು ಅಪ್ಪಿಕೊಳ್ಳಬೇಕೋ ಅಥವಾ ಕಳೆದುಹೋದ ಗತ ವೈಭವವನ್ನು ಮೆಲುಕು ಹಾಕುತ್ತಾ ಆ ದಿಸೆಯಲ್ಲಿ ಸಾಗಲಾರದೆ ನಿಂತಲ್ಲೇ ನಿಲ್ಲಬೇಕೋ ಎಂಬ ಗೊಂದಲ ಸಾಕಷ್ಟು ಜನರನ್ನು ಕಾಡುತ್ತಿದೆ. ಗರಬಡಿದ ಸ್ಥಿತಿಯಲ್ಲಿರುವ ಇಂತಹ ಸ್ಥಿತಿಯಲ್ಲಿ ಆಧುನಿಕ ಮಾನವ ಯಾವುದೇ ಹೊಸ ಸಾಹಿತ್ಯವನ್ನಾಗಲಿ, ಕಲಾ ಪ್ರಕಾರಗಳನ್ನಾಗಲಿ ಸೃಷ್ಟಿಸಲಾರದ ಸ್ಥಿತಿಗೆ ತಲುಪಿದ್ದಾನೆಯೇ ಎಂಬ ಪ್ರಶ್ನೆಗಳು ಕೂಡ ಮೂಡತೊಡಗಿವೆ.

ದೈಹಿಕ ಶ್ರಮವನ್ನು ತ್ಯಜಿಸಿ 'ಸುಖ ಜೀವನ' ಸಾಗಿಸಲು ಹಾತೊರೆಯುತ್ತಿರುವ ಆಧುನಿಕ ಮಾನವ ಅನೇಕ ಸ್ವಯಾರ್ಜಿತ ಸಮಸ್ಯೆಗಳ ಸುಳಿಗೆ ಸಿಲುಕಿ ನರಳತೊಡಗಿದ್ದಾನೆ. ದೈಹಿಕ ಶ್ರಮದಿಂದ ದೂರ ಉಳಿದಿದ್ದರಿಂದ ಅನೇಕ ಹೊಸ ಮನೋದೈಹಿಕ ಕಾಯಿಲೆಗಳಿಗೆ ತುತ್ತಾಗುತ್ತಿದ್ದಾನೆ. ವೃದ್ಧಾಪ್ಯದ ಹಾಗೂ ಶ್ರೀಮಂತರ ಕಾಯಿಲೆಗಳೆನಿಸಿದ್ದ ಬೊಜ್ಜು, ಹೃದಯರೋಗ, ಅಧಿಕ ರಕ್ತದ ಒತ್ತಡ, ಸಕ್ಕರೆ ಕಾಯಿಲೆಗಳು ಬಡವ ಶ್ರೀಮಂತರೆನ್ನದೆ ಜಗತ್ತಿನಾದ್ಯಂತ ವ್ಯಾಪಕವಾಗಿ ಹೆಚ್ಚುತ್ತಿರುವುದು ಈ ಐಶಾರಾಮದ ಬದುಕಿನ ಕೊಡುಗೆಗಳು ಎಂಬುದಾಗಿ ಈಗಾಗಲೇ ವೈದ್ಯ ಸಮುದಾಯ ಘಂಟಾಘೋಷವಾಗಿ ಸಾರಿದೆ. ಬದುಕಿನ ಶೈಲಿಯನ್ನು ಬದಲಾಯಿಸಿಕೊಳ್ಳದ ಹೊರತು ಇವುಗಳಿಂದ ಮುಕ್ತಿ ಪಡೆಯುವುದು ಕಷ್ಟ. ಭವಿಷ್ಯದಲ್ಲಿ ಮತ್ತಷ್ಟು ಯಂತ್ರಗಳು ನಮ್ಮ ಬದುಕಿನಲ್ಲಿ ಪ್ರವೇಶಿಸಿದಾಗ ದೈಹಿಕ ದುಡಿಮೆ ಕಡಿಮೆಯಾಗುತ್ತಾ ಸಾಗುವುದರಿಂದ ಮನುಷ್ಯನ ಆರೋಗ್ಯದ ಸ್ಥಿತಿ ಏರುಪೇರಾಗುವುದರಲ್ಲಿ ಸಂಶಯವಿಲ್ಲ. ಮನುಷ್ಯನ ಬದುಕಿನಲ್ಲಿ ಆರೋಗ್ಯವೇ ಮಹಾಭಾಗ್ಯ. ಆರೋಗ್ಯವಿಲ್ಲದಿದ್ದರೆ ಎಷ್ಟೇ ಸಂಪತ್ತಿದ್ದರೂ ಅವುಗಳನ್ನು ಅನುಭವಿಸಲಾರದೆ ಅವೆಲ್ಲಾ ವ್ಯರ್ಥವಾಗುತ್ತವೆ. ಈ ಬಗ್ಗೆ ಕೂಡ ಮಹಾತ್ಮ ಗಾಂಧೀಜಿಯವರು ತಮ್ಮ ಅನೇಕ ಲೇಖನಗಳಲ್ಲಿ ಮಾನಸಿಕ ಶ್ರಮದ ದುಡಿಮೆಯಲ್ಲಿ ನಿರತರಾದವರೂ ಸಹ ದೇಶದ ಹಿತದೃಷ್ಟಿಯಿಂದ ಮಾತ್ರವಲ್ಲ ವೈಯಕ್ತಿಕ ಲಾಭದ ದೃಷ್ಟಿಯಿಂದಲೂ ದೈಹಿಕ ದುಡಿಮೆಯನ್ನು ಕಡ್ಡಾಯವಾಗಿ ಅಳವಡಿಸಿ ಕೊಳ್ಳಬೇಕೆಂದು ಹೇಳಿದ್ದರು. ಗಾಂಧೀಜಿ ಕೇವಲ ಉಪದೇಶಕರು ಮಾತ್ರವಾಗಿರಲಿಲ್ಲ. ತಮ್ಮ ಬದುಕಿನಲ್ಲಿ ಸ್ವತಃ ಈ ಎಲ್ಲಾ ತತ್ವಗಳನ್ನೂ ಅಳವಡಿಸಿಕೊಂಡಿದ್ದರು. ದಿನಕ್ಕೆ ಕನಿಷ್ಠ ೧೦ ಕಿ.ಮೀ. ನಡಿಗೆ, ತಮ್ಮ ವೈಯಕ್ತಿಕ ಕೆಲಸಗಳನ್ನು ತಾವೇ ಯಾವುದೇ ಸಂಕೋಚವಿಲ್ಲದೆ ಮಾಡಿಕೊಳ್ಳುವುದು, ಸ್ವಾಭಿಮಾನಿ ಬದುಕಿಗಾಗಿ ಸಾಂಕೇತಿಕವಾಗಿ ನೂಲುವುದು ಹೀಗೆ ಅನೇಕ ದೈಹಿಕ ದುಡಿಮೆಗಳಲ್ಲಿ ತೊಡಗಿದ್ದರು. ಗಾಂಧಿ ತತ್ವಗಳ ಪಾಲನೆ ಆಧುನಿಕ ನಾಗರಿಕ ಬದುಕಿನ ಸ್ವಯಂಕೃತ ಕಾಯಿಲೆಗಳಿಗೆ ಮದ್ದಾಗಬಲ್ಲದು.

**ಬಿ. ಆರ್. ಶಶಿಧರ**
ಇತಿಹಾಸ ಉಪನ್ಯಾಸಕ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಪಿರಿಯಾಪಟ್ಟಣ, ಮೈಸೂರು ಜಿಲ್ಲೆ



# ಗದ್ದುಗೆಯ ಗಮ್ಮತ್ತು

ಕನ್ನಡ ನಾಡಿನಲ್ಲಿ, ಮುತ್ತಿನಂಥಾ ಕನ್ನಡ ಅಕ್ಷರಗಳನ್ನು ಮುದ್ರಿಸಿಕೊಂಡು, ಕನ್ನಡ ಓದುವ ಜನರ ಮನೆ ಬಾಗಿಲುಗಳನ್ನು ಹುಡುಕೀ ಹುಡುಕೀ ಅಲೆದಾಡುತ್ತಿರುವ ದಿನ ಪತ್ರಿಕೆಗಳು, ವಾರಪತ್ರಿಕೆಗಳು, ದ್ವಿವಾರ ಪತ್ರಿಕೆಗಳು, ಮಾಸ ಪತ್ರಿಕೆಗಳು, ದ್ವಿಮಾಸ-ತ್ರೈಮಾಸ ಪತ್ರಿಕೆಗಳು, ವಾರ್ಷಿಕ ವಿಶೇಷಗಳಲ್ಲಿ ಎಲ್ಲೋ ಒಂದೆರಡು ಕಡೆ, ನಾಲ್ಕೆಂಟು ಸಾಲುಗಳನ್ನು ಆಕ್ರಮಿಸಿಕೊಂಡು ಪತ್ರಿಕೆಯೊಡನೆ ನಾನೂ ಮನೆ ಮನೆ ಅಲೆದದ್ದರಿಂದ, ನಮ್ಮೂರಿನ ಬರಹಗಾರ್ತಿಯರ ಸಂಘದ ಅಧ್ಯಕ್ಷಳನ್ನಾಗಿ ನನ್ನನ್ನು ಉಬ್ಬಿಸಿ, ಚಪ್ಪಾಳೆಗಳ ಧ್ವನಿಯಿಂದ ಹಿಡಿದು ಕಟ್ಟಿಹಾಕಿದ್ದರು. ಚಪ್ಪಾಳೆ ಹೊಡೆಯುವ ಜೋಡಿ ಕೈಗಳ ಸಂಖ್ಯೆ ಕನಿಷ್ಠ ಎರಡಂಕಿಗಿಂತ ಬಹಳ ಹೆಚ್ಚೇನೂ ಇಲ್ಲದಿದ್ದರೂ, ನನ್ನ ಮನಸ್ಸು ಬಲೂನಿನಂತೆ ಉಬ್ಬಿ, ಕಣ್ಣುಗಳು ಮೇಲೆ ಸರಿಯುತ್ತ ಸರಿಯುತ್ತ ನೆತ್ತಿಗೇರಿಯೇ ಬಿಟ್ಟಿದ್ದವು. ನನ್ನ ಕೈ ಕುಲುಕುತ್ತ ಅಭಿನಂದನೆಗಳನ್ನು ತಿಳಿಸುತ್ತಿದ್ದ, ಇದೀಗ ನನ್ನದಾಗಿದ್ದ ಕುರ್ಚಿಯ ಸುಖವನ್ನು ಸುರಿದುಕೊಂಡು ಅದೇ ಕೆಳಗಿಳಿದಿದ್ದ, ಆ ಕ್ಷಣದಿಂದ 'ಮಾಜೀ' ವಿಶೇಷಣಕ್ಕೆ ಭಾಜನರಾಗಿದ್ದ ಗೌರಮ್ಮನವರ ಕಣ್ಣಿನಲ್ಲಿ ಒಸರುತ್ತಿದ್ದ ಬಿಡುಗಡೆಯ ಸಂತೋಷವನ್ನು ನನ್ನ ಊರ್ಧ್ವಚಾಲಿತ ನಯನಗಳು, ಅಧಿಕಾರ ಕಳೆದುಕೊಂಡ ದುಃಖವೆಂದು ಅರ್ಥೈಸಿದ್ದು ಆಗ ನೂರಕ್ಕೆ ನೂರರಷ್ಟು ಸರಿ ಎನಿಸಿತ್ತು. ಕುತ್ತಿಗೆಯ ಹಾರ, ತಲೆಯ ಕಿರೀಟ ಎರಡೂ (ಅವೆರಡೂ, ವಸ್ತುನಿಷ್ಠವಾಗಿ ಇರಲೇ ಇಲ್ಲ ಎನ್ನುವುದು ಗುಟ್ಟಿನ ವಿಷಯ) ದಿನದಿನಕ್ಕೆ ತೂಕ ಬೆಳೆಸಿಕೊಂಡು, ನಾನು ವಜನದಾರಳಾಗಿದ್ದೇನೆ ಎನ್ನುವ ಭ್ರಮೆ ಕೆಲದಿನ ನನ್ನನ್ನು ಆವರಿಸಿಕೊಂಡಿದ್ದರೂ, ನನ್ನದೇ ಮನೆಯ ಕನ್ನಡಿಯಲ್ಲೊಮ್ಮೆ ಜಗ್ಗಿದ ಕತ್ತು, ಜೋಲು ಬಿದ್ದ ಮುಖ ಕಂಡು, ಮೊದಲೇ ದಡಬಡಿಸುತ್ತಿದ್ದ ಎದೆ, ನಾಗಾಲೋಟದಲ್ಲಿ ಧಡಧಡಾಯಿಸ ತೊಡಗಿತ್ತು. (ದೇವರ ದಯದಿಂದ ಅದು ಇನ್ನೂ ಧಡಧಡಿಸುತ್ತಿದೆ !!)

ಹೊಸತರಲ್ಲಿ ಅದೇನು ಹುಮ್ಮಸ್ಸು! ಸಂಘದ ಭೂತದಲ್ಲಿ ಆಗದ್ದನ್ನು ಸಾಧಿಸಿ ತೋರಿಸುತ್ತೇನೆನ್ನುವ ಛಲ !! ಮನಸ್ಸು ಕೊಟ್ಟು ಮಾಡಿದರೆ ಇದೇನು ಮಹಾ ಎನ್ನುವ ತಾತ್ಸಾರ !!! ಸಂಘದ ಸಹೋದರಿಯರನ್ನೆಲ್ಲ ಒಟ್ಟುಗೂಡಿಸಿಕೊಂಡು, ಬೆನ್ನಹಿಂದಿಟ್ಟುಕೊಂಡು (ಯಾರಾದರೂ ಮುಂದಿಟ್ಟುಕೊಳ್ಳುತ್ತಾರೆಯೆ ?) ಕೆಲಸ ನಿರ್ವಹಿಸುವ ಭರವಸೆ !!!! ಎಂ.ಬಿ.ಎ. ಕಲಿತು, ಎಂ.ಎನ್.ಸಿ.ಗಳ ತಿರುಗು ಕುರ್ಚಿಯ ಮೇಲೆ ಕುಳಿತು, ಮಾನವನ ತಲೆಯನ್ನು ಅಳೆದು ಆಳುವ ಪ್ರಹಸನದಲ್ಲಿ ತೊಡಗಿಸಿಕೊಂಡು, ಜೇಬು ತುಂಬಿಸಿಕೊಳ್ಳುತ್ತಿರುವ ಯುವಜನಾಂಗದ ಯಶೋಗಾಥೆ ಕಿವಿಯ ಮೇಲೆ ಬಿದ್ದುಬಿದ್ದು ಹುಟ್ಟಿದ ಹುಮ್ಮಸ್ಸು !!!!!

ಅಂದು ಎದುರಿಗೆ ಕಂಡ ತಲೆಗಳಲ್ಲಿ, ನನ್ನ ತಲೆಗೆ ಹೊಂದುತ್ತವೆ (ಅಥವಾ ನನ್ನ ತಲೆ ಅವುಗಳಿಗೆ ಹೊಂದುತ್ತದೆ) ಎನಿಸಿದವುಗಳನ್ನು ಆರಿಸಿ (ನಿಜ ಹೇಳಬೇಕೆಂದರೆ, ಎದುರಿಗಿದ್ದ ತಲೆಗಳನ್ನೆಲ್ಲ ಆರಿಸಿ), ಕೈ ಹಿಡಿದು ಕಟ್ಟೆ ಹತ್ತಿಸಿಕೊಂಡು, ತಲೆಗೊಂದು ಪಟ್ಟ ಕಟ್ಟಿದ್ದಾಗಿತ್ತು. ಆ ತಲೆಗಳು ನನಗೆ ನನ್ನ ತಲೆಯ ಹಾಗೆಯೇ ಯಾವ ದಿಕ್ಕಿನಿಂದ ಕಂಡಿದ್ದವೋ ಎನ್ನುವ ಪ್ರಶ್ನೆ ದಿನಕಳೆದಂತೆ ಜಟಿಲವಾಗುತ್ತಾ ಹೋಗಿ ನನ್ನ ತಲೆಯ ಬಗ್ಗೆಯೇ ನನಗೆ ಸಂಶಯ ಬರತೊಡಗಿದ್ದಂತೂ ನಿಜ. (ಹಾಗೆಂದು ಒಪ್ಪಿಕೊಳ್ಳುವುದು ಅಷ್ಟೇನೂ ಸುಲಭವಲ್ಲ ಅನ್ನುವುದು ಬೇರೆ ವಿಷಯ).

ತಮ್ಮ ತಮ್ಮ ಲೇಖನಿಗಳಿಂದ ಓತಪ್ರೋತವಾಗಿ ಹರಿದ, ಚುಟುಕು ಕವನ ಮುಂತಾದವುಗಳಲ್ಲಿ ಕೆಲವಕ್ಕೆ ಮುಕ್ತಿ ಕಾಣಿಸುವಲ್ಲಿ ಸಫಲರಾಗಿದ್ದ ಅಜ್ಜಿ, ಆಂಟಿ, ಅಕ್ಕ, ತಂಗಿಯರ ಈ ಕಟ್ಟೆ ಕೂಟವನ್ನು ಸೇರಿಸಿ, ಇಡೀ ವರ್ಷದ, ಸಂಘದ ಉದ್ದೇಶಿತ ಕಾರ್ಯಕ್ರಮಗಳ ರೂಪುರೇಷೆಯನ್ನು ಸಿದ್ಧಪಡಿಸುವ ಮಹಾಕಾರ್ಯಕ್ಕೆ ಹಿಂಭಾಗವನ್ನು ಊರಿದಾಗಲೇ, ಬರುವ ವರ್ಷದ ನನ್ನ ಭವಿಷ್ಯದ ರೂಪುರೇಷೆಯೂ ಸಿದ್ಧವಾಗಿಹೋಗಿತ್ತು ಎನ್ನುವುದು ನನ್ನ ಅಲ್ಪಮತಿಗಾಗ ಹೊಳೆದಿರಲಿಲ್ಲ. ಆ ಒಂದು ದಿನ ಕೂಟದ ಪ್ರಥಮ ಮೀಟಿಂಗಿಗಾಗಿ, ನಿಗದಿತ ಸಮಯಕ್ಕೆ ನಿಗದಿತ ಸ್ಥಳಕ್ಕೆ ಕಾಲಿಟ್ಟರೆ, ಒಂದಾನೊಂದು ನರಿ (ದಯವಿಟ್ಟು 'ನರ'ನ ಸ್ತ್ರೀ ರೂಪವೆಂದು ಓದಿಕೊಳ್ಳಿ) ಪಿಳ್ಳೆಯೂ ಕಾಣದೇ, ಸಮಯ, ಸ್ಥಳ ಮತ್ತು ದಿನಾಂಕಗಳನ್ನು ಮತ್ತೆ ಮತ್ತೆ ವಿಚಾರಣೆಗೊಳಪಡಿಸುತ್ತ, ಗೋಣುದ್ದ ಮಾಡಿ, ಹಣೆಯ ಮೇಲೆ ಕೈಯಿಟ್ಟು, ಪ್ರಿಯತಮನನ್ನು ನಿರೀಕ್ಷಿಸುವ ಕನ್ನಡ ಚಲನಚಿತ್ರದ ನಾಯಕಿಯಂತೆ ಬಾಗಿಲಲ್ಲೇ ನಿಂತಿದ್ದಾಗ; ಒಂದು ತಲೆ ಕಂಡು ಆ ನಾಯಕಿಯ ಸಂಭ್ರಮವನ್ನೇ ಅನುಭವಿಸಿದ್ದೆ. ಒಂದೊಂದಾಗಿ ಮಲ್ಲಿಗೆಯ ಮಾಲೆಗಳು, ಲಿಪ್ ಸ್ಟಿಕ್‌ಗಳು ಕೂಡಿ, ಗಂಡಂದಿರು ಊಟಕ್ಕೆ ತಡವಾಗಿ ಬಂದದ್ದು, ಕೆಲಸದವಳು ಮೊದಲೇ ಹೇಳಿದ್ದರೂ ಬೇಗ ಬಂದು ಕೆಲಸ ಮುಗಿಸದಿದ್ದುದು, ಶಾಲೆಯಿಂದ ಬರುವ ಮಕ್ಕಳಿಗೆ ತಿಂಡಿ ಮಾಡಿಟ್ಟು ಬರುವುದರಲ್ಲಿ ತಡವಾದುದು, ಮ್ಯಾಚಿಂಗ್ ಕುಪ್ಪಸ ಇಸ್ತ್ರಿ ಇಲ್ಲದೇ ಬಿದ್ದಿದ್ದರಿಂದ ಸೀರೆಯನ್ನೇ ಬದಲಿಸಬೇಕಾಗಿ ಬಂದುದು, ಹರಟೆಗೆ ಕುಳಿತ ಪಕ್ಕದ ಮನೆಯಾಕೆ ಏಳುವ ವಿಚಾರವನ್ನೇ ಮಾಡದಿದ್ದುದು, ಅನಿರೀಕ್ಷಿತವಾಗಿ ನೆಂಟರು ಬಂದುದು, ಚಪ್ಪಲಿ ಮೆಟ್ಟಿ ಹೊರಟರೆ ಹತ್ತು ಮಾರು ದೂರದಲ್ಲಿರುವಾಗಲೇ ಸಿಟಿಬಸ್ಸು ಹೊರಟುಹೋದುದು, ಇಷ್ಟೆಲ್ಲಾ ಅಡೆತಡೆಗಳನ್ನು ದಾಟಿ ಬಂದುದನ್ನು ಧ್ವನಿ ಎಳೆದೆಳೆದು ಹೇಳಿ ಉಸ್ಸೆಂದು ಕೂಡುವುದರಲ್ಲಿ, ಒಂದಿಷ್ಟೂ ಕರುಣೆ ಇಲ್ಲದೇ ಆ ಸೂರ್ಯ ಮುನ್ನಡೆದೇ ಇದ್ದದ್ದರಿಂದ, ನಿಮಿಷಗಳು ಗಂಟೆಗಳಾಗಿ ಕಳೆದೇ ಹೋಗಿ, ಮನೆ ಸೇರುವ ಆತುರ ಶುರುವಾಗೇ ಬಿಟ್ಟಿತ್ತು. ಅಂಥದರಲ್ಲೇ ಎಂಥ ಕಾರ್ಯಕ್ರಮ ಮಾಡಬೇಕು ಎಂಬ ಸಲಹೆ ನಿರೀಕ್ಷಿತ ಪ್ರಶ್ನೆಯನ್ನು ಮುಂದಿಟ್ಟದ್ದೇ ತಡ, ಎಲ್ಲ ಬಾಯಿಗಳೂ ಒಮ್ಮೆಲೇ ಮಾತಾಡತೊಡಗಿ, ಒಂದಕ್ಕಿಂತ ಒಂದು ಏರುತ್ತ ಹೋಗಿ, ತನ್ನ ಅತ್ಯುತ್ತಮ ಸಲಹೆಗಳೇ ಕಾರ್ಯರೂಪಕ್ಕಿಳಿಯಬೇಕೆಂಬ ಪೈಪೋಟಿಯಲ್ಲಿರುವಾಗ, ನನ್ನ ಕಿವಿಗಳು ಅಳತೊಡಗಿ, ನಾನು ಕಣ್ಣುಕಣ್ಣು ಬಿಡುತ್ತ ಕುಳಿತಿದ್ದೆ. ಪಕ್ಕದಲ್ಲಿದ್ದ ಮೇಧಾಬಾಯಿಯ ಮುಂದೆ ಮೈದೆರೆದುಕೊಂಡು ಕುಳಿತಿದ್ದ ನಡಾವಳಿಗಳ ಪುಸ್ತಕದ ಬಿಳಿ ಹಾಳೆಯ ಹೊಟ್ಟೆಯ ಮೇಲೆ, ಸಿ.ಎಂ.ನಿಂದ ಹಿಡಿದು, ಬುದ್ಧಿಜೀವಿಗಳನ್ನು ಹಾಯ್ದು, ಸಿನಿಮಾ ನಟಿಯರ ಹೆಸರುಗಳು ತುಣುಕು ತುಣುಕಾಗಿ ಕಂಗೊಳಿಸಿ; ಸ್ಪರ್ಧೆಗಳು, ಕಮ್ಮಟಗಳು, ಉಪನ್ಯಾಸಗಳಿಂದ ಹಿಡಿದು ಸಾಹಿತ್ಯ ಸಮ್ಮೇಳನದವರೆಗೆ ಕಾರ್ಯಕ್ರಮಗಳು ಸೂಚಿತಗೊಂಡಾಗ; ಪರವಾಗಿಲ್ಲ, ನಮ್ಮ ಸದಸ್ಯೆಯರು ಎಷ್ಟೊಂದು ಉನ್ನತ ವಿಚಾರಗಳನ್ನು ಹೊಂದಿದ್ದಾರೆ ಎಂದು ಹಿಗ್ಗಿ ಹೀರೇಕಾಯಿಯಾಗುತ್ತಿರುವಾಗ, ಗೌರವಾನ್ವಿತ ಗೌರಮ್ಮನವರು ಒಂದೂ ಮಾತಾಡದೇ ನಸುನಗುತ್ತ ಕುಳಿತಿದ್ದುದನ್ನು ಕಂಡು ಯಾಕೊ ಕಸಿವಿಸಿಯಾಗಿತ್ತು. ಅವರ ನಗುವನ್ನು ಉಪೇಕ್ಷಿಸಿ, ಕೋಶಾಧ್ಯಕ್ಷೆ ನಾಗರಭಾವಿಯನ್ನು, ಆರ್ಥಿಕ ಸ್ಥಿತಿಯ ಬಗ್ಗೆ ಕೇಳಿದಾಗ, ಅವರ ಕೆಂದುಟಿಗಳ ನಡುವಿನಿಂದ, ಎರಡಂಕಿಯ

ಶ್ವೇತಾ ನರಗುಂದ

ಬ್ಯಾಲೆನ್ಸು (ಬಿಡಿಗಾಳಿನಲ್ಲಿ, ನೀವೇನಾದರೂ ಸಾವಿರ, ಲಕ್ಷ, ಕೋಟಿಗಳಲ್ಲಿ ಊಹಿಸಿಕೊಂಡೀರಿ !), ನಾಲ್ಕಂಕಿಯ ಕೆಳ ಅರ್ಧದಲ್ಲಿರುವ ಶುಲ್ಕ ರೂಪದ ಆದಾಯ ಸಿಡಿದು, ಕೂತ ಕುರ್ಚಿಯ ಕೆಳಗಿನ ಕಟ್ಟೆಯೊಳಗೊಂದು ದೊಡ್ಡ ರಂಧ್ರವಾಗಿ, ಧಡಕ್ಕನೇ ಬಿದ್ದಂತೆನಿಸಿತ್ತು. ನನ್ನೊಡನೆ ಮೇಧಾಬಾಯಿಯವರ ಲೇಖನಿ ಬಿಳಿ ಹಾಳೆಯ ಮೇಲೆ ದಾಖಲಿಸಿದ್ದ ಘನಂದಾರಿ ಜನಗಳು ಮತ್ತೂ ಮಹತ್ವಾಕಾಂಕ್ಷಿ ಕಾರ್ಯಕ್ರಮಗಳೂ ದುಡುಮ್ಮನೇ ತಳ ಸೇರಿದ್ದವು. ಆಚೀಚೆ ನೋಡಿದಾಗ, ನಾನಿನ್ನೂ ಮಿಸೆಸ್ ಸೀತಾ ರಾಮಚಂದ್ರ ರಘುವಂಶಿಯವರು ಹೋದ ಜಾಗಕ್ಕೆ ಹೋಗದೇ, ಕಟ್ಟೆಯ ಮೇಲಿನ ಕುರ್ಚಿಯಲ್ಲಿಯೇ ಭದ್ರವಾಗಿ ಕುಳಿತದ್ದು ಖಚಿತವಾಗಿ, ಒಳಗೇ ಸಿಕ್ಕಿಕೊಂಡು ವಿಲವಿಲಿಸುತ್ತಿದ್ದ ಉಸಿರು ಪುಳಕ್ಕನೇ ಹೊರಜಿಗಿದಿತ್ತು. ಈ ನಮ್ಮ ಅಗಾಧ ಕೋಶ, ಹನ್ನೊಂದು ಮಾಸಿಕ, ಒಂದು ವಾರ್ಷಿಕ ಕಾರ್ಯಕ್ರಮಗಳ ಉಗುರಿನ ಬಣ್ಣಕ್ಕೂ ಸಾಲುವುದಿಲ್ಲವೆನ್ನುವ ಲೆಕ್ಕ, ಕತೆ ಕವನಗಳ ಮಾಯಾಲೋಕದ ಪರಿಧಿಯನ್ನು ದಾಟದ ನನ್ನ ಘನ ಬುದ್ಧಿಗೂ ಹೊಳೆದುಹೋಗಿತ್ತು. ಗೌರಮ್ಮನವರ ಮುಖದ ಮೇಲಿನ ಆ ನಿಗೂಢ ಮಂದಹಾಸದ ಒಂದು ಪಕಳೆ ಬಿರಿದು ಗಂಧ ಬೀರಿದಂತೆನಿಸಿತ್ತು.

ಬೆಲೆ ಏರಿಕೆ ತಡೆಗೆ ವಿಫಲ



ಏರಿಕೆಗೆ ಕಾರಣ ಹುಡುಕಲು ಇನ್ನಷ್ಟು ಸಮಿತಿ, ಉಪಸಮಿತಿ ಗಳನ್ನು ರಚಿಸುತ್ತೇವೆ.. ಬೋರಾ! ನೀನು ಧೈರ್ಯವಾಗಿರು..

ಅಂಥದರಲ್ಲಿ, ಹಿಂದಿನ ದಿನ ಕುಳಿತು ಓದಿದ್ದ ಸಂಘದ ನಿಬಂಧನೆಗಳ ಪಟ್ಟಿಯಲ್ಲಿಯ 'ಚಂದಾ' ಎನ್ನುವ ಶಬ್ದವೊಂದು ಆಪದ್ಬಾಂಧವನಾಗಿ, ರೇಡಿಯಂ ಬಳಿಸಿಕೊಂಡಂತೆ ಹೊಳೆಯುತ್ತ, ಕಣ್ಣ ಮುಂದೆ ಮಿಂಚತೊಡಗಿ, ಅಂಧಕಾರದಲ್ಲೊಂದು ಬೆಳಕಿನ ಕಿರಣ ಕಂಡಂತಾಗಿತ್ತು. ಯಂಡಮೂರಿಯವರ 'ಯಶಸ್ಸಿನ ಗುಟ್ಟು' ನೋ ಮತ್ತೊಂದೋ ಪುಸ್ತಕದಲ್ಲಿ ಓದಿದ 'ಖರ್ಚಿಗೆ ತಕ್ಕಂತೆ ಆದಾಯ ಬೆಳೆಸಿಕೊಳ್ಳಿ' ಎನ್ನುವ ಅರ್ಥದ ಸ್ಲೋಗನ್ನು, 'ಹಾಸಿಗೆ ಇದ್ದಷ್ಟು ಕಾಲು ಚಾಚು' ಎಂಬ ಬಾದರಾಯಣ ಕಾಲದ ನಾಣ್ನುಡಿಯ ತಲೆಯ ಮೇಲೆ ಕಾಲಿಟ್ಟು ನಿಂತಿತ್ತು. ಒಂದು ವರ್ಷ ನೊಗ ಕಟ್ಟಿಕೊಂಡೇ ತೀರಬೇಕಿದ್ದ ಮೇಲೆ, ವೀರತನದಿಂದ ಹೋರಾಡುತ್ತಲೇ ಮುನ್ನುಗ್ಗಬೇಕು (ಸಾಯುವ ಮಾತು ಇಲ್ಲೇಕೆ ?) ಎಂದು ನನಗೆ ನಾನೇ ಧೈರ್ಯ ತುಂಬಿಕೊಂಡು, ಧ್ವನಿಪೆಟ್ಟಿಗೆಯ ನಡುಕವನ್ನು ಕೊಡವಿ ಬಾಯಿತೆರೆದಿದ್ದೆ.

'ಸಾಹಿತ್ಯಾಸಕ್ತ ಸಹೋದರಿಯರೇ, ಬುದ್ಧಿಜೀವಿಗಳ ಬಾಯಿಯಿಂದ ಬರಲು ಯೋಗ್ಯವಾದ ಮಾತುಗಳನ್ನೇ ನೀವು ಆಡಿದ್ದೀರಿ. (ಇದರಲ್ಲಿ ವ್ಯಂಗ್ಯವೇನೂ ಇಲ್ಲ, ನಮ್ಮ ಲೇಖಕಿಯರನ್ನು ಉಬ್ಬಿಸಲು ಹೇಳಿದ್ದು...) ನಿಮ್ಮ ಮಹೋನ್ನತವಾದ ಸಲಹೆಗಳನ್ನು, ನಮ್ಮ ಸಂಪತ್ತಿನ ಇನ್‌ಚಾರ್ಜ್ ನಾಗರಭಾವಿಯವರ (ನಾಗರಹಾವು ಎಂದು ತಪ್ಪಾಗಿ ಓದಿಕೊಂಡಿದ್ದರೆ, ಅದು ತಪ್ಪಲ್ಲವೆ ? ಇಬ್ಬರದೂ ಒಂದೇ ಕೆಲಸ ಇದ್ದರೇನಾಯಿತು ?) ಸುಪರ್ದಿನಲ್ಲಿರುವ ಕೋಶದ ಸೈಜನ್ನು ನೀವೆಲ್ಲರೂ ಅರಿತವರಾಗಿದ್ದೀರಿ. ಈ ಸಂದರ್ಭದಲ್ಲಿ ನಾವೆಲ್ಲರೂ ಎಲ್ಲಕ್ಕೂ ಮೊದಲು ಮಾಡಬೇಕಾದ ಕೆಲಸವೆಂದರೆ, ಸಂಘವನ್ನು ಜನಬಲ, ಧನಬಲ (ದನಬಲ ಅಲ್ಲ ...ಜನರಿದ್ದ ಮೇಲೆ ಅವುಗಳದೇನು ಕೆಲಸ ?)ದಿಂದ ಸದೃಢಗೊಳಿಸುವುದು. ಅದಕ್ಕಾಗಿ ನಾವೆಲ್ಲ ಬೀದಿ ಬೀದಿ ಮನೆಮನೆ ತಿರುಗಿ, ಕನ್ನಡ ಕೈಯಲ್ಲಿ ಹಿಡಿದವರನ್ನೆಲ್ಲ ಹಿಡಿದು ತರಬೇಕು, ಕನ್ನಡ ಬಾಯಲ್ಲಾಡಿದವರ ಜೇಬಿಗೆ ಕತ್ತರಿ ಹಾಕಬೇಕು.' ಮಾರ್ಕೆಟಿಂಗ್ ಸ್ಟ್ರಾಟೆಜಿಯ ನನ್ನ ಮಹಾ ಜ್ಞಾನಭಂಡಾರವನ್ನು ದುಡಿಸುತ್ತಿದ್ದೆ. (ಸ್ವಲ್ಪ ನಾಟಕೀಯವಾಗಿ ಎನ್ನುವುದು ನನಗೂ ಗೊತ್ತು. ನಾಟಕ ಮಾಡದವರಿಗೆ ಎಲ್ಲಿಯ ಕಿಮ್ಮತ್ತು?) 'ಹಾಗೆಯೇ ಇಲ್ಲಿರುವ ಸದಸ್ಯೆಯರೆಲ್ಲ, ತಕ್ಷಣ ತಮ್ಮ ಈ ವರ್ಷದ ಶುಲ್ಕವನ್ನು, ಮತ್ತೂ ಹಿಂದಿನ ವರ್ಷದ ಶುಲ್ಕವನ್ನು ಯಾರಾದರೂ ಕೊಡದವರು ಇದ್ದರೆ (ನನ್ನ ಜ್ಞಾನದ ಪ್ರಕಾರ ಅಲ್ಲಿದ್ದವರಲ್ಲಿ ಹಲವರು ಅಂಥವರೇ ಎನ್ನುವುದನ್ನು ನಾನು ಬಾಯಿಬಿಟ್ಟು ಹೇಳುವ ಹಾಗಿರಲಿಲ್ಲ) ಪಾವತಿಸಬೇಕು.'

ಎಲ್ಲರ ಮೊಬೈಲಿನ ರಿಮೈಂಡರ್‌ಗಳು ಒಮ್ಮೆಲೇ ಬೀಪ್ ಬೀಪ್ ಅಂದಂತೆ, ತಕ್ಷಣ, ಎಲ್ಲರಿಗೂ ಏನೇನೋ ಅರ್ಜೆಂಟ್ ಕೆಲಸಗಳು ನೆನಪಾಗಿ, ಕಣ್ಣು ಮುಚ್ಚಿ ತೆಗೆಯುವುದರೊಳಗೆ ಭಾರ ಕಳೆದುಕೊಂಡ ಕುರ್ಚಿಗಳು ನಿರಾಳವಾಗಿ ಉಸಿರಾಡತೊಡಗಿದ್ದವು.

ಇದೀಗ ಅಧ್ಯಕ್ಷರ ಕುರ್ಚಿಯ ಬೋನಿನಲ್ಲಿ ಸಿಕ್ಕಿಬಿದ್ದ ನನ್ನ ಅಹಂಗೇ ಒಂದು ಸವಾಲಾಗಿತ್ತು. ಏನಾದರೂ ಮಾಡಿ ನನ್ನ ಮಾನ ಉಳಿಸಿಕೊಳ್ಳಲೇಬೇಕಿತ್ತು. ಒಬ್ಬ ಒಳ್ಳೆಯ, ಪ್ರಸಿದ್ಧ, ವಿದ್ವಾನ್ ಸಾಹಿತಿ (ಈ ಎಲ್ಲ ಶಬ್ದಗಳು ಒಂದರ ಪಕ್ಕದಲ್ಲೊಂದು ಕೂಡುತ್ತವೆಯೇ ಎಂಬ ಹುಳ ನಿಮ್ಮ ತಲೆ ಹೊಕ್ಕಿದ್ದರೆ, ನಾನೇನು ಮಾಡಲಾರೆ. ಕ್ಷಮಿಸಿ.) ಯನ್ನು ಕರೆಸಿ, ಉಪನ್ಯಾಸವನ್ನೇರ್ಪಡಿಸಿದರೆ, ಜನ ಬಂದೇ ಬರುತ್ತಾರೆ ಎಂದೆಣಿಸಿ ಶ್ರೀಗಣೇಶ ಎಂದುಬಿಟ್ಟಿದ್ದೆ.

ಹತ್ತಾರು ಜನರನ್ನು ಸಂಪರ್ಕಿಸಿ, ನೂರಿನ್ನೂರು ಕರೆಗಳನ್ನು ಮಾಡಿ, ಮೊಬೈಲ್ ಬಿಲ್ ನೋಡಿ ಯಜಮಾನರು ಹುಬ್ಬೇರಿಸಿದುದು ಕಂಡೂ ಕಾಣದಂತೆ ನಟಿಸಿ, ಡೈನಿಂಗ್ ಟೇಬಲ್ ಮೇಲೆ ಒಂದೊಂದು ದಿನ ಒಂದೊಂದು ಐಟಂ ಮಂಗಮಾಯವಾಗಿರುತ್ತಿದ್ದರೂ ತುಟಿಪಿಟಕ್ ಎನ್ನದವರ ಸಹನಶೀಲತೆಯನ್ನು ಮನದಲ್ಲೇ ಮೆಚ್ಚಿಕೊಂಡರೂ, ಗಂಡ ಮಕ್ಕಳು ಎನ್ನುವವರಿಂದ ಇಷ್ಟಾದರೂ ಸಹಕಾರ ಮಹಿಳೆಯ ಕುಟುಂಬಸಿದ್ಧ ಹಕ್ಕು (ಇಲ್ಲಿ, ಜನ್ಮಸಿದ್ಧ, ಮದುವೆಸಿದ್ಧ, ಸ್ತ್ರೀಗೆದ್ದ, ಶಾಂತಿಬದ್ಧ ಇನ್ನೂ ಏನೇನೊ ಶಬ್ದಗಳು ಹೊಳೆದು ನನ್ನನ್ನು ಕಂಗೆಡಿಸುತ್ತಿವೆ) ಎಂದುಕೊಂಡು, ಸೆರಗು ಬೀಸುತ್ತ ಹತ್ತೆಂಟು ದಿನ ಅಲೆದು ಅಲೆದು, ಎಲ್ಲ ವ್ಯವಸ್ಥೆಗಳನ್ನು ಮಾಡಿ, ವೃತ್ತಪತ್ರಿಕೆಯಲ್ಲಿ ಕಾರ್ಯಕ್ರಮದ ವಿವರಗಳನ್ನು ಅಚ್ಚುಹಾಕಿಸಿ, ಒಂದೊಂದು ಕಾರ್ಯಕ್ರಮ ಆಯೋಜಿಸಿದಾಗಲೂ, ಅತಿಥಿಗಳು ಬಂದು ಅರ್ಧ ತಾಸಾದರೂ, ಜೋಡಿಸಿಟ್ಟ ಸಾಲುಸಾಲು ಕುರ್ಚಿಗಳಲ್ಲಿ, ಅಲ್ಲೊಂದು ಇಲ್ಲೊಂದು ಕಿವಿ ಕಂಡು (ಹಾ... ಹಾ... ಒಂದೊಂದೇ ಕಿವಿ ಬರಲು ಸಾಧ್ಯವೇ ಇಲ್ಲ ಬಿಡಿ), ಅತಿಥಿಗಳ ನೋಟವನ್ನೆದುರಿಸಲಾರದೆ ದೇಶಾವರೀ ನಗೆ ನಗುತ್ತಿರುವಾಗ, ಇಂಥ ಪ್ರಸಂಗಗಳನ್ನು ನನಗಿಂತ ಹೆಚ್ಚು ಎದುರಿಸಿದ್ದ ಅತಿಥಿಗಳಿಂದಲೇ ಸಮಾಧಾನ ಮಾಡಿಸಿಕೊಂಡು ಕೃತಾರ್ಥಳಾಗುತ್ತಿದ್ದೆ. ಒಮ್ಮೆ ಸಂಘದ ಕಿಮ್ಮತ್ತು ಹೆಚ್ಚಿಸಲು ಸ್ಥಳೀಯ ಪುಢಾರಿಗಳೊಬ್ಬರನ್ನು ಕರೆದು, ಅಪರೂಪಕ್ಕೊಮ್ಮೆ ತುಂಬಿದ ಕುರ್ಚಿಗಳನ್ನು ಎರಡು ತಾಸು ನೋಡುತ್ತ ಕಳೆದುದೂ ಇದೆ. ಅತಿಥಿಗಳು ಕೈಕೊಟ್ಟು (ಬಿಟ್ಟು ಎಂದರೆ ಹೆಚ್ಚು ಸಮಂಜಸವಾದೀತೇನೋ), ವೃತ್ತಿಬಾಂಧವ ಗೆಳತಿಯರಿಗೆಲ್ಲಾ ಮಿರ್ಚಿ ಭಜಿ ತಿನ್ನಿಸಿ, ಬಿಸಿಬಿಸಿ ಚಹಾದಿಂದ ಗಂಟಲು ತಣಿಸಿದ ಪ್ರಸಂಗವನ್ನೆದುರಿಸಿಯೂ ತಲೆ ಸ್ವಸ್ಥಾನದಲ್ಲೇ ಉಳಿಸಿಕೊಂಡದ್ದು ನಿಜವಾಗಿಯೂ ಸತ್ಯ.

ಅರ್ಧ ಮುಕ್ಕಾಲು ವರ್ಷ ಸವೆಯುವುದರಲ್ಲಿ ಕುಬೇರನ ಸಹೋದರಿ ನಾಗರಭಾವಿಯವರು ಕಸೂತಿ ಹಾಕಿದ ಹಣದ ಚೀಲವನ್ನು ಉಲ್ಟಾ ಮಾಡಿ ಝಾಡಿಸಿ, ಕೈ ಎತ್ತಿ ನಿಂತಾಗ, ನನ್ನ ಸ್ವಂತದ ಖಜಾನೆಯಿಂದ ಮತ್ತೆ ಮತ್ತೆ ಡೊನೇಶನ್ ಕೊಡತೊಡಗಿ, ಕನ್ನಡದ ಸೇವೆಗೆ ನನ್ನ ಕೊಡುಗೆ ಎಂದು ಅನೌನ್ಸ್ ಮಾಡಿ (ನಿಜವಾದ ಕಾರಣ ಅದಲ್ಲವೇ ಅಲ್ಲ ಎನ್ನುವುದನ್ನು ನೀವಾಗಲೇ ಊಹಿಸಿದ್ದೀರಿ), ಸಂಘವನ್ನು ಒಂದು ವರ್ಷವೂ ನಡೆಸಿಕೊಂಡು ಹೋಗಲಾರದ ಕೈಲಾಗದವಳು ಎಂಬ ಅಪವಾದದಿಂದ ತಪ್ಪಿಸಿಕೊಂಡಿದ್ದೆ.

ನಮ್ಮ ಮೇಧಾಬಾಯಿಯವರು ತಿಂಗಳು ತಿಂಗಳು ತಪ್ಪದೇ ನಾಲ್ಕಾರು ದಿನ ತಾಸುಗಟ್ಟಲೆ ಕುಳಿತು, ಪತ್ರ ಗೀಚಿ ಗೀಚಿ, ಕೆಂಪು ಡಬ್ಬಿಯ ಹೊಟ್ಟೆಗೆ ತುರುಕಿ ಬರುತ್ತಿದ್ದರೂ, ಕೆಲ ಪತ್ರಗಳು, ಮಾರ್ಗ ಮಧ್ಯದಲ್ಲಿ ನಿಗೂಢವಾಗಿ ನಾಪತ್ತೆಯಾಗಿ, ಹಕ್ಕುದಾರರಿಗೆ ತಲುಪದೆ, ಸರಸ್ವತೀ ಪುತ್ರಿಯರು ದುರ್ಗಾವತಾರ ತಾಳಿ, ತಮ್ಮ ನಾಲಿಗೆ ಎಂಬ ಕತ್ತಿಯನ್ನು ಯದ್ವಾತದ್ವಾ ಝಳಪಿಸಿದಾಗ, ನಮ್ಮ ನಿರಪರಾಧಿತ್ವವನ್ನು ಯೋಗ್ಯ ಪುರಾವೆಯೊಂದಿಗೆ ಸಿದ್ಧಮಾಡಲು ಸಾಧ್ಯವಾಗದೆ, ನಮ್ಮದೇ ಕೈಗಳನ್ನು ಹಿಸುಕಿಕೊಂಡು, ಕೋಪ ಶಮನ ಮಾಡಿಕೊಂಡದ್ದಿದೆ. ಮತ್ತೆ... ಹೋಗಲಿ ಬಿಡಿ, ಏನೋ ಹೊಟ್ಟೆಯ ಸಂಕಟ, ಬಾಯಿತಪ್ಪಿ ಇಷ್ಟೆಲ್ಲಾ ಹೊರಬಂತು, ಇದನ್ನೆಲ್ಲ ಮರೆತುಬಿಡಿ. ಪ್ಲೀಜ್...

ಇನ್ನೇನು, ನಮ್ಮ ವಾರ್ಷಿಕೋತ್ಸವ ಬಂದೇಬಿಟ್ಟಿತಲ್ಲ... ನೀವೂ ಬನ್ನಿ, ನಿಮ್ಮ ಸ್ನೇಹಿತೆಯರನ್ನೂ ಕರೆತನ್ನಿ. ನನ್ನ ಕುತ್ತಿಗೆಯ (ಬಿಗಿದಿರುವ) ಕೆಂಪು ಹೂವಿನ ಹಾರವನ್ನು ಸೋಪು ಹಚ್ಚಿ ತೊಳೆದು ಬಿಸಿಲಲ್ಲಿ ಒಣಗಿಸಿ ಇಟ್ಟಿದ್ದೇನೆ.

ಅಂದಹಾಗೆ... ಮೊನ್ನೆ ಪತ್ರಿಕೆಯಲ್ಲಿ ನಿಮ್ಮದೊಂದು ಚುಟುಕ ಓದಿದಂತಿತ್ತಲ್ಲ...

ಶ್ವೇತಾ ನರಗುಂದ
ನಂ. ೨೨, ಸುಭಾಷ ನಗರ, ಎಂ. ಎಂ. ಸೆಕ್ಟರ್ ೧, ಬೆಳಗಾವಿ - ೫೯೦ ೦೧೬

# ಹೊನ್ನಬಿತ್ತೇವು ಹೊಲಕೆಲ್ಲ



**ಹೊನ್ನಬಿತ್ತೇವು ಹೊಲಕೆಲ್ಲ**
ಪ್ರ:ಸಾಹಿತ್ಯ ಸಮಿತಿ
ಅಖಿಲ ಕರ್ನಾಟಕ ಜನಪದ ಸಾಹಿತ್ಯ ಸಮ್ಮೇಳನ
(ಸಂಸ್ಮರಣ ಗ್ರಂಥ)
ತರೀಕೆರೆ, ೧೯೬೨

**ಬೇ**ಂದ್ರೆಯವರು ಸಮ್ಮೇಳನಾಧ್ಯಕ್ಷರಾಗಿದ್ದ, ೧೯೬೨ರಲ್ಲಿ ತರೀಕೆರೆಯಲ್ಲಿ ನಡೆದ ಜಾನಪದ ಸಮ್ಮೇಳನದ ಸ್ಮರಣಗ್ರಂಥವಿದು. ಗಾತ್ರದಲ್ಲಿ ದೊಡ್ಡದು. (ಸುಮಾರು ಎಂಟುನೂರಾ ಮೂವತ್ತಾರು ಪುಟಗಳು)

ಕನ್ನಡ ಜನಪದ ಮತ್ತು ಜಾನಪದ ಸತ್ವ, ಮಹತ್ವಗಳ ಅನಾವರಣಕ್ಕೆ ಈ ಗ್ರಂಥ ಸೂಕ್ತ ವೇದಿಕೆಯಾಗಿದೆ. ಮುಖ್ಯ ಸಂಗತಿಯೆಂದರೆ 'ಜಾನಪದ ಸಾಹಿತ್ಯ'ದ ವೈವಿಧ್ಯತೆಯನ್ನು ಈ ಕೃತಿ ನಿರೂಪಿಸುತ್ತದೆ. ಜಾನಪದ ಕಲೆ, ಕಲಾತಂಡ, ಕಲಾವಿದರ ಮಾಹಿತಿ ಇದರಲ್ಲಿಲ್ಲ. ನಲವತ್ತೆರಡು ವರ್ಷಗಳ ಹಿಂದೆ ಈ ಕೃತಿ ಪ್ರಕಟಗೊಂಡಿದೆ ಎಂಬುದನ್ನು ಗಣಿಸಿದಲ್ಲಿ ಮೇಲಿನ ಮಾತು ದೋಷ ಎನಿಸದು.

ಈ ದೊಡ್ಡ ಗ್ರಂಥ ಅನೇಕ ಲೇಖನಗಳ ಆಕರ. ಹಿರಿಯರು, ಕಿರಿಯರು, ಆಸಕ್ತರು, ಕವಿಗಳು, ಸಂಶೋಧಕರು, ಪ್ರಾಧ್ಯಾಪಕರು, ಮೊದಲಾದವರ ವೈವಿಧ್ಯಮಯ ಅಭಿವ್ಯಕ್ತಿ ಇಲ್ಲಿದೆ.

ಜೀಶಂಪ ಅವರ ಪರಿಚಯರೂಪದ ಎರಡು ಲೇಖನಗಳು ಕೃತಿಯ ಆರಂಭದಲ್ಲಿ ಅಚ್ಚಾಗಿವೆ. ಜಾನಪದ ಅಧ್ಯಯನಕ್ಕೂ ಹೆರವರ ಸೂತ್ರಗಳನ್ನು ಅಳವಡಿಸಿಕೊಳ್ಳುವ ನಮ್ಮ ಅರಿವಿಗೆ ಏನು ಹೇಳಲಿ? ಡಾಸನ್, ಪ್ರಾಪ್, ಥಾಂಸನ್, ಬಾಗ್ಸ್ ಮೊದಲಾದ ತಜ್ಞರ ಅಪೂರ್ವ ಕೊಡುಗೆಯನ್ನು ನೆನೆದೂ, ಜಾನಪದ ನಮ್ಮದೇ ನಿರ್ವಚನಕ್ಕೆ ತೆರೆದುಕೊಂಡಲ್ಲಿ ಎಷ್ಟು ಸೊಗಸಾದೀತು! ಇಂಗ್ಲಿಷಿನ ನೆರವನ್ನು, ಪ್ರಭಾವವನ್ನು, ಅನುಕರಣೆಯನ್ನು, ಅನುಸರಣೆಯನ್ನು ಇದೊಂದು ಸಂದರ್ಭದಲ್ಲಿಯಾದರೂ ನಾವು ಧಿಕ್ಕರಿಸಬೇಕಿತ್ತು, ಧಿಕ್ಕರಿಸಬಹುದಿತ್ತು ಎನಿಸುತ್ತದೆ.

ವಿದೇಶಿ ವಿದ್ವಾಂಸರು ತಮ್ಮ ಜಾನಪದವನ್ನು ವಿಶ್ಲೇಷಿಸುವ 'ತಳಹದಿ'ಯೇ ಬೇರೆ. ಫಿನ್ಲೆಂಡ್, ಐರ್ಲೆಂಡ್ ಮೊದಲಾದ ಕೆಲ ದೇಶಗಳನ್ನು ಬಿಟ್ಟರೆ ಅಮೆರಿಕಾ, ಇಂಗ್ಲೆಂಡ್, ಫ್ರಾನ್ಸ್ ಮೊದಲಾದ ದೇಶಗಳಿಗೆ ಜಾನಪದ ಇದೆಯೇ? ಇದ್ದರೂ ಅಲ್ಲಿನ ಏಕಧರ್ಮೀಯ, ಶ್ರೇಣೀಕೃತ ಬದುಕು, ಅದರ ಉಗಮ, ವೈವಿಧ್ಯ, ವಿಶ್ಲೇಷಣೆಯೇ ಭಿನ್ನ; ಸಾಮಾನ್ಯ. ಭಾರತದಂತಹ ವೈವಿಧ್ಯಮಯ ಜಾತಿಪ್ರಣೀತ, ಧರ್ಮಪ್ರಣೀತ ಜಾನಪದ ಬಹುಮುಖಿ.

ಇರಲಿ, ಸಿಂಪಿ ಲಿಂಗಣ್ಣನವರ ಲೇಖನ ಮಾಹಿತಿಯುಕ್ತ. ಅವರ ತನ್ಮಯತೆಯ ನಿರೂಪಣೆ ಗಮನ ಸೆಳೆಯುತ್ತದೆ. ಗೌರೀಶ ಕಾಯ್ಕಿಣಿ ಲೇಖನ ಮಧ್ಯಮ ದರ್ಜೆಯದು; ಕನ್ನಡದ ವಿಶಿಷ್ಟ ಲೇಖಕರೆಂದು ಹೆಸರಾಗಿರುವ ಗೌರೀಶರು ಈ ಲೇಖನದಲ್ಲಿ ಸಪ್ಪೆ ಎನಿಸಿಬಿಡುತ್ತಾರೆ. 'ಉತ್ತರ ಕನ್ನಡದ ಜಾನಪದ ಕತೆಗಳು' ಲೇಖನದಲ್ಲಿ ವಿಶ್ಲೇಷಣೆ ಸಾಲದು.

'ದಕ್ಷಿಣ ಕನ್ನಡದ ಜನಪದ ಸಾಹಿತ್ಯ' ಲೇಖನ ಒಳಗೊಂಡಿರುವ ಮಾಹಿತಿ ಈ ಗ್ರಂಥದ ಮುಂದಿನ ಮೂರ್ನಾಲ್ಕು ಲೇಖನಗಳಿಗೆ ಆಕರವಾಗಿದೆ; ಅದೇ ಕಾರಣಕ್ಕೆ ಪುನರಾವರ್ತನೆ ಕಂಡುಬರುತ್ತದೆ. 'ಕೊಡಗಿನ ಜನಪದ ಗೀತೆಗಳು' ಕೊಡವ ಭಾಷೆಯ ಉಲ್ಲೇಖಗಳನ್ನೊಳಗೊಂಡ ವಿಶಿಷ್ಟ ಲೇಖನ; ಮಾದರಿ ಲೇಖನ.

ಕಾಸರಗೋಡಿನ ಜಾನಪದ ಕುರಿತ ಕೈಯಾರರ ಲೇಖನ, ಯಕ್ಷಗಾನ ಕುರಿತ ಕೇಶವಭಟ್ಟರ ಲೇಖನಗಳು ಉಪಯುಕ್ತ ಮಾಹಿತಿ ನೀಡುವುದರ ಜೊತೆಗೆ ಆ ಪ್ರಕಾರಗಳ ವೈಶಿಷ್ಟ್ಯವನ್ನೂ ಬಿಂಬಿಸಿವೆ. ಮಾಹಿತಿ ಹಾಗೂ ವಿಶ್ಲೇಷಣೆ ದೃಷ್ಟಿಯಿಂದ ಇವು ಉತ್ತಮ ಆಕರಗಳಾಗಿವೆ.

ಪರಮೇಶ್ವರ ಭಟ್ಟರ 'ಗೋವಿನ ಹಾಡಿ'ನ ತೌಲನಿಕ ವಿಶ್ಲೇಷಣೆ ಸೂಕ್ತವಾಗಿದೆ. ಆ ಕಾಲ, ಸಂದರ್ಭಕ್ಕೆ ತಕ್ಕದಾದ ನಿರ್ವಚನವಿದೆ. ಆದರೆ ಇಡೀ ಪದ್ಯದಲ್ಲಿ ಕಾಣುವ ಹರಿಪಾರಮ್ಯವಾಗಲೀ, ಚಿತ್ರಿಸಿರುವ (ಹಾಡನ್ನು) ವೈದಿಕ ಮನಸ್ಸಾಗಲಿ ವಿಶ್ಲೇಷಣೆಗೆ ಒಳಪಟ್ಟಿಲ್ಲ. ಹುಲಿ ಹುಲ್ಲು ತಿನ್ನುವುದಿಲ್ಲ ಎಂಬ ಪ್ರಾಥಮಿಕ ಜ್ಞಾನ ಬೇಡವೆ? 'ಹಿಂಸೆ' ಒಂದು ಹಂತದವರೆಗೆ, ಒಂದು ಸ್ತರದಲ್ಲಿ ಪ್ರಕೃತಿನ್ಯಾಯ. ಹುಲಿ ಏನು ಮಾಡಬೇಕು? ಹಾಗೆ ನೋಡಿದರೆ ಇಲ್ಲಿನ ಗೋವಿಗಿಂತಲೂ ಹುಲಿಯೇ ಸ್ಮರಣಾರ್ಹ. ಹಸಿದ ವೇಳೆಯಲ್ಲಿ ಸಿಕ್ಕ ಊಟ ಬಿಟ್ಟು, ಒಂದು ಅವಕಾಶ ನೀಡಿದ, ಅದರ ಸಹಜ ದಿನಚರಿಗೆ ವಿರುದ್ಧವಾಗಿ ನಡೆದುಕೊಳ್ಳುವ ಹುಲಿಯ ವರ್ತನೆ ಏಕೆ ವಿಶ್ಲೇಷಣೆಗೆ ಒಳಪಡುವುದಿಲ್ಲ? ಇಡೀ ಹಾಡಿನ ಉದ್ದೇಶವೇನೇ ಇರಲಿ, ಸತ್ಯವೇ ಗೆಲ್ಲಲಿ, ಆದರೆ ಕೊನೆಗೆ ಹುಲಿ ಏಕೆ ಆತ್ಮಹತ್ಯೆ ಮಾಡಿಕೊಳ್ಳುತ್ತದೆ? ಮಾಂಸಾಹಾರಿಗಳೆಲ್ಲಾ ಪಾಪಪ್ರಜ್ಞೆಯಿಂದ ನರಳುವಂತೆ ಮಾಡುವ ಹುನ್ನಾರು ಅಥವಾ ಮನೋದಬ್ಬಾಳಿಕೆ ಇಲ್ಲಿಲ್ಲವೆ? ಶಕ್ತಿಯನ್ನು ಇಲ್ಲವಾಗಿಸುವ ತಂತ್ರ, ಕುತಂತ್ರ, ಸಂಚು ಭಾರತದಲ್ಲಿ ಜನಜನಿತ. ಶಕ್ತಿಮೂಲಗಳನ್ನು ಧರ್ಮ, ದೇವರು, ಪಾಪಪ್ರಜ್ಞೆ, ಪ್ರಾಯಶ್ಚಿತ್ತಗಳ ಮೂಲಕ ನಿಷ್ಕ್ರಿಯಗೊಳಿಸುವ ವೈದಿಕ ಜಾಣ್ಮೆ ಈ ಕವಿತೆಯಲ್ಲಿಲ್ಲವೆ?

'ಗೀಜಗಗಳ ಕತೆ' ಕುತೂಹಲಕಾರಿಯಾಗಿದೆ. ಆದರೆ ನಿರೂಪಕನ ಚಿಂತನೆ ಏಕಮುಖೀ ಎನಿಸುತ್ತದೆ. ಸೊಲ್ಪ ಗಮನಿಸಿದ್ದರೆ ಅಲ್ಲಲ್ಲಿನ ಪುನರಾವರ್ತನೆ ತಪ್ಪಿಸಬಹುದಿತ್ತು. (ನಂಜುಂಡ-ದೇವೀರಿ-ಚಾಮುಂಡಿ ಕತೆ) ಆದರೆ ಚಾಮುಂಡಿ-ನಂಜುಂಡರ ಸಂವಾದ ಚೇತೋಹಾರಿಯಾಗಿದೆ. ಇದಕ್ಕೂ ಗೀಜಗಗಳ ಕತೆಗೂ ಇರುವ ಸಾಮ್ಯ ಬೆರಗುಂಟುಮಾಡುತ್ತದೆ. ಇಲ್ಲಿನದು ಸುಖಾಂತ್ಯ. ಜಾತಿ ಆಚರಣೆ ಮೇಲೆ ಬೆಳಕು ಚೆಲ್ಲುವ ಇಲ್ಲಿನ ಪ್ರಸಂಗ ವಿಸ್ತೃತ ವಿಶ್ಲೇಷಣೆಗೆ ಒಳಪಡಬೇಕಿದೆ.

ಚೆಲುವ-ವರನಂದಿಯವರ ಪ್ರೇಮಕತೆ ಓದಲು, ಕೇಳಲು ಸೊಗಸಾಗಿದೆ. ಅಂತರಧರ್ಮೀಯ ವಿವಾಹ ಮತ್ತು ಹಿಂದೂ ಆಚರಣೆಯ ಮೇಲ್ಮೆ (ಇಲ್ಲಿನ ಗಂಡ ಹಿಂದು, ಹೆಂಡತಿಯ ಮುಸ್ಲಿಂ ಸ್ಥಾನಮಾನ, ವರ್ತನೆಗಳಿಂದ) ಇಲ್ಲಿ ಗಮನ ಸೆಳೆಯುತ್ತದೆ. ಈ ಲೇಖನದ ಲೇಖಕ ಸಿ. ಕೆ. ಪರಶುರಾಮಯ್ಯ ''ಇಂಥ ವಿಚಿತ್ರ ಕತೆ ಹೇಗೆ ಹುಟ್ಟಿತೋ ತಿಳಿಯದು'' ಎನ್ನುತ್ತಾರೆ. ಗಂಡು-ಹೆಣ್ಣಿನ ನಡುವಿನ ಪ್ರೇಮದಲ್ಲಿ ವಿಚಿತ್ರ ಎಲ್ಲಿ ಬಂತು? ''ಮೇಲು ಕುಲದೋರಿಗೆ ನಾನು ಸೇರಿದೆ'' ಎಂಬ ವರನಂದಿಯ ಮಾತು ಸಮಾಜಪ್ರಣೀತ ಜಾತಿ ಕುರಿತದ್ದೋ, ನಿಸರ್ಗದತ್ತ

**ಏನೇ ಮಿತಿಗಳಿದ್ದರೂ ನಲವತ್ತು ವರ್ಷಗಳ ಹಿಂದೆಯೇ ಇಷ್ಟು ದೊಡ್ಡ ಪ್ರಮಾಣದ ಸಮ್ಮೇಳನ, ಸಂಘಟನೆ, ಗ್ರಂಥ ರೂಪಿಸಿರುವುದು ಅದ್ಭುತ ಸಾಧನೆಯೇ ಸರಿ. 'ಜಾನಪದ' ಎಂದರೆ ಅದೇನು, ಅದರಲ್ಲೇನಿದೆ, ಎಂಬ ಮಡಿವಂತಿಕೆಯ ಪ್ರಶ್ನೆಗಳು ಏಳುತ್ತಿದ್ದ ಆ ಕಾಲದಲ್ಲಿ ಹಲವು ವಿದ್ವಾಂಸರಿಂದ ಬರೆಸಿ, ಸಂಪಾದಿಸಿ, ಸಂಗ್ರಹಿಸಿ ಇಷ್ಟು ದೊಡ್ಡ ಕೃತಿ ಸಿದ್ಧಪಡಿಸಿರುವ ಸಂಪಾದಕರ ಶ್ರಮ ಅಮೂಲ್ಯವಾದ್ದು. ಜಾನಪದ ಆಸಕ್ತರಿಗೆ, ಶಾಲೆ, ಕಾಲೇಜು, ವಿಶ್ವವಿದ್ಯಾಲಯಗಳ ವಿದ್ಯಾರ್ಥಿಗಳಿಗೆ, ಸಂಶೋಧನೆ ಕೈಗೊಳ್ಳುವವರಿಗೆ ಮೂಲ ಮಾತೃಕೆರೂಪದ ಆಕರ ಗ್ರಂಥವಿದು ಎನ್ನುವುದೇ ಈ ಕೃತಿಯ ಹೆಗ್ಗಳಿಕೆ.**

ಡಾ|| ಎಸ್. ಪ್ರಸಾದಸ್ವಾಮಿ

ಗಂಡು-ಹೆಣ್ಣಿನ ಭೇದದ ಪ್ರಶ್ನೆಯೋ ? ಅದೇನೇ ಇದ್ದರೂ ಇದೊಂದು ಅಪೂರ್ವ ಕತೆ.

ಇದೇ ಲೇಖನದ ಗಂಗೆ-ಗೌರಿ ಜಗಳ (ಅಂಬಿಗರ ಗಂಗ) ಪುನರಾವರ್ತನೆ ಎನಿಸುತ್ತದೆ. ಸಂಪಾದಕರು ಈ ಬಗೆಯ ಪುನರಾವರ್ತನೆಗಳ ಕಡೆ ಗಮನಹರಿಸಿ ಸಂಕಲನವನ್ನು ಚುರುಕುಗೊಳಿಸಿದ್ದಲ್ಲಿ (ವಸ್ತು, ಭಾವ, ಪುಟಗಳ) ಗ್ರಂಥ ಇನ್ನಷ್ಟು ಮಹತ್ವ ಪಡೆಯುತ್ತಿತ್ತು. 'ಅರ್ಜುನಜೋಗಿ' ಕತೆ ರಸಭರಿತವಾಗಿದೆ; ಬದುಕು, ಲಿಂಗ, ವ್ಯವಸ್ಥೆ, ಕಾಲ ಸಂದರ್ಭಗಳನ್ನು ಮೀರಿದ 'ಮಾನವಸಹಜ ತುಡಿತ' ಅದ್ಭುತವಾಗಿ ಹೊಮ್ಮಿದೆ.

ತುಳು ಜಾನಪದ ಪರಿಚಯ ಮಾಡಲೆತ್ನಿಸುವ ಅಮೃತ ಸೋಮೇಶ್ವರರ ಲೇಖನ ಸುಮ್ಮನೆ ಉದ್ದವಾಗಿದೆ. ಕನ್ನಡದಲ್ಲಿಯೇ ಪದ್ಯಗಳನ್ನು ನೀಡಿದ್ದರೆ ಸ್ವಾರಸ್ಯವಾದರೂ ದಕ್ಕುತ್ತಿತ್ತು ಎನಿಸುತ್ತದೆ. ಅದೇ ರೀತಿ ಕೆ. ಸುಬ್ಬರಾಮಪ್ಪನವರ 'ತೆಲುಗು ಜನಪದ ಸಾಹಿತ್ಯ' ಲೇಖನ ಏನನ್ನೂ ಹೇಳುವುದಿಲ್ಲ.

ಸಿ. ಜಿ. ಪುರುಷೋತ್ತಮರ 'ಕನ್ನಡ ಜನಪದ ಗೀತೆಗಳ ಸಂಸ್ಕೃತ ಭಾಷಾಂತರ' ಲೇಖನದಲ್ಲಿ ಸತ್ಯವೊಂದು ದಾಖಲಾಗಿದೆ; 'ಸುಮಾರು ಎರಡು ಸಾವಿರದ ಐನೂರು ವರ್ಷಗಳ ಹಿಂದೆಯೇ ಸಂಸ್ಕೃತ ಸಾಮಾನ್ಯಜನರ ಭಾಷೆಯಾಗಿರಲಿಲ್ಲ'. ಮತ್ತೊಂದು ಉಲ್ಲೇಖ : ಉಲ್ಲೋಲ-ಕಲ್ಲೋಲ. ಇದು ಸರಿಯಾದ ಪ್ರಯೋಗ; ಸಾಮಾನ್ಯವಾಗಿ ಅಲ್ಲೋಲಕಲ್ಲೋಲ ಎಂಬ ತಪ್ಪು ಪ್ರಯೋಗವಿದೆ. ಅಲ್ಲದೆ 'ಸಂಸ್ಕೃತ ಭಾಷೆ ಮಣ್ಣನ್ನೇ ಮರೆತಿದೆ. ಆದ್ದರಿಂದ 'ಭೂಮಿಸೂಕ್ತ'ವಾದ ಜಾನಪದ ಗೀತೆ ಹೊಮ್ಮುವುದಾದರೂ ಹೇಗೆ ಸಾಧ್ಯ?' ಎಂಬ ಪ್ರಶ್ನೆ ಲೇಖಕರ ಅರಿವಿನ ವಿಸ್ತಾರವನ್ನೂ ಸೂಚಿಸುತ್ತದೆ. ಹಾಗಾಗಿ ಕೆಲ ಉತ್ತಮ ಮಾಹಿತಿಗಳನ್ನೊಳಗೊಂಡಿರುವ ಲೇಖನವಿದು.

ಮರಾಠಿ ಜಾನಪದ ಕುರಿತ ಲೇಖನ ತೀರಾ ಸಾಮಾನ್ಯ. ಹಿಂದಿ ಜಾನಪದ ಕುರಿತ ಲೇಖನ ಮಾಹಿತಿಯುಕ್ತ, ಆದರೆ ಒಂದೆರಡು ಉಲ್ಲೇಖ, ಅದರ ಅನುವಾದ ಬೇಕಿತ್ತು ಎನಿಸುತ್ತದೆ.

ಕೋ.ಚೆ. ಅವರ ಲೇಖನದಲ್ಲಿ ಹೊಸತೇನೂ ಇಲ್ಲ; ಕೇವಲ ಪುನರಾವರ್ತನೆ. ಅಲ್ಲದೆ ಥ್ಯಾಂಕ್ಸ್ ಎಂಬ ಶಬ್ದದ ಬಳಕೆ ಬೇರೆ! ಎಲ್ಲ ದೃಷ್ಟಿಯಿಂದಲೂ ಇದು ತೀರಾ ಸಾಮಾನ್ಯ ಲೇಖನ. ಹೇಳಿದ್ದನ್ನೇ (ಅವರೇ, ಇದೇ ಲೇಖನದಲ್ಲಿಯೇ) ಮತ್ತೆ ಮತ್ತೆ ಹೇಳಿದ್ದಾರೆ. ಹಾಗಾಗಿ ಕೇವಲ ಶಬ್ದಗಳ ಮೆರವಣಿಗೆ, ಅಷ್ಟೆ. ಅಲ್ಲದೆ ಇದೂ ಸೇರಿದಂತೆ ಅನೇಕ ಲೇಖನಗಳಲ್ಲಿ 'ಜಾನಪದ' ಶಬ್ದದ ಅರ್ಥ, ಈ ಸಾಹಿತ್ಯದ ಉಗಮ, ಕರ್ತೃ ವಿಚಾರಗಳು ಪುನರಾವರ್ತನೆಗೊಂಡು ಪ್ಯಾರಾ, ಅರ್ಧ ಪುಟ, ಒಂದು ಪುಟದಷ್ಟು ಜಾಗ ವ್ಯರ್ಥವಾಗಿದೆ.

ಎನ್. ಬಸವಾರಾಧ್ಯರ 'ಜಾನಪದ ಶಬ್ದಕೋಶ' ಕೊಂಚ ಭಿನ್ನ ಲೇಖನ. ಈ ಗ್ರಂಥದಲ್ಲಿ ಅಲ್ಲಿಯವರೆಗೆ ಕಾಣಿಸದ ಕೆಲ ಪದಗಳ ಉಲ್ಲೇಖ ಇದರಲ್ಲಿದೆ. ಆದರೆ ಕೇವಲ ಕೆಲವು ಶಬ್ದಗಳನ್ನು ಮಾತ್ರ ಉಲ್ಲೇಖಿಸಿರುವ ಲೇಖಕ ಅವುಗಳ ಮೂಲ, ವ್ಯುತ್ಪತ್ತಿ, ಅರ್ಥ, ಆಯಾಮ ಇತ್ಯಾದಿಗಳ ವಿಶ್ಲೇಷಣೆ ಕಡೆ ಗಮನ ನೀಡಿರುವುದಿಲ್ಲ.

'ಬಯಲು ಸೀಮೆಯ ಮದುವೆಯ ಹಾಡುಗಳು' ಲೇಖನದಲ್ಲಿ ಪದ್ಯಗಳ ಉಲ್ಲೇಖ ಕಡಿಮೆ; ವಿವರಣೆ-ಆಚರಣೆಯ ಮಾಹಿತಿಗಳೇ ಹೆಚ್ಚಾಗಿವೆ. 'ಹವ್ಯಕರ ಹಾಡುಗಳು' ಲೇಖನದಲ್ಲಿ ಉಲ್ಲೇಖಗಳು ಸೊಗಸಾಗಿವೆ. ಆದರೆ ಹವ್ಯಕರ ಮುಖ್ಯ ಕಸುಬಾದ ಅಡಕೆ ಕೃಷಿಗೆ ಸಂಬಂಧಿಸಿದ ಹಾಡುಗಳ ಉಲ್ಲೇಖವಿದ್ದಿದ್ದರೆ ಲೇಖನ ಇನ್ನಷ್ಟು ಕಳೆಗಟ್ಟುತ್ತಿತ್ತು. ಈ ಲೇಖನದಲ್ಲಿ ಸುಬ್ಬಣ್ಣನವರ ಆಯ್ಕೆ, ನಿರೂಪಣೆ, ವಿವರಣೆ ಸೂಕ್ತವಾಗಿವೆ. ವಿಶ್ಲೇಷಣೆ ಏಕಮುಖಿಯಾಗಿದ್ದು, ಮೆಚ್ಚುಗೆಯೇ ಹೆಚ್ಚು ಕಂಡುಬರುತ್ತದೆ.

'ಮಲೆನಾಡಿನ ಮದುವೆ ಹಾಡುಗಳು' ಲೇಖನ ವಿಸ್ತೃತವಾಗಿದೆ. ಆದರೆ 'ಜ್ಯೂಯಲ್ ಬಾಕ್ಸ್' ಎಂಬ ಇಂಗ್ಲಿಷ್ ಉದ್ಧೃತ ಏಕೆ? ಒಡವೆಪೆಟ್ಟಿಗೆ ಎಂದಿದ್ದರಾಗದೆ? ನಮ್ಮ ಜಾನಪದ ಅಧ್ಯಯನಕ್ಕೂ, ವಿವರಗಳಿಗೂ, ವಿಶ್ಲೇಷಣೆಗೂ ಈ ಆಂಗ್ಲ ಭೂತ ಕಾಡಿದೆ!

ಈ ಗ್ರಂಥದ ಭಾಗ ಒಂದರಲ್ಲಿನ ನಾಲ್ಕು ಲೇಖನಗಳು ವಿಶಿಷ್ಟವಾದುವು. ಕೆ.ಎಸ್.ನ. ತಮ್ಮ ರಮ್ಯ ಧಾಟಿಯಲ್ಲಿ ಬರೆದಿರುವ ಲೇಖನ ಸೊಗಸಾಗಿದೆ. ಕೋಮಲಕವಿಯ ಪ್ರೇಮದ ಉಲ್ಲೇಖಗಳು ರಂಜನೀಯವಾಗಿವೆ; ಭಾವತೀವ್ರತೆಯಿಂದ ಕೂಡಿವೆ. ಅಂತೆಯೇ ಜಿ.ಎಸ್.ಎಸ್.ರ ಲೇಖನ ಕೂಡ; ಶಿಷ್ಟ ಸಾಹಿತ್ಯದ ಈ ಸವ್ಯಸಾಚಿ ಜಾನಪದ ವಿಶ್ಲೇಷಣೆಯಲ್ಲೂ ಗಮನ ಸೆಳೆಯುತ್ತಾರೆ. ಬಿ. ಎ. ಸನದಿಯವರ ಲೇಖನದಲ್ಲಿ ಕೆಲವು ಹೊಸ ಮಾಹಿತಿಗಳಿವೆ. 'ಕರ್ಬಾಲ' ಯುದ್ಧದ ಮಾಹಿತಿಗಳು ಭಿನ್ನ ಸಂಸ್ಕೃತಿಯೊಂದನ್ನು ಅನಾವರಣ ಮಾಡಿವೆ. ಬದುಕು ಬದುಕೇ. ಜಾತಿ-ಧರ್ಮ-ಇತ್ಯಾದಿಗಳೆಲ್ಲಾ ನಂತರದವು ಎಂಬ ಸತ್ಯವನ್ನೂ, ಹಾಗೆಯೇ ಜೀವನ ಪ್ರೇಮವನ್ನು ಈ ಲೇಖನ ಹೊರಹೊಮ್ಮಿಸಿದೆ.

ಜಿ. ಎಸ್. ಸಿದ್ಧಲಿಂಗಯ್ಯನವರ ಲೇಖನ ಸಮಗ್ರವಾಗಿದೆ. ವಿಶ್ಲೇಷಣೆಯಲ್ಲಿ ನಾವೀನ್ಯತೆಯಿದೆ; ಚಿಕಿತ್ಸಕ ನೋಟವಿದೆ. ಆದರೆ ಈ ಕೇಳುಗಬ್ಬವನ್ನು 'ಶ್ರವಣ' ಕಾವ್ಯ ಎಂದಾಗ ಇರಸುಮುರಸಾಗುತ್ತದೆ. ಅಲ್ಲದೆ ಜಾನಪದ ಸಾಹಿತ್ಯ ಎಲ್ಲರದು; ಇದನ್ನು ಕೇಳುವ, ಹಾಡುವ ಅವಕಾಶ ಎಲ್ಲರಿಗೂ ಇತ್ತು ಎನ್ನುವ ಮಾತು ಹುಬ್ಬೇರಿಸುವಂತೆಯೂ ಮಾಡುತ್ತದೆ. ಸಾವಿರ ವರ್ಷಗಳ ಹಿಂದಾಗಲಿ, ಈಗಾಗಲಿ, ಮುಂದಿನ ನೂರಾರು ವರ್ಷಗಳಲ್ಲಿ ಆಗಲಿ 'ಸಮಾನ ಅವಕಾಶ'

## ಓ ಶಿಲೆಯಂತಾದ ಹೆಣ್ಣೇ...



ಓ ಶಿಲೆಯಂತಾದ ಹೆಣ್ಣೇ
ನೀನೊಮ್ಮೆ ನಕ್ಕು ಬಿಡು
ಶಿಲೆಗಳೆಲ್ಲಾ
ಜೀವ ತುಂಬಿಕೊಳ್ಳಲಿ

ಶಿಲೆಯೊಳಗೆ ಬಂಧಿಯಾದ ಬಿಂಬಗಳೇ
ಒಮ್ಮೆ ಮೈಕೊಡವಿಕೊಳ್ಳಿ
ಬಳ್ಳಿ ತರಗೆಲೆಗಳಾಚೆ
ನೂರು ಪದರದೊಳಗವಿತಿರುವ ಸ್ವರಗಳು
ಧ್ವನಿಯ ಪಡೆದುಕೊಳ್ಳಲಿ

ಓ ಬಿಂಬದೊಳಗಿನ ಸ್ವಚ್ಛಂದ
ಹೃದಯವೇ
ಒಮ್ಮೆ ಮುಚ್ಚಿದ ರೆಪ್ಪೆಯ
ತೆರೆದು ಬಿಡು
ಕಾಯದೊಳಗಿನ ಪರಕಾಯದ
ನಿಜದ ಕಣ್ಣು ತೆರೆಯಲಿ

**ಚಿತ್ರನ್ ಮುಂಡಾಜೆ**
ಅಂಚೆ : ಕಲ್ಮಂಜ, ಬೆಳ್ತಂಗಡಿ ತಾಲೂಕು, ದಕ್ಷಿಣ ಕನ್ನಡ ಜಿಲ್ಲೆ - ೫೭೪ ೨೨೮

ಎಂಬ ಮಾತು ಭಾರತದ ಮಟ್ಟಿಗೆ ಮರೀಚಿಕೆಯೆ!

ಗ್ರಂಥದ ಎರಡನೇ ಭಾಗದಲ್ಲಿ ಮೇದಾರ ಕೇತಯ್ಯನ ಬಗ್ಗೆ, ನದಿ ಬದಲಾದ ಬಗ್ಗೆ ಹೇಳುವ 'ಸಿಂಬಿಯಾಯಿತು ಬತ್ತಿ' ಎಂಬ ಉಲ್ಲೇಖ ಅದ್ಭುತವಾಗಿದೆ. ಜಾನಪದದ ದೇಸೀಯತೆಯ ಸೊಗಸೇ ಅಂಥದು. ಅಚ್ಚ ಕನ್ನಡದ ಬನಿ, ಸೊಗಡು, ಅರ್ಥ ಈ ಬಗೆಯ ಉಲ್ಲೇಖಗಳಲ್ಲಿ ಕಾಣಸಿಗುತ್ತವೆ. 'ಬಿದರಿಗೆ ಬಂಗಾರದ ಹುಳು' ಹಿಡಿಯುವ ಪ್ರತಿಮೆ ಅಥವಾ ರೂಪಕ ಎಷ್ಟು ಚೆನ್ನಾಗಿದೆ! ಶಿಷ್ಟ ಸಾಹಿತ್ಯದ ಅಭಿವ್ಯಕ್ತಿಗಿಂತ ಯಾವುದೇ ರೀತಿಯಲ್ಲಿ ಕಡಿಮೆ ಇಲ್ಲ, ಅಲ್ಲದೆ ಈವರೆಗಿನ ಲೇಖನಗಳಲ್ಲಿ ಕಾಣಸಿಗದ ಕೆಲ ಪ್ರಯೋಗಗಳು ಇಲ್ಲಿವೆ; ಊಟಿಲ್ಲ ಎನ್ನುವ ಪದ. ಬರೆಯುವಾಗ ಇದು ಊಟವಿಲ್ಲ, ವ್ಯಾಕರಣದ ಪ್ರಕಾರ ವಕಾರಾಗಮ ಸಂಧಿ. ಆದರೆ ಉಚ್ಚಾರಣೆಯಲ್ಲಿ ಇದು ಲೋಪಸಂಧಿ. ಈ ದಿಸೆಯಲ್ಲಿ ಈ ಲೇಖನ ಅಪರೂಪದ್ದು.

ಶಿಷ್ಟ ಸಾಹಿತ್ಯದೊಡನೆ ಹೋಲಿಸುವಾಗ ಜಾನಪದ ಸಾಹಿತ್ಯದಲ್ಲಿ ಜೀವನ ವಿಮರ್ಶೆ, ವ್ಯಕ್ತಿ ತೊಳಲಾಟ, ಆಂತರಿಕ ಸಂಘರ್ಷ ಇಲ್ಲವೆನಿಸುತ್ತದೆ. ಜಾನಪದ ಸಾಹಿತ್ಯ ಇರುವ ವ್ಯವಸ್ಥೆಯನ್ನು ಒಪ್ಪಿಯೇ ಅದಕ್ಕೊಂದು ರೂಪ ಕೊಡುತ್ತದೆ (ಭಾಷೆಯ ಮೂಲಕ). ಅಲ್ಲದೆ ಇಲ್ಲಿನ ವ್ಯಕ್ತಿ ಸಮುದಾಯದ ಒಂದು ಭಾಗ ಅಥವಾ ಪ್ರತಿನಿಧಿ. ಇದು ವಿಶೇಷವೆನಿಸಿದರೂ ಇಲ್ಲಿ ವ್ಯಕ್ತಿ ಪ್ರಯತ್ನ, ವ್ಯಕ್ತಿಪ್ರತಿಭೆ ಗೌಣ.

ಬೀಸುವ, ಕುಟ್ಟುವ ಇತ್ಯಾದಿ ಹಾಡುಗಳಿಗೆ ಬೀಸೋಕಲ್ಲು, ಒನಕೆ, ರುಬ್ಬುಗುಂಡು, ಒಳಕಲ್ಲು, ಕಡೆಗೋಲು ಮೂಲ. ಹಾಗೆಯೇ ದನ ಕಾಯುವ, ಎಮ್ಮೆ ಕಾಯುವ, ಕುರಿ ಕಾಯುವ ಕ್ರಿಯೆ ಕೂಡ. ಆದರೆ ಬದಲಾದ ಹಳ್ಳಿ, ಮಹಿಳೆ, ಜೀವನಕ್ರಮಗಳನ್ನು ಗಮನಿಸಿದಾಗ ಇವು ಮಹಿಳೆಗೆ ಎಷ್ಟು ಪೂರಕ? ಬದುಕಿನ ವಿವಿಧ ಕ್ಷೇತ್ರಗಳಿಗೆ ತೆರೆದುಕೊಳ್ಳುತ್ತಿರುವ ಮಹಿಳೆ ಪುರುಷನಿಗೆ ಸರಿಸಾಟಿಯಾಗಲು ನಾಗಾಲೋಟದಲ್ಲಿರುವಾಗ ಆಕೆ ಸದ್ಯ ಮತ್ತು ಮುಂದೆ 'ಜಾನಪದಕ್ಕೆ' ಎದುರಾಗಬಹುದೆ? ಎರವಾಗಬಹುದೆ? ಗ್ರಾಮೀಣ ಕುಟುಂಬ ವ್ಯವಸ್ಥೆ ಉಳಿಯಬಹುದೆ? ಉಳಿದಿದೆಯೆ? ನಗರೀಕರಣ ಪ್ರಕ್ರಿಯೆ ಗ್ರಾಮ ಸಂಸ್ಕೃತಿಯನ್ನು ನಾಶಮಾಡಿತೋ, ಆಧುನಿಕತೆ ನೀಡಿ ಮಹಿಳೆಗೆ ವಿಶ್ರಾಂತಿ ನೀಡಿತೋ ಕಾಲವೇ ಹೇಳಬೇಕು.

ಹಾಮಾನಾ ಲೇಖನ ನಿರ್ದೇಶಕತ್ವದ ದಿಕ್ಸೂಚಿಯಂತಿದೆ. ಒಂದು ಬಗೆಯ ಬೌದ್ಧಿಕ, ಶೈಕ್ಷಣಿಕ ಹಾಗೂ ಕ್ರಮಬದ್ಧ ಅಧ್ಯಯನದ ಅಗತ್ಯವನ್ನು ಈ ಲೇಖನ ಅಪೇಕ್ಷಿಸುತ್ತದೆ; ಒತ್ತಾಯಿಸುತ್ತದೆ.

ಪರಮೇಶ ಅವರ ಲೇಖನ ಬರೀ ಪುನರಾವರ್ತನೆ. ಇಲ್ಲಿ ಉಲ್ಲೇಖಿಸಿರುವ ವೀರಾಜು ಮಗಳನ್ನು ಮೋಹಿಸಿದ್ದು ಯಾವ ಘನಕಾರ್ಯ? ಮಡದಿಯರ ಕಗ್ಗೊಲೆಯೂ ವೈಭವೀಕರಣ; ಸತಿಯರ ಪತಿಭಕ್ತಿಗಳೂ ಕಲೆಯಾಗದೆ, ಕುರುಡು ನಂಬಿಕೆಗಳನ್ನು, ಆಚರಣೆಗಳನ್ನು, ಪದ್ಧತಿಗಳನ್ನು ಪ್ರೋತ್ಸಾಹಿಸುವ ಭೂಮಿಕೆಗಳಾಗಿಬಿಡುವ ಅಪಾಯವಿದೆ. 'ಕೆರೆಗೆ ಹಾರ'ದಂತ ಲಾವಣಿ ತನ್ನೆಲ್ಲ ಕಾವ್ಯಮಯತೆ-ಪರಿಣಾಮಗಳ ಆಚೆ ಸ್ತ್ರೀವಿರೋಧಿ, ಜೀವವಿರೋಧಿ ನಿಲುವಿನದು ಅನ್ನುವುದೂ ಅಷ್ಟೇ ಸತ್ಯವಲ್ಲವೆ? ಅವೈಜ್ಞಾನಿಕ ಎನಿಸದೆ?

ಹೊನ್ನಗಂಗಪ್ಪನವರ ಲೇಖನದಲ್ಲಿ ಶಿವಗಿರಿಜೆಯರು ನಡೆಸುವ ಕುತೂಹಲದ ಚರ್ಚೆ ಗಮನ ಸೆಳೆಯುತ್ತದೆ. ದ್ರಾವಿಡ ಮತ್ತು ಆರ್ಯರ ರಕ್ತಸಂಬಂಧ, ಶಿವ, ಗಂಗೆ, ಗೌರಿಯರ ಸಂವಾದ, ತಂತ್ರ, ಕುತಂತ್ರ; ನಂಜಯ್ಯ, ದೇವೀರಿ, ಚಾಮುಂಡಿ ಇವರ ಪ್ರೇಮ, ಕಲಹ, ಪ್ರಣಯ, ದಾಂಪತ್ಯದ ವೈಪರೀತ್ಯಗಳು ಬೆರಗುಂಟುಮಾಡುತ್ತವೆ. ಈ ಬಗೆಯ ಕಾರಣಕ್ಕೇ ಇರಬೇಕು – ಶಿಷ್ಟವೋ, ಜಾನಪದವೋ ಅದು ಎರಡನೆಯದು. ಮನುಷ್ಯನ ಅನಾವರಣ ಮುಖ್ಯ; ಹಾಗಾಗಿ ಸಾಹಿತ್ಯ ಬಿಂಬಿಸುವ 'ಬದುಕು' ಅಪೇಕ್ಷಣೀಯ.

ಪದ್ಮಶ್ರೀ ಶಿವಮೂರ್ತಿಶಾಸ್ತ್ರಿಗಳ ಲೇಖನ ತೀರಾ ಸಾಮಾನ್ಯ; ಕೇವಲ ಬರೀ ಉಲ್ಲೇಖಗಳಿವೆ. ಸರಸ್ವತಿಗೌಡರ ಲೇಖನದ ಭಾಷೆ ವೀರ್ಯವತ್ತಾಗಿದೆ; ನಿರೂಪಣೆ ಮನೋಹರವಾಗಿದೆ. ಉತ್ತರ ಕರ್ನಾಟಕದ ಜನಪದರ ಬದುಕು ಆಶಯ ಸಮರ್ಥವಾಗಿ ಹೊಮ್ಮಿದೆ.

ಎಸ್. ವಿ. ರಂಗಣ್ಣನವರ ಲೇಖನ, ಅಲ್ಲಿನ ಉಲ್ಲೇಖಗಳು, ಅದರ ನಿರೂಪಣೆ, ವಿಶಿಷ್ಟತೆ, ಸೊಬಗು, ಭಿನ್ನತೆಯಿಂದ ಕಂಗೊಳಿಸುತ್ತದೆ. ಪಂಡಿತರಾದ ರಂಗಣ್ಣನವರ ಆರ್ದ್ರ ಗ್ರಹಿಕೆ ಮತ್ತು ಅಭಿವ್ಯಕ್ತಿ ಈ ಲೇಖನಕ್ಕೆ ಮಹತ್ವದ ಲಕ್ಷಣ ನೀಡಿವೆ. ಆದರೆ ಆ ಸಂದರ್ಭದಲ್ಲಿ ದೊಡ್ಡ ವಿದ್ವಾಂಸರೆನಿಸಿದ್ದ ತಿಪ್ಪೇರುದ್ರಸ್ವಾಮಿಯವರ ಲೇಖನ ತೀರಾ ಸಪ್ಪೆ. ಅನ್ವೇಷಕ ನೋಟ, ಹೊಸ ತರಹದ ವಿಶ್ಲೇಷಣೆ, ರಸಾನಂದ ನೀಡಬಹುದಾದ ಆಯ್ಕೆಗಳಿಲ್ಲದ ತೀರಾ ಸಾಮಾನ್ಯ ಲೇಖನವಿದು.

ಇಡೀ ಗ್ರಂಥದಲ್ಲಿ ಅಪರೂಪದ ಲೇಖನವೆಂದರೆ ಪಿ. ಆರ್. ತಿಪ್ಪೇಸ್ವಾಮಿಯವರದು. ರಮ್ಯ, ಕುತೂಹಲಕರ. ಕ್ಷೇತ್ರಕಾರ್ಯದ ಅನುಭವದ ವಿಸ್ತೃತ ವಿವರಗಳು ಎಲ್ಲೂ ಬೇಸರ ತರಿಸುವುದಿಲ್ಲ. ಸಂಗ್ರಹಕಾರನ ಕಷ್ಟ, ಎದುರಿಸಬೇಕಾದ ಇಕ್ಕಟ್ಟಿನ ಸನ್ನಿವೇಶಗಳು, ಜಾತಿ-ಕುಲಗಳು, ಆಚರಣೆಗಳ ಸಂದರ್ಭದಲ್ಲಿ ಉಂಟಾಗಬಹುದಾದ ಇರಸು-ಮುರಸುಗಳು, ಅಲೆದಾಟ, ಪರೀಕ್ಷೆ, ಸಾಂತ್ವನ, ವೈಫಲ್ಯ-ಸಾಫಲ್ಯ, ನೋವು-ನಲಿವುಗಳ ಸಂಗ್ರಹಾಲಯ ಈ ಲೇಖನ. ಕ್ಷೇತ್ರಕಾರ್ಯ ಕುರಿತ ಒಂದು ಬಗೆಯ ಪ್ರಾಯೋಗಿಕ ತರಗತಿಯಂತೆ, ವರದಿಯಂತೆ ಈ ಲೇಖನವಿದೆ. ಸಂಗ್ರಹಕಾರನಿಗೆ ಇರಬೇಕಾದ ತಾಳ್ಮೆ, ವಿವೇಚನೆ, ಯೋಜನೆ, ನಯ, ಅನುನಯ ಮೊದಲಾದ ಅಗತ್ಯ ಗುಣಗಳ ಸಿದ್ಧಾಂತ, ಪ್ರಯೋಗ ಎರಡೂ ಈ ಲೇಖನದಲ್ಲಿ ಅಡಕಗೊಂಡಿವೆ, ಗೋಚರಿಸುತ್ತವೆ. ಮಧ್ಯ ಕರ್ನಾಟಕದ ಅನೇಕ ಊರು-ವ್ಯಕ್ತಿಗಳ ವರ್ಣನೆ, ಅವರ ಕಲೆಯ ಸಂಗ್ರಹಣೆ, ವಿಶ್ಲೇಷಣೆಗಳು ಅಚ್ಚಗನ್ನಡದಲ್ಲಿ, ಲಘುಧಾಟಿಯಲ್ಲಿ ದಾಖಲಾಗಿವೆ. ಕಲಾವಿದನ ದೃಷ್ಟಿಕೋನದಲ್ಲಿ ವ್ಯಂಜಿಸಲ್ಪಟ್ಟಿರುವ ಇಲ್ಲಿನ ವಿವರಗಳು ಅಪೂರ್ವವಾದುವು.

ಜಾನಪದ ಹಳೆಯದನ್ನೇ ಸ್ಥಿರೀಕರಿಸುತ್ತದೆ ಎಂಬ ಮಾತಿದೆ. ಆದರೆ ಪರ್ಯಾಯ ಜ್ಞಾನಕ್ಕೆ ಹುಡುಕಾಡಿದ ಪ್ರಯತ್ನಗಳು ಇಲ್ಲಿನ ಕೆಲ ಪದ್ಯಗಳಲ್ಲಿ ಕಂಡುಬರುತ್ತವೆ. ''ಕಾಸಿಗೆ ಹೋಗಲಿಕ್ಕೆ ಏಸೊಂದು ದಿನಬೇಕು, ತವರಿಗೆ ಒಂದು ತಾಸಿನ ಹಾದಿ'' ಎಂಬ ಮಾತು ಕಾಶಿಯ ಪಾವಿತ್ರ್ಯತೆ, ಅಗಮ್ಯ, ಕಷ್ಟ ಹೇಳುತ್ತಲೇ ತವರಿನ ಅಮೂಲ್ಯತೆ, ಸುಭಗತೆ, ಸಂತೋಷ, ಪ್ರೇಮ, ಮಮತೆಗಳನ್ನು ಸೂಚಿಸುವ ಮೂಲಕ ಭಕ್ತಿ ಮತ್ತು ಪಾವಿತ್ರ್ಯಕ್ಕಿಂತ ಸಂಬಂಧ ಮತ್ತು ಸಂತೋಷ-ನೆಮ್ಮದಿಗಳೇ ಹಳ್ಳಿಗರಿಗೆ, ಅದರಲ್ಲೂ ಹೆಣ್ಣಿಗೆ ಮುಖ್ಯ ಎಂಬುದನ್ನು, ಆ ಮೂಲಕ ಪಾರಂಪರಿಕ ಆಚರಣೆಗಳನ್ನು (ಧಾರ್ಮಿಕ) ನಿರಾಕರಿಸುವ, ಪರ್ಯಾಯವನ್ನು ಕನಸುವ ಪ್ರಯತ್ನವನ್ನೂ ಈ ಬಗೆಯ ಹಾಡುಗಳಲ್ಲಿ ನೋಡಬಹುದು.

ಇಲ್ಲಿನ ಬಹುತೇಕ ಲೇಖನಗಳ ಶುರು/ಪೀಠಿಕೆ ಒಂದೇ ಬಗೆಯದು. ಇಡೀ ಗ್ರಂಥವನ್ನು ಒಮ್ಮೆಲೇ ಓದುವವರಿಗೆ ಇದು ಪುನರಾವರ್ತನೆಯಾಗಿದೆ ಎನಿಸುತ್ತದೆ. ಸಂಪಾದಕರು ಇದನ್ನು ಗಮನಿಸಿ ಸಂಕಲಿಸಿದ್ದಲ್ಲಿ ಚೆನ್ನಾಗಿರುತ್ತಿತ್ತು. ಎರಡನೇ ಮುದ್ರಣದಲ್ಲಾದರೂ ಇದು ಆಗಬೇಕಿತ್ತು. ಪುಟಗಳು ಕಡಿಮೆ ಆಗುತ್ತಿದ್ದವು; ಓದುಗರ ವೇಳೆಯೂ ಮಿಗುತ್ತಿತ್ತು. ದೇಶಾವರಿ ಬಗೆಯ ಭಾಗಗಳನ್ನು ಗುರುತಿಸಿ ತೆಗೆದಿದ್ದರೆ ಲೇಖನಗಳಿಗೆ ಸಂಗ್ರಾಹ್ಯಗುಣ, ಸೂಕ್ಷ್ಮತೆ ದಕ್ಕುತ್ತಿತ್ತು. ಬಿಡಿ ಲೇಖನಗಳಾಗಿದ್ದರೆ ಈ ಸಮಸ್ಯೆ ಇರುತ್ತಿರಲಿಲ್ಲ.

ಆದರೆ ಇಷ್ಟು ದೊಡ್ಡ ಗಾತ್ರದ ಕೃತಿಯಲ್ಲಿ, ಇಡಿಕಿರಿದ ಲೇಖನಗಳಲ್ಲಿ 'ಜಾನಪದದ ಭಾಷಿಕ ವಿಶ್ಲೇಷಣೆ' ಕುರಿತ-ಕೈಗೊಂಡ ಒಂದೇ ಒಂದು ಲೇಖನವೂ ಇಲ್ಲದಿರುವುದು ಬೆರಗು, ಬೇಸರ ಎರಡನ್ನೂ ಉಂಟುಮಾಡುತ್ತದೆ. ಶಿಷ್ಟ ಸಾಹಿತ್ಯದಲ್ಲಿ ಕಂಡುಬರುವ ಸಂಸ್ಕೃತದ ಪ್ರಭಾವ, ಬಾಹುಳ್ಯ ಜಾನಪದದಲ್ಲಿಲ್ಲ. ಇಲ್ಲಿ ಕನ್ನಡದ ಬಗೆ, ಬನಿ, ಸೊಗಡು ಮೇಲ್ನೋಟಕ್ಕೇ ರಾಚುತ್ತದೆ. ಭಾಷಾವಿಜ್ಞಾನದ ದೃಷ್ಟಿಯಿಂದಲೂ ಈ ಬಗೆಯ ವಿಶ್ಲೇಷಣೆಯ ಅಗತ್ಯವಿತ್ತು. ಕಾವ್ಯಮೀಮಾಂಸೆಗೂ ಕೈಚಾಚಬಹುದಿತ್ತು. ಜೀವನ ವಿಮರ್ಶೆಯ ಉಪಾಂಗಗಳನ್ನು ಗಮನಿಸಬಹುದಿತ್ತು. ಆದರೆ ಅದಾವುದೂ ಇಲ್ಲದೆ ಕೇವಲ ವಿವರಣೆ, ಮೆಚ್ಚುಗೆ ಮಾತ್ರ ಇವೆ.

ಬಹುತೇಕ ಜಾನಪದ ಹಾಡುಗಳಲ್ಲಿ 'ಶಿವನೇ' ದೈವ. ಈ ಕೃತಿಗೆ ಸೀಮಿತಗೊಂಡಂತೆ ಅನ್ಯ ದೈವಗಳ ಉಲ್ಲೇಖ ಕಡಿಮೆಯೇ. ಮೇಲ್ಜಾತಿ ಲೇಖಕರೇ ಬರೆದಿರುವುದು ಇದಕ್ಕೆ ಕಾರಣವಿದ್ದಿರಬಹುದು. ಹಾಗಾಗಿ ಧಾರ್ಮಿಕ ವೈವಿಧ್ಯತೆ, ಅದರ ಭಿನ್ನ ಅಭಿವ್ಯಕ್ತಿ ಇಲ್ಲಿನ ಲೇಖನಗಳಲ್ಲಿ ಅಪರೂಪ. ನಾಲ್ವರು ಮಹಿಳೆಯರು ಮಾತ್ರ ಬರೆದಿರುವುದರಿಂದ ಅಭಿವ್ಯಕ್ತಿಯ ಬಹುಮುಖತೆ, ಗ್ರಹಿಕೆಯ ಆಯಾಮ ಕಾಣೆಯಾಗಿವೆ ಎನಿಸುತ್ತದೆ.

ಏನೇ ಮಿತಿಗಳಿದ್ದರೂ ನಲವತ್ತು ವರ್ಷಗಳ ಹಿಂದೆಯೇ ಇಷ್ಟು ದೊಡ್ಡ ಪ್ರಮಾಣದ ಸಮ್ಮೇಳನ, ಸಂಘಟನೆ, ಗ್ರಂಥ ರೂಪಿಸಿರುವುದು ಅದ್ಭುತ ಸಾಧನೆಯೇ ಸರಿ. 'ಜಾನಪದ' ಎಂದರೆ ಅದೇನು, ಅದರಲ್ಲೇನಿದೆ, ಎಂಬ ಮಡಿವಂತಿಕೆಯ ಪ್ರಶ್ನೆಗಳು ಏಳುತ್ತಿದ್ದ ಆ ಕಾಲದಲ್ಲಿ ಹಲವು ವಿದ್ವಾಂಸರಿಂದ ಬರೆಸಿ, ಸಂಪಾದಿಸಿ, ಸಂಗ್ರಹಿಸಿ ಇಷ್ಟು ದೊಡ್ಡ ಕೃತಿ ಸಿದ್ಧಪಡಿಸಿರುವ ಸಂಪಾದಕರ ಶ್ರಮ ಅಮೂಲ್ಯವಾದ್ದು. ಜಾನಪದ ಆಸಕ್ತರಿಗೆ, ಶಾಲೆ, ಕಾಲೇಜು, ವಿಶ್ವವಿದ್ಯಾಲಯಗಳ ವಿದ್ಯಾರ್ಥಿಗಳಿಗೆ, ಸಂಶೋಧನೆ ಕೈಗೊಳ್ಳುವವರಿಗೆ ಮೂಲ ಮಾತೃಕೆರೂಪದ ಆಕರ ಗ್ರಂಥವಿದು ಎನ್ನುವುದೇ ಈ ಕೃತಿಯ ಹೆಗ್ಗಳಿಕೆ.

ಡಾ|| ಎಸ್. ಪ್ರಸಾದಸ್ವಾಮಿ
ರಿಜಿಸ್ಟ್ರಾರ್, ಕರ್ನಾಟಕ ಜಾನಪದ ಅಕಾಡಮಿ
ಕನ್ನಡ ಭವನ, ಜೆ. ಸಿ. ರಸ್ತೆ, ಬೆಂಗಳೂರು - ೫೬೦ ೦೦೨

# ಭೂಕಂಪನ ದುರಂತದ ಹೈಟಿ ಅಮೆರಿಕಾ ಆಕ್ರಮಣದಲ್ಲಿ!



**ಪ್ರ**ಪಂಚದ ಎರಡು ಬೇರೆ ಬೇರೆ ಭಾಗಗಳಲ್ಲಿರುವ ದೇಶಗಳಲ್ಲಿ ಸಂಭವಿಸಿರುವ, ಸಂಭವಿಸುತ್ತಿರುವ ದುರಂತ ಗಳತ್ತ ಗಮನಹರಿಸೋಣ. ಒಂದು ಉತ್ತರ ಅಮೆರಿಕಾ ಖಂಡದ ಆಗ್ನೇಯ ದಿಕ್ಕಿನಲ್ಲಿರುವ ಕೆರಿಬಿಯನ್ ದ್ವೀಪ ಸ್ತೋಮಗಳಲ್ಲಿರುವ ಒಂದು ಪುಟ್ಟ ದೇಶ – ಹೈಟಿ; ಇನ್ನೊಂದು ಆಫ್ರಿಕಾ ಖಂಡದಲ್ಲಿರುವ ಅತಿದೊಡ್ಡ ಭೂಭಾಗ ಕಾಂಗೋ. ಭೂಮಧ್ಯರೇಖೆ ಇಲ್ಲಿ ಹಾದು ಹೋಗುತ್ತದೆ. ಎರಡೂ ದೇಶಗಳು ಸಾಮ್ರಾಜ್ಯಶಾಹಿಗಳ ತೀವ್ರ ಶೋಷಣೆಗೀಡಾಗಿದ್ದು ಜರ್ಜರಿತಗೊಂಡಿವೆ. ಸ್ವತಂತ್ರ ರಾಷ್ಟ್ರಗಳಾಗಿದ್ದರೂ ಅಂತಃಕಲಹ, ಮುಂದುವರಿದ ಶೋಷಣೆ, ಜೊತೆಗೆ ನೈಸರ್ಗಿಕ ದುರಂತಗಳಿಂದ ನಿರಂತರವಾಗಿ ಪರಿತಪಿಸುತ್ತಿವೆ. ಎರಡರದ್ದೂ ದುರಂತ ಕತೆಯೇ. ಸಂಕಷ್ಟದಲ್ಲಿರುವವರು ಅಮಾಯಕ ಜನ. ಸಾವುನೋವುಗಳಂತೂ ದಿನನಿತ್ಯದ ವಿದ್ಯಮಾನ. ಇಷ್ಟಾದರೂ ಸಾಮ್ರಾಜ್ಯಶಾಹಿ ಶೋಷಣೆ ಮಾತ್ರ ಮುಂದುವರಿಯುತ್ತಿದೆ. ಅವುಗಳ ನೈಸರ್ಗಿಕ ಸಂಪತ್ತು ಲೂಟಿಯಾಗುತ್ತಿದೆ.

ಹೊಸವರ್ಷದ ಪ್ರಾರಂಭದ ದಿನಗಳಲ್ಲಿಯೇ (ಜನವರಿ ೧೨, ೨೦೧೦) ಕೆರಿಬಿಯನ್ ದ್ವೀಪ ಹೈಟಿ ಅತ್ಯಂತ ಭೀಕರವಾದ ಭೂಕಂಪನಕ್ಕೀಡಾಯಿತು. ಕೆಲವೇ ಸೆಕೆಂಡುಗಳಲ್ಲಿ ಅದು ೨೦೦,೦೦೦ಕ್ಕೂ ಹೆಚ್ಚು ನಾಗರಿಕರನ್ನು ಬಲಿ ತೆಗೆದುಕೊಂಡಿತು. ಇನ್ನೂ ಸುಮಾರು ೩೦೦,೦೦೦ ಜನರು ಮನೆ, ಮಠ, ಸರ್ವಸ್ವವನ್ನೂ ಕಳೆದುಕೊಂಡು ನಿರಾಶ್ರಿತರಾಗಿದ್ದಾರೆ. ರಿಕ್ಟರ್ ಮಾಪನದಲ್ಲಿ ೭ ಅಂಕಗಳ ಕಂಪನಕ್ಕೀಡಾದ ಈ ಪುಟ್ಟ ದೇಶದ ಸರಕಾರಿ ವಲಯಗಳ ಪ್ರಕಾರ ಅಂತಿಮವಾಗಿ ಲೆಕ್ಕಹಾಕುವಾಗ ಸಾವಿನ ಸಂಖ್ಯೆ ೫೦೦,೦೦೦ಕ್ಕೇರೀತೆಂದು ಅಂದಾಜು. ಒಟ್ಟು ಜನಸಂಖ್ಯೆ ೬೫ ಲಕ್ಷ. ಹದಿನೇಳನೇ ಶತಮಾನದಲ್ಲಿ ಫ್ರೆಂಚರ ವಶದಲ್ಲಿದ್ದ ಹೈಟಿ ಸ್ವಾತಂತ್ರ್ಯ ಗಳಿಸಿಕೊಂಡದ್ದು ೧೯ನೇ ಶತಮಾನದ ಪ್ರಾರಂಭದಲ್ಲಿ. ಸುಮಾರು ಅರ್ಧ ಶತಮಾನ ಸ್ವಯಂಘೋಷಿತ ರಾಜಾಶ್ರಯದಲ್ಲಿದ್ದ ದೇಶ ೧೯೧೫ರಲ್ಲಿ ಅಮೆರಿಕಾದ ಆಶ್ರಯ ಪಡೆದುಕೊಂಡಿತು. ಈ ಅವಧಿಯಲ್ಲಿ ತೀವ್ರ ಅಂತಃಕಲಹಕ್ಕೀಡಾದ ದೇಶ ೨೦೦೪ರಲ್ಲಿ ವಿಶ್ವಸಂಸ್ಥೆಯ ಆಶ್ರಯಕ್ಕೆ ಬಂದಿತು. ಸುಮಾರು ೯,೦೦೦ ಶಾಂತಿ ಸೈನಿಕರು, ೨,೦೦೦ ಜನ ನಾಗರಿಕ ಅಧಿಕಾರಿಗಳು ವಿಶ್ವಸಂಸ್ಥೆಯ ಪರವಾಗಿ ಆಡಳಿತ ನಿರ್ವಹಿಸುತ್ತಿದ್ದರು. ಹೆಚ್ಚಿನ ನೈಸರ್ಗಿಕ ಸಂಪನ್ಮೂಲಗಳನ್ನು ಹೊಂದಿರದ ಈ ದ್ವೀಪದಲ್ಲಿ ಈಚೆಗೆ ತೈಲ ನಿಕ್ಷೇಪ ಪತ್ತೆಯಾಗಿದೆ. ಹಾಗಾಗಿ ಅಮೆರಿಕಾಗೆ ಹೆಚ್ಚಿನ ಆಸಕ್ತಿ. ಕ್ರಿಯಾಶೀಲ ಅಗ್ನಿ ಪರ್ವತಗಳನ್ನು ಹೊಂದಿರುವ ಈ ಬಡದೇಶದ ಹೆಚ್ಚಿನ ಜನರು ಆಫ್ರಿಕಾದ ಗುಲಾಮರ ಬೀಡು. ಯಾವುದೇ ಅಭಿವೃದ್ಧಿಯನ್ನು ಕಾಣದ ಈ ದೇಶದ ಜನ ಕಬ್ಬು ಮತ್ತು ಕಾಫಿ ಪ್ಲಾಂಟೇಶನ್ನುಗಳಲ್ಲಿ ದುಡಿದು ಜೀವನ ಸಾಗಿಸುತ್ತಾರೆ.



ಜನವರಿ ತಿಂಗಳ ಭೂಕಂಪನವನ್ನು ವಿಶ್ವಸಂಸ್ಥೆ ಶತಮಾನದ ಅತಿದೊಡ್ಡ ದುರಂತ ಎಂದು ಬಣ್ಣಿಸಿದೆ. ಪ್ರಪಂಚದ ನಾನಾ ಭಾಗಗಳಿಂದ ಸಂಕಷ್ಟಕ್ಕೀಡಾಗಿರುವ ಜನತೆಗೆ ನೆರವು ಹರಿದುಬಂದಿದೆ. ನೆರೆಯ ರಾಷ್ಟ್ರವಾಗಿರುವ ಅಮೆರಿಕಾ ನೀಡಿರುವ ನೆರವು ೧೦೦ ಮಿಲಿಯ ಡಾಲರುಗಳು ಮಾತ್ರ. ಇದರ ಬಗ್ಗೆ ಯೂರೋಪಿಯನ್ ದೇಶಗಳು ಕೂಡ ಅಸಮಾಧಾನ ವ್ಯಕ್ತಪಡಿಸಿವೆ. ಅದಕ್ಕಿಂತ ಮಿಗಿಲಾಗಿ, ಅಮೆರಿಕಾ ಈ ನೈಸರ್ಗಿಕ ದುರಂತವನ್ನು ನೆಪವಾಗಿರಿಸಿಕೊಂಡು ಹೈಟಿಯನ್ನು ವಸ್ತುಶಃ ಆಕ್ರಮಿಸಿಕೊಂಡಿದೆ. ದುರಂತ ಸಂಭವಿಸಿದ ಕೆಲವೇ ಗಂಟೆಗಳಲ್ಲಿ ಅಮೆರಿಕಾದ ಸರಕಾರ ೧೩,೦೦೦ ಮಂದಿ ಸೈನಿಕರನ್ನು ರವಾನಿಸಿದೆ. ಈ ಸೈನಿಕರು ಅತ್ಯಾಧುನಿಕ ಆಯುಧಗಳಿಂದ ಸಜ್ಜಿತರಾಗಿದ್ದಾರೆ. ಪ್ರಪಂಚದ ಎಲ್ಲ ಜನರೂ ಅಮೆರಿಕಾದ ಈ ಕ್ರಮದಿಂದ ಬೇಸರಗೊಂಡಿದ್ದಾರೆ. ಯೂರೋಪಿಯನ್ ಯೂನಿಯನ್ನಿನ ದೇಶಗಳನ್ನು ಒಳಗೊಂಡಂತೆ ಪ್ರಪಂಚದ ಎಲ್ಲ ದೇಶಗಳೂ ಅಮೆರಿಕಾದ ಈ ಕ್ರಮದ ಬಗ್ಗೆ ಅಸಮಾಧಾನ ವ್ಯಕ್ತಗೊಳಿಸಿವೆ. ಅಮೆರಿಕಾ ಸರಕಾರ ಹೇಳಿಕೆ ಪ್ರಕಾರ ಯೋಧರು ಸಂತ್ರಸ್ತರಿಗೆ ನೆರವು ನೀಡುವುದರ ಜೊತೆಗೆ, ಕಳ್ಳತನ ಸುಲಿಗೆ ನಡೆಯದಂತೆ ಉಸ್ತುವಾರಿ ನೋಡಿಕೊಳ್ಳುತ್ತಾರೆ. ಇದೊಂದು ಕುಂಟು ನೆಪ ಎನ್ನುವುದು ಎಲ್ಲರಿಗೂ ತಿಳಿದಿದೆ. ಅಮೆರಿಕಾ ಈ ಕೆರಿಬಿಯನ್ ದ್ವೀಪದ ಸಮೀಪಕ್ಕೆ ಅಮೆರಿಕಾ ವಿಮಾನವಾಹಕ ನೌಕೆ ಯುಎಸ್‌ಎಸ್ ಕಾರ್ಲ್ ವಿನ್ಸನ್ ಅನ್ನು ರವಾನಿಸಿದೆ. ಇದು ಔಷಧ ಸಾಮಗ್ರಿ, ಆಹಾರ ಪದಾರ್ಥಗಳನ್ನು ತಂದಿದೆ. ಆದರೆ ಇದು ಹೈಟಿಯ ಸಂತ್ರಸ್ತ ಜನರಿಗಾಗಿ ಅಲ್ಲ, ಅಮೆರಿಕಾದ ಸೈನಿಕರು ಮತ್ತು ನಾಗರಿಕರ ಪ್ರಯೋಜನಕ್ಕಾಗಿ. ನೆರೆಯ ರಾಷ್ಟ್ರಗಳಾದ ಕ್ಯೂಬಾ ಮತ್ತು ವೆನೆಜುವೇಲ ಹಾಗೂ ಇತರ ದಕ್ಷಿಣ ಅಮೆರಿಕಾದ ದೇಶಗಳು ನೆರವು ನೀಡಿವೆ. ಕ್ಯೂಬಾ ವೈದ್ಯಕೀಯ ಸೇವೆಗಾಗಿ ನೂರಾರು ವೈದ್ಯರನ್ನು ರವಾನಿಸಿದೆ. ಆದರೆ ಅಮೆರಿಕಾ ಈ ದೇಶಗಳ ನೆರವಿಗೆ ಅಡ್ಡಗಾಲು ಹಾಕುತ್ತಿದೆ. ಹೈಟಿಯಲ್ಲಿ ಶಾಂತಿ ಕಾಪಾಡಲು ಈಗಾಗಲೇ ವಿಶ್ವಸಂಸ್ಥೆಯ ಸೇನೆ ಇದೆ, ಅಮೆರಿಕನ್ ಯೋಧರ ಅಗತ್ಯ ಖಂಡಿತ ಇಲ್ಲ. ಆದ್ದರಿಂದ ಕೂಡಲೇ ಅಮೆರಿಕಾ ಈ ದ್ವೀಪದಿಂದ ತನ್ನ ಸೇನೆಯನ್ನು ಹಿಂದಕ್ಕೆ ಕರೆಸಿಕೊಳ್ಳಬೇಕು. ಯಾವುದೇ ರೀತಿಯಲ್ಲೂ ಈ ದ್ವೀಪ ಅಮೆರಿಕಾದ ಆಕ್ರಮಣದಿಂದ ದೂರವಾಗಬೇಕಾಗಿದೆ. ಅದಕ್ಕಾಗಿ ನಾಗರಿಕ ಜಗತ್ತು ಒತ್ತಾಯ ತರಬೇಕು.

## ಲುಮುಂಬಾನ ನಾಡು ಇಂದು ಬೆಂಗಾಡು

ಬೆಲ್ಜಿಯನ್ ವಸಾಹತು ಆಗಿದ್ದು, ಶೋಷಣೆ, ದೌರ್ಜನ್ಯಗಳಿಗೆ ಈಡಾಗಿ, ನೈಸರ್ಗಿಕ ಸಂಪತ್ತು ಲೂಟಿಯಾಗಿ ವಿನಾಶದ ಅಂಚಿನಲ್ಲಿದ್ದ ಆಫ್ರಿಕಾ ಖಂಡದ ದೊಡ್ಡ ದೇಶ ಕಾಂಗೋ ಇಪ್ಪತ್ತನೇ ಶತಮಾನದ ನಡುವಿನಲ್ಲಿ ಸ್ವತಂತ್ರ ರಾಷ್ಟ್ರ. ಸ್ವಾತಂತ್ರ್ಯದ ಸವಿ ಉಂಡದ್ದು ತೀರಾ ಕಡಿಮೆ ಕಾಲ. ದೇಶದಲ್ಲಿ ನಡೆದ ಮಹಾಚುನಾವಣೆಗಳ ನಂತರ ಅಧಿಕಾರದ ಸೂತ್ರ ವಹಿಸಿಕೊಂಡ ಪ್ಯಾಟ್ರಿಸ್ ಲುಮುಂಬಾ ಕನಸು ಕಂಡದ್ದು ಸಮಾಜವಾದಿ ಸಮಾಜದ ಸೃಷ್ಟಿ. ಬೆಲ್ಜಿಯಮ್ ವಸಾಹತುಶಾಹಿಗಳ ಉದ್ದೇಶವೇ ಬೇರೆ. ಆರ್ಥಿಕ ಹಿಡಿತವನ್ನು ಭದ್ರಗೊಳಿಸಿಕೊಳ್ಳಲು ಎತ್ತಿಕಟ್ಟಿದ್ದು ಪ್ರತ್ಯೇಕವಾದಿಗಳನ್ನು. ಈ ಅವಾಂತರದಲ್ಲಿ ಬಲಿಯಾದ್ದು ಪ್ಯಾಟ್ರಿಸ್ ಲುಮುಂಬಾ, ಅದೂ ಅತ್ಯಂತ ಕ್ರೂರವಾದ ರೀತಿಯಲ್ಲಿ ಛಿದ್ರಗೊಂಡಿದ್ದು, ಅಂತರ್ಯುದ್ಧದಲ್ಲಿ ಮುಳುಗಿದ್ದು ಕಾಂಗೋ ದೇಶ. ಏತನ್ಮಧ್ಯೆ ಕಾಂಗೋ ಶೀತಯುದ್ಧದ ಕಣ. ಆಗ ಪ್ರಾರಂಭವಾದ ದುರಂತ ಇಂದೂ ಮುಂದುವರಿಯುತ್ತಿದೆ. ದೇಶ ಇಬ್ಭಾಗವಾಗಿದ್ದರೂ, ಪರಿಸ್ಥಿತಿ ಒಂದೇ ರೀತಿ. ಇಲ್ಲಿನ ನೈಸರ್ಗಿಕ ಸಂಪತ್ತು-ಕೋಬಾಲ್ಟ್, ತಾಮ್ರ, ಕ್ಯಾಡ್ಮಿಯಮ್, ಕಚ್ಚಾ ತೈಲ, ವಜ್ರ–ಪಾಶ್ಚಾತ್ಯ ಸಾಮ್ರಾಜ್ಯಶಾಹಿಗಳಿಗೆ ಆಕರ್ಷಣೆ ಇವತ್ತಿಗೂ. ನಾನಾ ಬುಡಕಟ್ಟುಗಳ ಈ ನಾಡು ಬಾಹ್ಯಪ್ರೇರಣೆಯಿಂದ ಪರಸ್ಪರ ಸೆಣಸಾಟದಲ್ಲಿ ತೊಡಗಿರುವುದರಿಂದ ಲಾಭ ಹೊರಗಿನವರಿಗೆ, ಜನಸಾಮಾನ್ಯರ ಪಾಲಿಗೆ ಬಡತನದ ಬವಣೆ, ಸಾವು ನೋವು. ಒಂದು ಅಂದಾಜಿನ ಪ್ರಕಾರ ೨೦೦೭ರವರೆಗೆ ಕಾಂಗೋ ಯುದ್ಧದಲ್ಲಿ ಮಡಿದವರ ಸಂಖ್ಯೆ ೫.೪ ಮಿಲಿಯ. ಕೊಲೆ, ಸುಲಿಗೆ, ಮಾನಭಂಗ ಜನರ ಪಾಲಿಗೆ ದಿನನಿತ್ಯದ ಪಾಡು. ಪ್ರತಿತಿಂಗಳೂ ಈ ವೈಮನಸ್ಯದಿಂದಾಗಿ ೪೫,೦೦೦ ಜನ ಸಾವನ್ನಪ್ಪುತ್ತಿದ್ದಾರೆ ಎಂದು ಲೆಕ್ಕ ಹಾಕಲಾಗಿದೆ. ಪ್ರಪಂಚದ ಸುದ್ದಿ ಮಾಧ್ಯಮಗಳು ಈ ಹತ್ಯಾಕಾಂಡದ ಬಗ್ಗೆ ಗಮನ ಹರಿಸದೇ ಹೋಗಿವೆ. ಇದು ನಿಜವಾಗಿಯೂ ಶೋಚನೀಯ. ಹೀಗೆಯೇ ಮುಂದುವರಿದಲ್ಲಿ ಈ ದೇಶದಲ್ಲಿ ಉಳಿಯುವುದೇನು ?

ಆಫ್ರಿಕಾಖಂಡವನ್ನು ಕತ್ತಲೆಯ ಖಂಡ ಎಂದು ಒಂದು ಕಾಲದಲ್ಲಿ ಬಣ್ಣಿಸುತ್ತಿದ್ದರು. ಈಗಲೂ ಹಾಗೆಯೇ ಇದೆ ಎಂದು ತೋರುತ್ತಿದೆ. ಏಕೆಂದರೆ ಆ ಖಂಡದ ಬಹುಭಾಗ ದೇಶಗಳಲ್ಲಿನ ವಿದ್ಯಮಾನಗಳು ಪತ್ರಿಕೆಗಳಲ್ಲಿ ಮಾಧ್ಯಮಗಳಲ್ಲಿ ಪ್ರಕಟವಾಗುವುದೇ ಇಲ್ಲ. ದೊಡ್ಡ ದುರಂತವೊಂದು ಸಂಭವಿಸಿದಾಗ ಮಾತ್ರ ವರದಿಯಾಗುತ್ತದೆ. ಹೊರಗಿನವರ ಹಸ್ತಕ್ಷೇಪ ತಡೆಗಟ್ಟುವುದರ ಜೊತೆಗೆ ಅಂತರ್ಯುದ್ಧವನ್ನು ನಿಲ್ಲಿಸಿ, ಶಾಂತಿಸ್ಥಾಪನೆಗೆ ಕ್ರಮ ಕೈಗೊಳ್ಳುವುದು ಅಗತ್ಯ.

ನಾಗರಿಕ ಜಗತ್ತು ಇತ್ತ ಗಮನಹರಿಸಿ ಕ್ರಮ ತೆಗೆದುಕೊಳ್ಳಬೇಕಾಗಿದೆ. ವಿಶ್ವಸಂಸ್ಥೆ ಈ ವಿಷಯದಲ್ಲಿ ನಿಷ್ಕ್ರಿಯವಾಗಿದೆ. ಅದು ಎಚ್ಚೆತ್ತುಕೊಂಡು ಸೂಕ್ತ ಕ್ರಮ ಕೈಗೊಳ್ಳಲಿ.

ಸೀಯಾರ್ಕೆ

'ಚೌಬೀನ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ ಬೆಂಗಳೂರು -೫೬೦ ೦೮೫




# ನಡೆದಿರದ ಸಭೆಯ ಗುಪ್ತ ವರದಿ

**ಶಾ**ಸಕಾಂಗದ ಮುಖ್ಯಸ್ಥರಾದ ಸನ್ಮಾನ್ಯ ಮುಖ್ಯ ಮಂತ್ರಿಗಳು 'ಕೈ ಕಡಿಯಿರಿ', 'ನಾಲಿಗೆ ಕೀಳಿರಿ' ಎಂದು ಆಜ್ಞೆ ಹೊರಡಿಸಿದ ವಿಚಾರ ತಮಗೆಲ್ಲ ತಿಳಿದೇ ಇದೆ. ಶಾಸನ ಗಳನ್ನು ಜಾರಿಗೆ ತರುವುದಕ್ಕೆ ಇರುವ ಕಾರ್ಯಾಂಗದ ಉನ್ನತ ಅಧಿಕಾರಿಗಳ ಸಭೆ ಈ ವಿಚಾರದ ಬಗ್ಗೆ ಸಮಗ್ರವಾಗಿ ಗಂಭೀರ ಚರ್ಚೆ ನಡೆಸಿದ ಬಗ್ಗೆ ಒಂದು ವರದಿ ಇಲ್ಲಿದೆ :

ಮುಖ್ಯ ಮಂತ್ರಿಗಳ ಆಜ್ಞೆಯನ್ನು ಶೀಘ್ರವಾಗಿ, ಪರಿಣಾಮಕಾರಿಯಾಗಿ ಜಾರಿಗೆ ತರುವುದರ ಬಗ್ಗೆ ವಿವಿಧ ಇಲಾಖೆಗಳ ಮುಖ್ಯಸ್ಥರ ಸಭೆಯಲ್ಲಿ ಗಂಭೀರವಾಗಿ ಚರ್ಚಿಸಲಾಯಿತು. ಇದನ್ನು ಜಾರಿಗೆ ತರುವ ಹೊಣೆ ಪೊಲೀಸ್ ಇಲಾಖೆಯದ್ದು, ಯಾಕೆಂದರೆ ಕಾನೂನು, ಸುವ್ಯವಸ್ಥೆ ಪಾಲನೆ ಜವಾಬ್ದಾರಿ ಅದರದ್ದೆ ಎಂದು ಅನೇಕ ಅಧಿಕಾರಿಗಳು ಪ್ರತಿಪಾದಿಸಿದರು. ಪೊಲೀಸ್ ಇಲಾಖೆ ಮುಖ್ಯಸ್ಥರಿಂದ ತೀವ್ರ ಆಕ್ಷೇಪ ವ್ಯಕ್ತವಾಯಿತು. ಗೃಹ ಮಂತ್ರಿಗಳು ಈಗಾಗಲೇ ಸ್ಪಷ್ಟಪಡಿಸಿದ್ದಾರೆ. ರಾಜ್ಯದಲ್ಲಿ ಎಷ್ಟು ಮನೆ, ಮಠ, ದೇವಸ್ಥಾನ, ಚರ್ಚು, ಮಸೀದಿಗಳಿವೆ ಅವುಗಳನ್ನೆಲ್ಲ ಕಾಪಾಡಲು ಅಲ್ಲ ಪೊಲೀಸರಿರುವುದು ಅಂತ ಅಂಕಿ-ಅಂಶಗಳ ಸಮೇತ ವಿವರಿಸಿದ್ದಾರೆ. ಪೊಲೀಸರಿರುವುದು ಮಂತ್ರಿಗಳನ್ನು ಕಾಯುವುದು, ಚಳುವಳಿಕಾರರು, ರೈತರ ಮೇಲೆ ಲಾಠಿಚಾರ್ಜು, ಗೋಲೀಬಾರ್ ಮಾಡುವಂತಹ ಸಣ್ಣಪುಟ್ಟ ಕೆಲಸಗಳಿಗೆ ಹಾಗೂ ಹೆಲ್ಮೆಟ್ ಹಾಕದವರು, ಸಿಗ್ನಲ್ ಗೆರೆ ದಾಟಿದವರು ಮುಂತಾದವರನ್ನು ಹಿಡಿದು ದಂಡ ಹಾಕುವಂಥ ಗಂಭೀರ ಕೆಲಸಗಳನ್ನು ಮಾಡಲು. ಆದ್ದರಿಂದ ನಾಲಿಗೆ ಕೀಳುವ, ಕೈ ಕಡಿಯುವ ಕೆಲಸಗಳನ್ನು ನಮ್ಮ ಇಲಾಖೆ ವಹಿಸಿಕೊಳ್ಳಲು ಸಾಧ್ಯವಿಲ್ಲ. ಅದೂ ಅಲ್ಲದೆ ಈ ಕರ್ತವ್ಯಗಳನ್ನು ನಿರ್ವಹಿಸಲು ಇಲಾಖೆಯಲ್ಲಿ ಸೂಕ್ತ ಉಪಕರಣಗಳ್ಯಾವುವೂ ಇಲ್ಲ ಎಂದು ಪೊಲೀಸ್ ಇಲಾಖೆಯ ಮುಖ್ಯಸ್ಥರು ವಿವರಿಸಿದರು. (ಇದು ನಾಗರಿಕ ಕಾನೂನಲ್ಲ. ಆದ್ದರಿಂದ ಅರಣ್ಯ ಇಲಾಖೆಗೆ ಈ ಜವಾಬ್ದಾರಿ ವಹಿಸಬೇಕೆಂಬ ಒಬ್ಬ ತಲೆಹರಟೆ ಅಧಿಕಾರಿ ನೀಡಿದ ಸಲಹೆಯನ್ನು ಹಾಗೂ ಅದರ ವಿವರಗಳನ್ನು ಕಡತದಿಂದ ತೆಗೆದುಹಾಕಲಾಯಿತು ಮತ್ತು ಅವನನ್ನು ಸಭೆಯಿಂದ ಹೊರಹಾಕಲಾಯಿತು.)

ಸರಕಾರಿ ವೈದ್ಯಕೀಯ ಇಲಾಖೆಗೆ ಈ ಕರ್ತವ್ಯ ವಹಿಸಿದರೆ ಆ ಇಲಾಖೆಯಲ್ಲಿ ಸೂಕ್ತ ಉಪಕರಣಗಳು ಇರುವುದರಿಂದ ಅವರು ದಕ್ಷತೆಯಿಂದ ಈ ಕಾರ್ಯ ನಿರ್ವಹಿಸಬಹುದು ಎಂದು ಸೂಚಿಸಿದರು. ಇದಕ್ಕೆ ಆಕ್ಷೇಪ ವ್ಯಕ್ತಪಡಿಸಿದ ವೈದ್ಯಕೀಯ ಇಲಾಖೆ ಮುಖ್ಯಸ್ಥರು, 'ಆರೋಗ್ಯವಂತ ಅಂಗಾಂಗಗಳನ್ನು ಕೀಳುವುದು, ಕತ್ತರಿಸುವುದು ತಮ್ಮ ವ್ಯಾಪ್ತಿಯಲ್ಲಿ ಬರುವುದಿಲ್ಲ. ಅದೂ ಅಲ್ಲದೆ ಅಂಥ 'ಅಪರಾಧಿಗಳನ್ನು' ಹಿಡಿದು ಆಸ್ಪತ್ರೆಗೆ ತರುವುದು ತಮ್ಮ ವ್ಯಾಪ್ತಿಗೆ ಬರುವುದಿಲ್ಲ' ಎಂದು ತಿಳಿಸಿದರು. ಅವರು ಆರೋಗ್ಯವಂತರೋ ಅಲ್ಲವೋ ಎಂದು ಮುಖ್ಯಮಂತ್ರಿಗಳು ನಿರ್ಧರಿಸುವುದರಿಂದ ವೈದ್ಯರು ಅದರ ಬಗ್ಗೆ ತಲೆ ಡಿಸಿಕೊಳ್ಳಬೇಕಾಗಿಲ್ಲ. ಇದರಿಂದ ಸರ್ಕಾರದ ಆರೋಗ್ಯ ಕಾಪಾಡಲು ಸಾಧ್ಯವಾಗುವುದರಿಂದ ಇದು ಆರೋಗ್ಯ ಇಲಾಖೆಯ ವ್ಯಾಪ್ತಿಗೇ ಬರುತ್ತದೆ. ಅಲ್ಲದೇ ಇದು ಆಪರೇಷನ್‌ನಿಂದ ಹುಟ್ಟಿ, ಆಪರೇಷನ್‌ನಿಂದಲೇ ಬದುಕುತ್ತಿರುವ ಸರಕಾರವಾದ್ದರಿಂದ ಇದನ್ನೂ ನಾಲಿಗೆ, ಕೈ ಆಪರೇಷನ್ ಎಂದು ಪರಿಗಣಿಸಲಾಗುತ್ತದೆ ಎಂದು ಮುಖ್ಯ ಅಧಿಕಾರಿಗಳು ತಿಳಿಸಿದರು.

ಆದರೆ ಸರಕಾರಿ ವೈದ್ಯರ ಕೊರತೆ ಇರುವುದರಿಂದ ಖಾಸಗಿಯವರಿಗೆ ವಹಿಸಿದರೆ ಖಾಸಗಿ ಸಂಸ್ಥೆಗಳು ಇದನ್ನು ಹೆಚ್ಚು ಪರಿಣಾಮಕಾರಿಯಾಗಿ, ದಕ್ಷತೆಯಿಂದ ನಿರ್ವಹಿಸಬಲ್ಲವು ಎಂದು ಮತ್ತೊಬ್ಬ ಅಧಿಕಾರಿ ಅಭಿಪ್ರಾಯ ವ್ಯಕ್ತಪಡಿಸಿದರು. ಹಾಗೆಯೇ ಭದ್ರತೆಗೆ ಖಾಸಗಿ ವ್ಯವಸ್ಥೆ ಮಾಡಿಕೊಳ್ಳಬೇಕೆಂದು ಗೃಹ ಮಂತ್ರಿಗಳು ಹೇಳಿರುವಂತೆ ಇಂಥವರನ್ನು ಹಿಡಿದು ಆಸ್ಪತ್ರೆಗೆ ಸೇರಿಸಲು ಖಾಸಗೀ ಸೇವಾ 'ಸಂಘ' ಸಂಸ್ಥೆಗಳನ್ನು ನೇಮಿಸಿಕೊಂಡು ಸರಕಾರ ಅದಕ್ಕೆ ಅನುದಾನ ನೀಡಬಹುದು ಎಂಬ ಅಭಿಪ್ರಾಯವನ್ನು ಮತ್ತೊಬ್ಬ ಅಧಿಕಾರಿ ತಿಳಿಸಿದರು.

ಮುಖ್ಯ ಮಂತ್ರಿಗಳ ಪಕ್ಷದವರೇ ಅವರ ವಿರುದ್ಧ ಮಾತನಾಡಿದರೆ ಅವರ ನಾಲಿಗೆಗಳನ್ನೂ ಕೀಳಬೇಕೆ ? ಏಕೆಂದರೆ ವಿರೋಧ ಪಕ್ಷದವರಿಗಿಂತ ಅವರ ಪಕ್ಷದವರೇ ಅವರ ವಿರುದ್ಧ ಹೆಚ್ಚು ಟೀಕೆ ಮಾಡುತ್ತಿದ್ದಾರೆ, ಎಂಬ ಅನುಮಾನ ವ್ಯಕ್ತವಾಯಿತು. ಮುಖ್ಯಮಂತ್ರಿಗಳ ವಿರುದ್ಧ ಮಾತನಾಡುವ ಟಿವಿ ಚಾನೆಲ್‌ಗಳ ನಾಲಿಗೆಯನ್ನೂ ಕೀಳಬೇಕೆ ? ಅವರ ವಿರುದ್ಧ ಬರೆದರೆ ಅಂಥ ಪತ್ರಕರ್ತರ ಕೈ ಕತ್ತರಿಸಬೇಕೆ ? ಒಂದೇ ತಪ್ಪಿಗೆ ಬೇರೆ ಬೇರೆ ಶಿಕ್ಷೆ ನೀಡಿದರೆ ಕಾನೂನಿನ ತೊಡಕೇನೂ ಉಂಟಾಗದೆ ? ಇವೆಲ್ಲದರ ಬಗ್ಗೆ ಕೆಲವು ಅಧಿಕಾರಿಗಳು ಸ್ಪಷ್ಟೀಕರಣವನ್ನು ಕೇಳಿದರು. ಸನ್ಮಾನ್ಯ ಮು.ಮಂ.ಗಳನ್ನು ಸಂಪರ್ಕಿಸಿ, ನಾಲಿಗೆ ಕೀಳುವ, ಕೈ ಕತ್ತರಿಸುವ ಕಟ್ಟಾಜ್ಞೆ ಜತೆಗೆ ಕಾಲುಗಳನ್ನು ಯಾಕೆ ಮುರಿಯಬೇಕು, ಕಣ್ಣುಗಳನ್ನು ಏಕೆ ಕೀಳಬೇಕು, ಎಂಬ ಬಗ್ಗೆ ಸ್ಪಷ್ಟನೆ ಪಡೆದು ಸಮಗ್ರ ಈಶ್ವರಾಜ್ಞೆ ಹೊರಡಿಸಲಾಗುವುದು ಎಂದು ಮುಖ್ಯ ಅಧಿಕಾರಿ ತಿಳಿಸಿದರು. ಎಂಬಲ್ಲಿಗೆ ಊಟದ ಸಮಯವಾದ್ದರಿಂದ ಸಭೆ ಅಲ್ಲಿಗೆ ಮುಕ್ತಾಯವಾಯಿತು.

(ಸ್ಪಷ್ಟನೆ : ಆ ರಾಜ್ಯಪಾಲರ ಹತ್ರ ಹೋಗಬೇಡ್ರೀ, ಅವರು ರಾಜಕೀಯ ಮಾಡ್ತಾರೆ. ನಿಮಗೆ ಏನು ಬೇಕಿದ್ರೂ ತಗೊಂಬನ್ನಿ, ಅದೆಷ್ಟು ಸೈನ್ ಬೇಕೋ ನಾನು ಹಾಕಿ ಕೊಡ್ತೀನಿ. ಇನ್ನು ಮುಂದೆ ಈ ರಾಜ್ಯದಲ್ಲಿ ಸುಗ್ರೀವಾಜ್ಞೆ ಬೇಡ,

## ಮಿಸ್ ಸಂಪತ್

**ಇ**ತ್ತೀಚೆಗೆ ನಮ್ಮನ್ನಗಲಿದ ಶ್ರೀಮತಿ ರುಕ್ಮಾಯಿ ಅವರು ಸಾಹಿತ್ಯ ಕ್ಷೇತ್ರದಲ್ಲಿ ಅನುವಾದ ಸಾಹಿತ್ಯದ ಮೂಲಕ ಪರಿಚಿತರಾಗಿದ್ದು, ಬಹುಸಂಖ್ಯೆಯಲ್ಲಿ ತೆಲುಗು ಕಾದಂಬರಿಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಮಿಸ್ ಸಂಪತ್ ಎಂಬುದು ಸಾಹಿತ್ಯದಲ್ಲಿ ಪರಿಚಯಕ್ಕಾಗಿ ಇರಿಸಿಕೊಂಡ ಹೆಸರಾಗಿತ್ತು. ಕಳೆದ ವರ್ಷವಷ್ಟೇ ನವಕರ್ನಾಟಕ ಪ್ರಕಾಶನದ ಸುವರ್ಣ ಸಂಭ್ರಮದ ಅಂಗವಾಗಿ ಬಿಡುಗಡೆಗೊಂಡ ''ವನಿತಾ ಚಿಂತನ ಮಾಲೆ''ಗಾಗಿ 'ಆಕಾಶಂಲೊ ಸಗಂ' ಎಂಬ ತೆಲುಗಿನ ಪ್ರಸಿದ್ಧ ಕಾದಂಬರಿಯೊಂದನ್ನು **ಉಷೋದಯ** ಎಂಬ ಹೆಸರಲ್ಲಿ ಅವರು ಅನುವಾದಿಸಿ ಕೊಟ್ಟಿದ್ದರು. ಐಟಿಐನಲ್ಲಿ ಉದ್ಯೋಗಿ, ಅಂದಿನ ಮಹಾನಗರ ಪಾಲಿಕೆಯಲ್ಲಿ ಕಾಂಗ್ರೆಸ್ ಸದಸ್ಯೆ (ಮಲ್ಲೇಶ್ವರ ಕ್ಷೇತ್ರ) ಹಾಗೂ ಮಹಿಳಾ ಕ್ಷೇಮಾಭಿವೃದ್ಧಿ ಅಧಿಕಾರಿ – ಹೀಗೆ ಸದ್ದಿಲ್ಲದೆ ತಮ್ಮ ಕಾರ್ಯಕ್ಷೇತ್ರಗಳಲ್ಲಿ ದುಡಿಯುತ್ತಿದ್ದ ಅವರು ವಿಶೇಷವಾಗಿ ಮಹಿಳೆಯರ ಏಳಿಗೆಗಾಗಿ ಶ್ರಮಿಸಿದ್ದಾರೆ. ಅವರಿಗೆ 'ನವಕರ್ನಾಟಕ ಪ್ರಕಾಶನ' ಮತ್ತು 'ಹೊಸತು' ಪತ್ರಿಕೆ ಗೌರವವನ್ನು ಸಲ್ಲಿಸುತ್ತವೆ.





ಸುಖದ ಸ್ವರ್ಗದಲ್ಲಿದ್ದಾಗ ಈ ಗಾನ ಅವರನ್ನು ಸಹಜ ಬದುಕಿನತ್ತ ನೋಡುವಂತೆ ಪ್ರೇರೇಪಿಸುತ್ತದೆ.

ನೃತ್ಯ, ಸಂಗೀತ, ಚಿತ್ರಕಲೆ, ನಾಟಕ, ಸಾಹಿತ್ಯ – ಎಲ್ಲವೂ ಬದುಕಿಗೊಂದು ಮೆರುಗನ್ನು ನೀಡುತ್ತವೆ. ಬಾಲ್ಯದಲ್ಲಿ ಈ ಕಲೆಗಳು ಬದುಕಿನ ಸಂಭ್ರಮವನ್ನು, ವೈವಿಧ್ಯಮಯ ಅನುಭವಗಳನ್ನು ಪರಿಚಯಿಸಿಕೊಟ್ಟರೆ, ಯೌವನದ ಉದ್ರೇಕಕಾರಿ ಕ್ಷಣಗಳಲ್ಲಿ ಸಮಚಿತ್ತವನ್ನು ತಂದುಕೊಡುತ್ತವೆ, ವೃದ್ಧಾಪ್ಯದಲ್ಲಿ ಜೀವನೋತ್ಸಾಹವನ್ನೂ ಚಿತ್ತಶಾಂತಿಯನ್ನೂ ನೀಡುತ್ತವೆ.

ಹದಿನೆಂಟರಲ್ಲಿ ಎಲ್ಲರೂ ಕವಿಗಳೇ – ಎಂಬ ಮಾತಿದೆ. ಹದಿಹರೆಯದ ಕಲ್ಪನೆ, ಕನಸುಗಾರಿಕೆ, ಆದರ್ಶ, ಉತ್ಸಾಹದಲ್ಲಿ ಕವಿಮನಸ್ಸು ಅರಳುತ್ತದೆ. ಆದರೆ, ನಂತರದಲ್ಲಿ ಉದ್ಯೋಗ, ಮದುವೆ, ಹೆಂಡತಿ-ಮಕ್ಕಳು, ಭಡ್ತಿ, ಆಸ್ತಿ – ಹೀಗೆ ಬದುಕು ಬೇರೆ ಕಡೆಗೆ ತಿರುಗಿಕೊಳ್ಳುತ್ತದೆ. ಇವೆಲ್ಲದರ ಮಧ್ಯದಲ್ಲೂ ಮೋಹನ ಮುರಳಿಯ ಗಾನ ಕೆಲವರಿಗೆ ಕೇಳಿಸುತ್ತಿರುತ್ತದೆ. ಅವರ ಕನಸುಗಾರಿಕೆ ಬತ್ತಿಹೋಗುವುದಿಲ್ಲ, ಆದರ್ಶಗಳು ಮಾಯವಾಗುವುದಿಲ್ಲ, ಅತೃಪ್ತಿ ಸಣ್ಣಗೆ ಕೊರೆಯುತ್ತಿರುತ್ತದೆ, ತಹತಹ-ಹಂಬಲ ಬೆಳೆಯುತ್ತ ಹೋಗುತ್ತದೆ. ಆತ ಕಲಾವಿದನಾಗುತ್ತಾನೆ, ಸಾಹಿತಿಯಾಗುತ್ತಾನೆ, ನಟನಾಗುತ್ತಾನೆ, ನಿರ್ದೇಶಕನಾಗುತ್ತಾನೆ. ಅಭಿವ್ಯಕ್ತಿಗಾಗಿ ಸದಾ ಹಂಬಲಿಸುತ್ತಾನೆ.

ಹಲವರು ತಮ್ಮ ನಡುವಯಸ್ಸಿನವರೆಗೂ ಸಂಸಾರ-ವ್ಯವಹಾರ ಎಂಬ ಭರಾಟೆಯಲ್ಲಿದ್ದು, ಇದ್ದಕ್ಕಿದ್ದಂತೆ ಒಂದು ದಿನ ಮೋಹನ ಮುರಳಿಯ ಗಾನ ಕೇಳಿ ಬೆಚ್ಚಿಬೀಳುತ್ತಾರೆ. ಆನಂತರ, ತಮ್ಮ ನಡುವಯಸ್ಸಿನಲ್ಲಿ ಬರೆಯಲು ಆರಂಭಿಸುತ್ತಾರೆ, ನೃತ್ಯ ಕಲಿಯುತ್ತಾರೆ, ಸಂಗೀತ ಕಲಿಯುತ್ತಾರೆ, ಚಿತ್ರಕಲೆಯ ಅಭ್ಯಾಸ ಮಾಡುತ್ತಾರೆ. ಪ್ರಪಂಚದ ಹಲವು ಮಹಾನ್ ಕಲಾವಿದರು ಈ ರೀತಿಯಲ್ಲೇ ರೂಪಗೊಂಡವರು.

ಮನುಷ್ಯ ಕೇವಲ ದೇಹವಲ್ಲ, ಆತನಿಗೊಂದು ಮನಸ್ಸಿದೆ, ಬುದ್ಧಿಯಿದೆ, ಹೃದಯವಿದೆ,

# ‘ಯಾವ ಮೋಹನ ಮುರಳಿ...’

‘ಯಾವ ಮೋಹನ ಮುರಳಿ ಕರೆಯಿತೊ ದೂರ ತೀರಕೆ ನಿನ್ನನೂ...’

- ಹೀಗಿದೆ ಅಡಿಗರದ್ದೊಂದು ಪ್ರಖ್ಯಾತ ಕವನ.

ಯಾವುದದು ಗಾನ ನಮ್ಮನ್ನೆಲ್ಲ ಈ ಬದುಕಿನ ಬವಣೆಯನ್ನೆಲ್ಲ ಬದಿಗೊತ್ತಿ ಇನ್ನ್ಯಾವುದೋ ದೂರ ತೀರಕೆ ಕರೆಯುತ್ತಿರುವುದು ? ಹಲವರಿಗೆ ಈ ಗಾನ ಕೇಳಿಸುತ್ತದೆ... ಆಗ ಈ ಬದುಕಿನ ವ್ಯವಹಾರ, ಹಣ, ಆಸ್ತಿಗಳ ವ್ಯಾಮೋಹ ಕಳೆದು ಅನೂಹ್ಯವಾದ ಗುರಿಯೊಂದರ ಕಡೆಗೆ ಬದುಕು ಚಲಿಸಲಾರಂಭಿಸುತ್ತದೆ.

ಈ ಗಾನ ಕೇಳಿಸಿದಾಗ, ಮನದೊಳಗೆ ಅತೃಪ್ತಿ ಹೊಗೆಯಾಡುತ್ತದೆ. ದಿನನಿತ್ಯದ ಬದುಕಿನ ಜಂಜಾಟ, ವೈಮನಸ್ಯ, ದ್ವೇಷ, ಹಿಂಸೆಗಳೆಲ್ಲ ಅಸಹ್ಯವೆನಿಸಿ, ಬೆಳಕೊಂದನ್ನು ಹಿಡಿಯಲು ಮನಸ್ಸು ಕಾತರಿಸುತ್ತದೆ.

ಈ ಸುಮಧುರ ಗಾನದ ಗುಂಗು, ಹೊಗೆಯಾಡುವ ಅತೃಪ್ತಿ – ಇವೇ ಎಲ್ಲ ಕಲೆಗಳ ಮೂಲ. ಕಲಾವಿದ ಸತ್ಯ ಮತ್ತು ಸೌಂದರ್ಯದ ಆರಾಧಕ. ಬದುಕಿನ ಸೌಂದರ್ಯವನ್ನು ತನ್ನ ಕಲಾಕೃತಿಯಲ್ಲಿ ಕಡೆದಿಟ್ಟು ಕ್ಷಣಿಕವಾದ ಕ್ಷಣಗಳನ್ನು ಶಾಶ್ವತಗೊಳಿಸುತ್ತಾನೆ.

ದೇವರನ್ನು ಸೃಷ್ಟಿಸಿದವನೂ ಮನುಷ್ಯನೇ. ಪ್ರಕೃತಿಯ ವಿರಾಟ್ ಸ್ವರೂಪದೆದುರು ವಿಹ್ವಲನಾದ ಮನುಷ್ಯ ದೇವರ ಕಲ್ಪನೆ ಮಾಡಿದ. ಆನಂತರ ದೇವರನ್ನು ಹಾಡಿ ಹೊಗಳುತ್ತ ಭಕ್ತಿ ಪರವಶನಾಗಿ ಕಾವ್ಯ ಸೃಷ್ಟಿಸಿದ, ಸಂಗೀತ ಸೃಷ್ಟಿಸಿದ, ನೃತ್ಯ ಸೃಷ್ಟಿಸಿದ, ತನ್ನ ಕಲ್ಪನೆಯನ್ನು ಕಲ್ಲಿನಲ್ಲಿ ಕಡೆದಿಟ್ಟ, ಬಣ್ಣಗಳಲ್ಲಿ ಅರಳಿಸಿದ.

ಬೇಟೆಯಾಡಿ ಕಾಡಿನಲ್ಲಿ ಬದುಕುತ್ತಿದ್ದ ಮನುಷ್ಯನಿಗೂ ಅಭಿವ್ಯಕ್ತಿಯ ಗುಂಗು... ಗುಹೆಗಳ ಕಲ್ಲು ಗೋಡೆಗಳಲ್ಲಿ ಬೇಟೆಯ ಚಿತ್ರಗಳನ್ನು ಕೆತ್ತಿದ. ಮನುಷ್ಯನಿಗೆ ಹಸಿವೆ, ನಿದ್ರೆ, ಮೈಥುನ – ಇವಿಷ್ಟೇ ಸಾಕಾಗುವುದಿಲ್ಲ. ಎಲ್ಲವನ್ನೂ ತನ್ನ ಕಲ್ಪನೆಯಲ್ಲಿ ಹಿಡಿದಿಡಬೇಕೆಂಬ ಅದಮ್ಯ ಬಯಕೆ ಇರುತ್ತದೆ.

ಮೋಹನ ಮುರಳಿಯ ಗಾನ ಕೇಳಿಸುವವರು ಸ್ವಪ್ನ ಜೀವಿಗಳು. ದುಃಖದ ಪಾತಾಳದಲ್ಲಿದ್ದಾಗ ಈ ಗಾನ ಅವರನ್ನು ಮೇಲಕ್ಕೆತ್ತುತ್ತದೆ.

ಸ್ಮರಣಶಕ್ತಿಯಿದೆ. ಆದ್ದರಿಂದಲೇ ಹಲವರು ತಮ್ಮ ಮನಸ್ಸಿನ ತೃಪ್ತಿಗಾಗಿ ಕಲೆಗಳ ಬೆನ್ನುಬೀಳುತ್ತಾರೆ. ಮನುಷ್ಯನ ಕನಸುಗಳಿಗೆ, ಮಹತ್ವಾಕಾಂಕ್ಷೆಗಳಿಗೆ ಮಿತಿಯಿಲ್ಲ. ಹಣ ಸಂಗ್ರಹಿಸಿ, ಆಸ್ತಿ ಸಂಗ್ರಹಿಸಿ ಸಾಕೆನ್ನಿಸಿದವರಿರಬಹುದು. ಆದರೆ, ಬರೆದು, ನಟಿಸಿ 'ಇನ್ನು ಸಾಕು' ಎನ್ನುವವರಿಲ್ಲ, ಬರೆದವನಿಗೆ ಮತ್ತೂ ಬರೆಯಬೇಕು, ನಟನಿಗೆ ಇನ್ನೂ ವೈವಿಧ್ಯಮಯ ಪಾತ್ರ ಮಾಡಬೇಕು ಎಂಬ ತಹ-ತಹ ಇರುತ್ತದೆ. ಇವರು ಸಂತೃಪ್ತರಾದರೂ, ಸದಾ ಅತೃಪ್ತರೇ.

ಕಲೆ, ಸಾಹಿತ್ಯದಿಂದ ಸಿಗುವ ಆನಂದ ಅಸೀಮವಾದದ್ದು. ಎಲ್ಲ ಕಲೆಯ ಗುರಿ ಮಾನವೀಯತೆ. ಕಲೆ ಹೃದಯ ಹೃದಯಗಳನ್ನು ಬೆಸೆಯುತ್ತದೆ. ಮಾಡುವವನಿಗೂ ನೋಡುವವನಿಗೂ ಅವಿನಾಭಾವ ಸಂಬಂಧವನ್ನು ಏರ್ಪಡಿಸುತ್ತದೆ. ಕಲೆಯ ಅನುಭವದಿಂದ ಮನುಷ್ಯ ಪರಿಪಕ್ವಗೊಳ್ಳುತ್ತ ಸಾಗುತ್ತಾನೆ. ಸಹನೆ, ಶಾಂತಿ, ತ್ಯಾಗ, ಪ್ರೀತಿಗಳಂತಹ ಗುಣಗಳು ಕಲೆಯ ಅಂತರಾಳ.

ನಕ್ಸಲೀಯರು, ಉಗ್ರವಾದಿಗಳು, ಆತಂಕವಾದಿಗಳಿಗೆ ಕನಸು-ನನಸುಗಳಲ್ಲಿ ಬಂದೂಕಿನ ಶಬ್ದವೇ ಕೇಳುತ್ತಿರಬೇಕು. ಹಾಗೆಂದೇ ಸಮಸ್ಯೆಗಳ ಪರಿಹಾರಕ್ಕೆ ಅವರು ಬಂದೂಕು ಎತ್ತುತ್ತಾರೆ, ರಕ್ತದ ರುಚಿಯನ್ನು ಸವಿಯುತ್ತಾರೆ, ಲೆಕ್ಕವಿಲ್ಲದಷ್ಟು ಶವಗಳನ್ನು ಬೀಳಿಸಿ ತಾವೂ ಶವವಾಗುತ್ತಾರೆ.

ಕಲೆಗಳು ಮನುಷ್ಯನಿಗೆ ಬಿಡುಗಡೆಯ ಅನುಭವವನ್ನು ನೀಡುತ್ತವೆ. ಜೀವನದಲ್ಲಿ ನಾವು ಹಲವು ರೀತಿಯ ಬಂಧನಗಳಿಗೊಳಗಾಗಿರುತ್ತೇವೆ. ಕೆಲವು ನಾವೇ ಸೃಷ್ಟಿಸಿಕೊಂಡ ಬಂಧನಗಳು, ಕೆಲವು ಪರಿಸ್ಥಿತಿಯ ಒತ್ತಡದಿಂದುಂಟಾದ ಬಂಧನಗಳು. ಇವೆಲ್ಲದರಿಂದ ಮುಕ್ತವಾಗಿ ಒಂದು ಕ್ಷಣ ಬಿಡುಗಡೆಯ ಅನುಭವ ಬೇಕೆಂದರೆ ಕಲೆಯನ್ನು ಆಸ್ವಾದಿಸಬೇಕು. ಆಗ ಬದುಕು ಸಹ್ಯವಾಗುತ್ತದೆ. ಜಂಜಾಟದ ಬದುಕಿನಲ್ಲಿ ಉಂಟಾಗುವ ಎಷ್ಟೋ ಮನೋರೋಗಗಳಿಗೆ ಕಲೆಗಳು ಮದ್ದಾಗಬಲ್ಲವು. ಕಲಾವಿದರನ್ನು ಗೌರವಿಸೋಣ, ಕಲೆಗಳನ್ನು ಉಳಿಸಿ ಬೆಳೆಸೋಣ. ಮೋಹನ ಮುರಳಿಯ ದನಿ ದೂರದಲ್ಲೆಲ್ಲೋ ಕೇಳುತ್ತಿದೆಯೇ ? ಅದನ್ನು ಕಿವಿಗೊಟ್ಟು ಆಲಿಸಿ.

**ಎಸ್. ಮಾಲತಿ**

'ಮಹಾಳಸ' ನಿಲಯ, ಜೋಗ್ ರಸ್ತೆ, ಸಾಗರ - ೫೭೭ ೪೦೧, ಶಿವಮೊಗ್ಗ ಜಿಲ್ಲೆ

**HOSATHU** Kannada Monthly / March 2010 Rs. 12
Regd. KRNA / BGE / 7 / 2009-2011. WPP No. 14. Posted at Bangalore PSO Mysore Road BG-26
on the 28th of every month Licenced to post without prepayment. RNI Regn. No. KARKAN/1999/614.